# ನವಕರ್ನಾಟಕ ಪ್ರಕಾಶನದ ಇತ್ತೀಚಿನ ಕೃತಿಗಳು



₹175



₹90



₹100



₹150



₹120



₹60



₹ 125



₹85



₹165



₹75



₹120



₹ 70

ಮೂರು ವರ್ಷದ 'ಹೊಸತು' ಚಂದಾದಾರರಿಗೆ
20% ಸೋಡಿ. ಇತರರಿಗೆ 10% ಸೋಡಿ.
ನಿವ್ವಳ ₹300ಕ್ಕಿಂತ ಕಡಿಮೆ ಮೊತ್ತದ ಬೇಡಿಕೆಗಳಿಗೆ
ಅಂಚೆ/ಕೊರಿಯರ್ ವೆಚ್ಚ ₹40 ಪ್ರತ್ಯೇಕ

ಆನ್‌ಲೈನ್ ಮೂಲಕವೂ ಲಭ್ಯ




www.navakarnataka.com

ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com http://navakarnataka.blogspot.in

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302

# ಹೊಸತು

ನೆಮ್ಮದಿಯ ನಾಳೆ ನಮ್ಮದು






**ಕನ್ನಡ ಸಾಹಿತ್ಯ ಪರಿಷತ್ತು ಶತಮಾನೋತ್ಸವ :**
**ಒಂದು ಅವಲೋಕನ** *ಕೋ. ಚೆನ್ನಬಸಪ್ಪ* ... ೫೨

**ನಾಮಕರಣಕ್ಕೆ "ನಾಮ"** *ಸೂರ್ಯದೇವ* ... ೨೩
**ಪ್ರಜಾಪ್ರಭುತ್ವ ಬ್ರಿಟಿಷ್ ಕಾಲದಲ್ಲಿ ಹಾದುಬಂದ ಒಂದು ಪರಿ**
*ಡಾ॥ ಎ. ಬಿ. ವಗ್ಗರ* ... ೩೧

**ಸ್ವಾತಂತ್ರ್ಯಾನಂತರದ ಭಾರತ – ೯ : ಪ್ರಧಾನಿಯ ಜನಪ್ರಿಯತೆ ಕುಸಿತ –**
**ತುರ್ತುಪರಿಸ್ಥಿತಿಯ ಕಪ್ಪು ಚುಕ್ಕೆ** *ಸಿ. ಆರ್. ಕೃಷ್ಣರಾವ್* ... ೧೯

**ಅಛೂತ್ ಕನ್ಯಾ ಮತ್ತು ಸುಜಾತಾ :**
**ಅಸ್ಪೃಶ್ಯತೆಯ ಭಿನ್ನ ನೋಟಗಳು** *ಡಾ॥ ಎಚ್. ಚಂದ್ರಶೇಖರ* ... ೪೯
**ಕುವೆಂಪು ನಾಟಕಗಳ ಸ್ತ್ರೀ ಪಾತ್ರಗಳು** *ರಾಮಲಿಂಗಪ್ಪ ಟಿ. ಬೇಗೂರು* ... ೨೫

**ಋಗ್ವೇದ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ** *ಜಿ. ರಾಮಕೃಷ್ಣ* ... ೧೩
**ಹಿಂದೂ ಧರ್ಮದ ವೈಲಕ್ಷಣ್ಯಗಳು** *ಎ. ಆರ್. ನಾರಾಯಣಘಟ್ಟ* ... ೪೦

**ಕರಗಿದ ಕೊರಗು** *ವಾಸುದೇವ ಶರ್ಮಾ* ... ೨೬
**ಕೆಲ ದೃಷ್ಟಾಂತ ಕತೆಗಳು** *ಖಲೀಲ್ ಗಿಬ್ರಾನ್*
*ಕನ್ನಡಕ್ಕೆ : ಡಾ॥ ಎಚ್. ಎಸ್. ಅನುಪಮಾ* ... ೩೪

**ಕಾವ್ಯಲೋಕ** ೬, ೨೪, ೩೯, ೪೨, ೫೧

**ಜಾನಪದ ಜಂಗಮ : ಡಾ॥ ಬಸವರಾಜ ಮಲಶೆಟ್ಟಿ**
*ಪ್ರಕಾಶ ಗಿರಿಮಲ್ಲನವರ* ... ೪೬

**ರೊಪ್ಪದವರ ಪಾಡು** *ಪರಂಜ್ಯೋತಿ* ... ೪೫

**ಅತ್ಯಾಚಾರವೂ ಅತಿರಂಜಿತ ಪ್ರಚಾರವೂ**
*ಡಾ॥ ಜಯಪ್ರಕಾಶ್ ಶೆಟ್ಟಿ ಹೆಚ್.* ... ೫೬

**ಕುಸ್ತಿ ಎಂಬ ಸಾಮಾಜಿಕ ಸಮನ್ವಯದ ಸಂಕೇತ** *ಪಿ. ಸಾಯಿನಾಥ್*
*ಅನುವಾದ : ಸಾಕ್ಷಿ* ... ೫೫

**ಅರೆಹೊಟ್ಟೆಯಲ್ಲಿ ಅತಿಥಿ ಉಪನ್ಯಾಸಕರು** *ಕೆ. ಎಸ್. ಜನಾರ್ಧನ* ... ೩೬

**ನಾನು ಓದಿದ ಪುಸ್ತಕ : 'ಎಂದಿಗೂ ಸಲ್ಲುವ ಮಾರ್ಕ್ಸ್'**
**ಮಾರ್ಕ್ಸ್‌ವಾದದ ಟೀಕಾಕಾರರಿಗೆ ಸಮಂಜಸ ಉತ್ತರ**
*ಮ. ಶ್ರೀ. ಮುರಳಿ ಕೃಷ್ಣ* ... ೬೦
**ವಿಶ್ವ ವೀಕ್ಷಣೆ : ಬ್ರಿಕ್ಸ್ ಬ್ಯಾಂಕ್ ಸ್ಥಾಪನೆ –**
**ಮಹತ್ವಪೂರ್ಣ ಬೆಳವಣಿಗೆ** *ಸೀಯಾರ್ಕೆ* ... ೪೪
**ನಭಾವಲೋಕನ : ಕೆಂಪು ನಕ್ಷತ್ರ ಮತ್ತು ಗ್ರಹ** *ಡಾ॥ ಬಿ. ಎಸ್. ಶೈಲಜಾ* ... ೩೦
**ಹೊಸ ಓದು** ಇಂದಿರಾಕುಮಾರಿ ಮತ್ತಿತರರು ... ೨೨
**ಸಾದರ ಸ್ವೀಕಾರ** ... ೧೬
**ಕ್ಷ–ಕಿರಣ** *ಪ್ರಕಾಶ್ ಎಸ್.* ... ೧೮



**ಚಿತ್ರಗಳು :** ತನು, ಜಿ. ಎಂ. ಬೊ., ವಿ. ಗೋಪಾಲ್,
ವಿ.ಆರ್.ಸಿ. ಶೇಖರ್, ರವಿ ಹೆಗ್ಗಡಿ
**ಮುಖಪುಟ :** ಡಾ॥ ಯು. ಆರ್. ಅನಂತಮೂರ್ತಿ
**ವರ್ಣಚಿತ್ರ :** ಉದಯ್ ಜಾದೂಗಾರ್
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಡಾ॥ ಎಸ್. ಎಲ್. ಭೈರಪ್ಪನವರು ನಮ್ಮ ನಡುವಿನ ಸರ್ವಜ್ಞ. ಅವರು ಹಾಗೆ ಭಾವಿಸಿಕೊಂಡಿದ್ದಾರೋ ಇಲ್ಲವೋ ಗೊತ್ತಿಲ್ಲ, ಆದರೆ ಅವರ ಕೆಲವು ಓದುಗ ಅಭಿಮಾನಿಗಳು ಹಾಗೆಂದುಕೊಂಡಿದ್ದಾರೆ. ಒಂದು ಕ್ಷೇತ್ರದಲ್ಲಿ ಧೀಮಂತಿಕೆಯ ಶ್ರೀಮಂತಿಕೆ ಮೆರೆದವರು ಎಲ್ಲ ಕ್ಷೇತ್ರಗಳಲ್ಲೂ ಅಷ್ಟೇ ಧೀಮಂತಿಕೆಯನ್ನು ಹೊಂದಿರುತ್ತಾರೆಂದು ಕೆಲವು ಹುಂಬ ಓದುಗರು ಭ್ರಮಿಸಿದರೆ ಅಡ್ಡಿಯಿಲ್ಲ. ಆದರೆ ಸ್ವತಃ ಮಾನ್ಯ ಭೈರಪ್ಪನವರೂ ಕೆಲವೇಳೆ ಹಾಗೆಂದು ಕೊಳ್ಳುವುದು ಆಗಾಗ್ಗೆ ಪ್ರಕಟಗೊಳ್ಳುತ್ತಿರುತ್ತದೆ. ಅದು ಶ್ರೀಯುತರ 'ಅಭಿವ್ಯಕ್ತಿ ಸ್ವಾತಂತ್ರ್ಯ' ಎಂಬುದನ್ನು ಯಾರೂ ಪ್ರಶ್ನಿಸುವುದಿಲ್ಲ. ಗಾಂಧೀಜಿ ಅತಿದೊಡ್ಡ 'ಮಹಾತ್ಮ'ರಾದ ನಂತರ ರಾಜಕೀಯ, ಭಗವದ್ಗೀತೆ, ಪ್ರಕೃತಿ ಚಿಕಿತ್ಸೆ, ಖಾದಿಯ ಆರ್ಥಿಕತೆ, ಬಂಡವಳಿಗರ ಧರ್ಮದರ್ಶಿತ್ವ, ಮಹಿಳೆಯ ಸ್ವ–ರಕ್ಷಣೆ, ಶೈಕ್ಷಣಿಕ ತತ್ತ್ವಶಾಸ್ತ್ರ, ಮೇಕೆ ಹಾಲಿನ ಪೌಷ್ಟಿಕತೆ, ಸಾವಯವ ಗೊಬ್ಬರ, ಹೀಗೆ ಎಲ್ಲ ಕ್ಷೇತ್ರಗಳಲ್ಲೂ ತಮ್ಮ ಅನುಭವ ಮತ್ತು ಪರಿಣತಿಯನ್ನು ಪ್ರಕಾಶಗೊಳಿಸುತ್ತಿದ್ದರು. ಪಾಪ, ಕಸ್ತೂರಿ ಬಾ ಇವರ ಪರಿಣತಿಗೆ ವಿರೋಧ ವ್ಯಕ್ತಪಡಿಸಲಾಗದೆ ಕೆಲವೊಮ್ಮೆ ಬಲಿಪಶು ಆಗಿಬಿಡುತ್ತಿದ್ದರು. ವಿಪರೀತ ಜ್ವರದಿಂದ ಅಸ್ವಸ್ಥರಾಗಿದ್ದ ಬಾ ಅವರ ತಲೆಯ ಮೇಲೆ ಗಾಂಧೀಜಿ ಒಮ್ಮೆ ಒಂದು ಕೊಡ ತಣ್ಣೀರು ಸುರಿದಿದ್ದರಂತೆ, ಅದು ಅವರ ಪ್ರಕೃತಿ ಚಿಕಿತ್ಸೆ. "ನೀವು ಬೇಕಾದರೆ ಸುರಿದುಕೊಳ್ಳಿ, ನನಗೆ ಸುರಿಯಲು ಅನುಮತಿ ನೀಡುವುದಿಲ್ಲ" ಎಂದು ಬಾ ಹೇಳಹೋಗಲಿಲ್ಲ; ಬದಲಾಗಿ, ಪತಿಯ ಹುಚ್ಚುತನಕ್ಕೆ ಬಲಿಯಾಗಲು ತಮ್ಮನ್ನು ಒಡ್ಡಿಕೊಂಡರು. ತತ್ತ್ವಶಾಸ್ತ್ರ ಮತ್ತು ಸಂಗೀತ ಪಾರಂಗತ, ಉನ್ನತ ಹಂತದ ಸಾಹಿತಿ, ರಾಜಕೀಯ ವಿಶ್ಲೇಷಕ, ಸಂಸ್ಕೃತಿ ಚಿಂತಕ, ಹೀಗೆ ಮಿಗಿಲಾದ ಶ್ರೇಯಸ್ಸಿಗೆ ಭಾಜನರಾಗಿರುವ ಡಾ॥ ಭೈರಪ್ಪನವರು ತಮ್ಮದೇ ವಿಚಿತ್ರ ಸಿದ್ಧಾಂತಗಳನ್ನು ಅಂತಿಮ ಜ್ಞಾನದ ತುಣುಕು ಎಂಬಂತೆ ಕೆಲವೇಳೆ ಪ್ರತಿಪಾದಿಸುತ್ತಾರೆ. ಅವರ ಸಾಹಿತ್ಯ ಕೃಷಿಗೆ ತಲೆದೂಗುವ ಮಂದಿ ಈ ಸಿದ್ಧಾಂತಗಳನ್ನೂ ಒಪ್ಪಿಕೊಳ್ಳಬೇಕೆಂಬುದು ಮಾನ್ಯ ಭೈರಪ್ಪನವರ ಇಂಗಿತವಿದ್ದಂತೆ ತೋರುತ್ತದೆ. ಇತ್ತೀಚೆಗೆ ಅವರು ಮಂಡಿಸಿದ ಸಿದ್ಧಾಂತದ ಪ್ರಕಾರ "ಸಿದ್ಧಾಂತಗಳು ಕೆಲಸಕ್ಕೆ ಬರುವುದಿಲ್ಲ, ಅವು ಅಪ್ರಸ್ತುತ ಮತ್ತು ಅಪ್ರಯೋಜಕ." ಇವೇ ಮಾತುಗಳಲ್ಲಿ ಅಲ್ಲದಿದ್ದರೂ ಡಾ॥ ಭೈರಪ್ಪನವರ ಈ ವಿಚಾರವು ಪತ್ರಿಕೆಗಳಲ್ಲಿ ಪ್ರಮುಖವಾಗಿ ಪ್ರಕಟವಾಗಿದ್ದಿತು. "ಪ್ರಜಾವಾಣಿ" ಪತ್ರಿಕೆಯ ಕಚೇರಿಯಲ್ಲಿ ಪತ್ರಕರ್ತರನ್ನುದ್ದೇಶಿಸಿ ಮಾತನಾಡುವಾಗ ಅವರ ಈ ಗಹನ ಸಿದ್ಧಾಂತವು ಮಂಡಿತವಾಗಿದ್ದಿತೆಂದು ಹೇಳಲಾಗಿದೆ. "ನಿಮ್ಮ ಸಿದ್ಧಾಂತಕ್ಕೇ ಮೊಟ್ಟಮೊದಲು ನಿಮ್ಮ ಸಿದ್ಧಾಂತವು ಅನ್ವಯವಾಗುತ್ತದಲ್ಲವೆ ?" ಎಂದು ಅಲ್ಲಿ ನೆರೆದಿದ್ದ ಯಾವ ಪತ್ರಕರ್ತರೂ ಕೇಳಲಿಲ್ಲ. ಸಭ್ಯರು ಯಾರೂ ಹಾಗೆ ಹಿರಿಯರನ್ನು ಎದುರೆದುರೇ ಇಕ್ಕಟ್ಟಿಗೆ ಸಿಲುಕಿಸಬಾರದು, ಎಂಬ ನಿಯಮ ಅವರದ್ದು. ಸಾಹಿತಿ ಭೈರಪ್ಪನವರ ಅರ್ಥಶಾಸ್ತ್ರದ ಪ್ರಕಾರ ಬಂಡವಾಳಶಾಹಿ ಇಲ್ಲದೆ ಭಾರತವೂ ಸೇರಿದಂತೆ ಪ್ರಪಂಚವು ಉದ್ಧಾರವಾಗುವುದಿಲ್ಲ; ನೆಹರು ಕಾಲದಲ್ಲಿ ಎಡ ಸಿದ್ಧಾಂತದ ಪ್ರಭಾವದಿಂದಾಗಿ ಅಭಿವೃದ್ಧಿಯು ಕೆಟ್ಟ ದಾರಿ ಹಿಡಿಯಿತು. ಇಂದಿರಾ ಗಾಂಧಿಯವರಂತೂ ಬಂಡವಳಿಗರಿಗೆ ಶೇ. ೯೬.೨ರಷ್ಟು ಆದಾಯ ತೆರಿಗೆ ವಿಧಿಸಿ ಉದ್ಯಮಗಳು ನೆಲಕಚ್ಚುವಂತೆ ಮಾಡಿದರು. ಪಾವತಿಸಬೇಕಾಗುವ ತೆರಿಗೆಯಲ್ಲಿ ಉಳಿತಾಯ ಮಾಡಿಕೊಳ್ಳಲು ಬಂಡವಳಿಗರು ಆಕೆಗೆ ಲಂಚ ಕೊಡಲಾರಂಭಿಸಿದರು. ದೇಶದಲ್ಲಿ ಭ್ರಷ್ಟಾಚಾರವು ಹುಟ್ಟಿಕೊಂಡಿದ್ದು ಹಾಗೆ. ಒಟ್ಟಿನಲ್ಲಿ ಸಿದ್ಧಾಂತವು ನಮ್ಮ ದೇಶವನ್ನು ನಾಶಮಾಡಿತು.

– ಇದು ಭೈರಪ್ಪನವರ ವಾದದ (ಅಥವಾ ಸಿದ್ಧಾಂತದ) ಸಾರ. ಅವರೇ ಅನುಗ್ರಹಿಸಿರುವಂತೆ "ಸಿದ್ಧಾಂತಗಳು ಅಪ್ರಯೋಜಕ"ವಾದ್ದರಿಂದ ಅವರ ಮಾತುಗಳು ಶುದ್ಧ ಅಪ್ರಯೋಜಕ ಬುಡುಬುಡಿಕೆ ಎಂಬುದು ನಿಜ. ಅವರ ವಾದದಲ್ಲಿನ ದೊಡ್ಡ ತೂತುಗಳನ್ನು ಶ್ರೀ. ಕೆ. ಫಣಿರಾಜ್‌ರವರು "ಪ್ರಜಾವಾಣಿ" ಪತ್ರಿಕೆಯಲ್ಲಿ ಈಗಾಗಲೆ ಸ್ಪಷ್ಟವಾಗಿ ತೋರಿಸಿದ್ದಾರೆ. 'ಸಿದ್ಧಾಂತ'ವೆಂದರೆ ಕೇವಲ "ಎಡ ಸಿದ್ಧಾಂತ"ವೆಂದು ಪ್ರಸ್ತುತಪಡಿಸಿರುವ ಭೈರಪ್ಪನವರು ತಮಗರಿವಿಲ್ಲದೆ


*(೬ನೇ ಪುಟಕ್ಕೆ)*







ಸಂಪುಟ-೧೬ ಸಂಚಿಕೆ-೨ ಸೆಪ್ಟೆಂಬರ್ ೨೦೧೪





■ *ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೩೯೭೪೯೬

■ *ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http ://navakarnataka.blogspot.in**
**http ://hosathumonthly.blogspot.in**


# ಸಂಪಾದಕೀಯ

## ಮೋದಿ ಎಂಬ ಮೇಡ್ ಇನ್ ಇಂಡಿಯಾ ಪ್ರಧಾನಿ

**ಭಾ**ರತದ ೬೮ನೇ ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ ಪ್ರಧಾನಿ ನರೇಂದ್ರ ಮೋದಿಯವರು ದಿಲ್ಲಿಯ ಕೆಂಪುಕೋಟೆಯ ಮೇಲೆ ನಿಂತು ತಮ್ಮ ಕೇಸರಿ ಕನಸುಗಳನ್ನು ಹರಿಬಿಟ್ಟಿದ್ದಾರೆ. 'ಪ್ರಧಾನಿ ಮೋದಿಯವರು ಬುಲೆಟ್ ಪ್ರೂಫ್ ಇಲ್ಲದೇ ಭಾಷಣ ಮಾಡಿದರು, ಯಾವುದೇ ಟಿಪ್ಪಣಿ ಇಲ್ಲದೇ ಮಾತನಾಡಿದರು, ಕೇಸರಿ ರುಮಾಲು ಸುತ್ತಿಕೊಂಡಿದ್ದರು.' ಇಂಥ ಎಲ್ಲ ವಿಶೇಷಣಗಳೊಂದಿಗೆ 'ಸ್ವತಂತ್ರ ಭಾರತದಲ್ಲಿ ಹುಟ್ಟಿದ ಮೊದಲ ಪ್ರಧಾನಿ' ಎಂಬ ವಾಕ್ಯವೂ ಸೇರಿಕೊಂಡಿತ್ತು. ಅಂದರೆ ಮೊದಲಿನ ಪ್ರಧಾನಿಗಳು ಸ್ವತಂತ್ರ ಭಾರತಕ್ಕಿಂತ ಮೊದಲು ಜನಿಸಿದವರು ಎಂಬುದು ಅದರರ್ಥ. ಅಲ್ಲಿಗೆ ಮೋದಿ ಮೇಡ್ ಇನ್ ಇಂಡಿಯಾ ಎಂದೂ ಅರ್ಥ ಮಾಡಿಕೊಳ್ಳಬೇಕು. ಪ್ರಧಾನಿ ಮೋದಿಯವರು ತಮ್ಮ ಅಮೋಘ ಭಾಷಣದಲ್ಲಿ ವಿಶ್ವ ಹೂಡಿಕೆದಾರರಿಗೆ 'ಬನ್ನಿ ಭಾರತದಲ್ಲಿ ಹೂಡಿಕೆ ಮಾಡಿ' ಎಂಬ ಮುಕ್ತ ಕರೆಯನ್ನು ಕೊಟ್ಟಿದ್ದಾರೆ. ವಿಶ್ವದ ಎಲ್ಲ ಮಾರುಕಟ್ಟೆಗಳಲ್ಲಿ 'ಮೇಡ್ ಇನ್ ಇಂಡಿಯಾ' ಎಂಬ ವಸ್ತುಗಳೇ ಸಿಗಬೇಕು. ಅಂಥ ವಾತಾವರಣ ನಿರ್ಮಾಣ ಮಾಡಬೇಕೆಂದು ಹೇಳಿದ್ದಾರೆ. ಅಲ್ಲಿಗೆ ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಅಂತಿಮ ಮತ್ತು ನಿರ್ಣಾಯಕ ಹೋರಾಟವಾಗಿದ್ದ 'ಕ್ವಿಟ್ ಇಂಡಿಯಾ' ಸಿದ್ಧಾಂತಕ್ಕೆ ಶಾಶ್ವತವಾದ ಗೋರಿ ತೋಡಿ 'ಕೋಟ್ ಇಂಡಿಯಾ' ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ. ಬಡ ಭಾರತೀಯರಿಗೆ ಈ 'ಮೇಡ್ ಇನ್ ಇಂಡಿಯಾ' ಎಷ್ಟು ಅರ್ಥವಾಯಿತೋ ಬಿಟ್ಟಿತೋ ಗೊತ್ತಿಲ್ಲ. ವಿಶ್ವದ ಬಂಡವಾಳ ಹೂಡಿಕೆದಾರರಿಗೆ ಸರಿಯಾಗಿಯೇ ಅರ್ಥವಾಗಿದೆ. ವಾಣಿಜ್ಯ ಸಂಸ್ಥೆಗಳು ಮೋದಿಯವರ ಕನಸುಗಳನ್ನು ಹರ್ಷೋಲ್ಲಾಸದಿಂದ ಸ್ವಾಗತಿಸಿವೆ. ಅಲ್ಲಿಗೆ ಕಳೆದ ಲೋಕಸಭಾ ಚುನಾವಣೆಯಲ್ಲಿ ಮೋದಿಯವರ ಪರವಾಗಿ ಕೋಟ್ಯಂತರ ಹಣ ತೊಡಗಿಸಿದ್ದ ಕಾರ್ಪೊರೇಟ್ ಕಂಪನಿಗಳು, ಪ್ರಶ್ನಾತೀತವಾಗಿ ಬೆಂಬಲಿಸಿದ್ದ ಕಾರ್ಪೊರೇಟ್ ಮಾಧ್ಯಮಗಳು ತಮ್ಮ ಅಂದಿನ ಹೂಡಿಕೆಗೆ ಸೂಕ್ತವಾದ ಪ್ರತಿಫಲವನ್ನು ಪಡೆದಿವೆ.

ಮೇಡ್ ಇನ್ ಇಂಡಿಯಾ ಎಂದರೆ ನಮ್ಮ ದೇಶದ ನೈಸರ್ಗಿಕ ಸಂಪನ್ಮೂಲಗಳನ್ನೂ, ತಾಂತ್ರಿಕ ಸಂಪನ್ಮೂಲಗಳನ್ನೂ ಹಾಗೂ ಮಾನವ ಸಂಪನ್ಮೂಲವನ್ನೂ ಬಳಸಿಕೊಂಡು ಸಿದ್ಧಪಡಿಸಿದ ನಮ್ಮದೇ ಉತ್ಪನ್ನಗಳು ಎಂಬ ಸಿದ್ಧಾಂತವನ್ನು ಸಾರಾಸಗಟು ತಳ್ಳಿಹಾಕಿದ ನಮ್ಮ ಪ್ರಧಾನಿ, ವಿಶ್ವದ ಹೂಡಿಕೆದಾರರನ್ನು ಕರೆದು, ನಮ್ಮ ಸಂಪನ್ಮೂಲಗಳನ್ನು ಬಳಸಿ ಅವರು ಸಿದ್ಧಪಡಿಸಿದ ಉತ್ಪನ್ನಗಳಿಗೆ ನಮ್ಮ ಲೇಬಲ್‌ಅನ್ನು ಅಂಟಿಸಿ ಅದಕ್ಕೆ 'ಮೇಡ್ ಇನ್ ಇಂಡಿಯಾ' ಎಂದು ಹೇಳಲು ಹೊರಟಿದ್ದಾರೆ. ವಿಶ್ವ ವಾಣಿಜ್ಯ ಸಂಸ್ಥೆಯ ಉದ್ದೇಶವೂ ಇದೇ ಆಗಿದೆ. ಇಂದು ನಮ್ಮ ಆರ್ಥಿಕ ವ್ಯವಸ್ಥೆಯೂ ಅದೇ ದಾರಿಯಲ್ಲಿದೆ. ಹಿಂದಿನ ಸರಕಾರಗಳು ಅದಕ್ಕೆ ಮಾರ್ಗ ರೂಪಿಸಿವೆ. ಮೋದಿಯವರು ಅದಕ್ಕೊಂದು ಭಾವನಾತ್ಮಕವಾದ ವೇಷ ತೊಡಿಸಿದ್ದಾರೆ. ಮೇಲುನೋಟಕ್ಕೆ ಅವರು ವಿದ್ಯುನ್ಮಾನ ಉಪಕರಣಗಳ, ಕೈಗಾರಿಕೆಗಳ (ಡಿಜಿಟಲ್ ಇಂಡಿಯಾ) ಕುರಿತು ಮಾತನಾಡಿದರೂ ಆಳದಲ್ಲಿ ಒಟ್ಟು ಉತ್ಪಾದನಾವಲಯ, ಆರ್ಥಿಕವಲಯ ಮತ್ತು ಸೇವಾವಲಯಗಳನ್ನು ವಿಶ್ವ ಹೂಡಿಕೆದಾರರಿಗೆ ಒಪ್ಪಿಸಲು ದೇಶವನ್ನು ಮಾನಸಿಕವಾಗಿ ಸಿದ್ಧಪಡಿಸಲು ಸ್ವಾತಂತ್ರ್ಯೋತ್ಸವದ ವೇದಿಕೆಯನ್ನು ಬಳಸಿಕೊಂಡಿದ್ದಾರೆ. ಈಗಾಗಲೇ ರಕ್ಷಣಾವಲಯ, ರೈಲ್ವೆ ಹಾಗೂ ಬ್ಯಾಂಕ್, ವಿಮಾ ಕ್ಷೇತ್ರಗಳಲ್ಲಿ ವಿದೇಶೀ ನೇರ ಬಂಡವಾಳಕ್ಕೆ ಹೆಚ್ಚಿನ ಅವಕಾಶ ಮಾಡಿಕೊಟ್ಟ ನಮ್ಮ ಪ್ರಧಾನಿ ಅದೆಂಥ ಸ್ವಾವಲಂಬಿ ದೇಶ ಕಟ್ಟುತ್ತಾರೋ ಎಂಬುದನ್ನು ದೇಶಾಭಿಮಾನಿಗಳ ಪಕ್ಷವೆಂದು ಹೇಳಿಕೊಳ್ಳುವ ಬಿ.ಜೆ.ಪಿ. ಹೇಳಬೇಕು.

ಪ್ರಧಾನಿ ಮೋದಿಯವರು ಕೆಂಪುಕೋಟೆಯ ಮೇಲೆ ಭಾಷಣ ಮಾಡುವ ಸಂದರ್ಭದಲ್ಲಿಯೇ ನಮ್ಮ ದೇಶದ ರಫ್ತು ವಹಿವಾಟು ಈಗಿರುವುದಕ್ಕಿಂತ ಶೇ.೭.೩ಕ್ಕೆ ಇಳಿಕೆಯಾಗಿದೆ ಎಂದು ಅಂಕಿಸಂಖ್ಯೆಗಳು ಹೇಳುತ್ತವೆ. ಇದೇ ಸಂದರ್ಭದಲ್ಲಿ ದೇಶದಲ್ಲಿ ಸರಕುಗಳ ಆಮದು ಹೆಚ್ಚಿದೆ ಎಂದೂ ದಾಖಲಾಗಿದೆ. ಈ ಆಮದು – ರಫ್ತುಗಳ ವ್ಯತ್ಯಾಸವನ್ನು ಸರಿದೂಗಿಸಿ ರಫ್ತಿನ ಪ್ರಮಾಣ ಹೆಚ್ಚಿಸಿ ಆಮದು ಪ್ರಮಾಣ ಕಡಿತಗೊಳಿಸುವ ಹಿನ್ನೆಲೆಯಲ್ಲಿ ನಮ್ಮ ದೇಶದ ಉತ್ಪಾದನಾ ವಲಯಗಳನ್ನು ಪುನಶ್ಚೇತನಗೊಳಿಸಲು ಮಾರ್ಗಗಳನ್ನು ಕಂಡುಕೊಳ್ಳಬೇಕಾದ ನಮ್ಮ ಪ್ರಧಾನಿಗಳು ವಿದೇಶಿ ಕಂಪನಿಗಳನ್ನೇ ಆಮದು ಮಾಡಿಕೊಳ್ಳಲು ಪಣತೊಡುವುದು ಮತ್ತು ಅದನ್ನೊಂದು ದೇಶಕಟ್ಟುವ ಕ್ರಿಯೆಯೆಂದು ಬಣ್ಣಿಸುವುದು ಒಂದು ದೇಶವನ್ನು ಸ್ವಾವಲಂಬನೆಯ ಕಡೆಗೆ ಕರೆದೊಯ್ಯುವ ಮಾರ್ಗವೇ ಎಂದು ಕೇಳಬೇಕಾಗಿದೆ. ಈಗಾಗಲೇ ಸಾಕಷ್ಟು ವಿದೇಶೀ ಕಂಪನಿಗಳು ನಮ್ಮ ನೆಲದಲ್ಲಿ ಕೃಷಿಯ ಬೀಜವನ್ನೂ ಒಳಗೊಂಡು ವಿದ್ಯುನ್ಮಾನ ಉಪಕರಣಗಳವರೆಗೆ ಹಲವಾರು ಕ್ಷೇತ್ರಗಳಲ್ಲಿ ನಮ್ಮ ದೇಶದಲ್ಲಿಯೇ ಬಂಡವಾಳ ಹೂಡಿವೆ. ಅವುಗಳಿಗಾಗಿ ನಮ್ಮ ನೆಲದ ಕಾನೂನುಗಳನ್ನೆಲ್ಲ ತಿದ್ದುಪಡಿ ಮಾಡಿ ಅವರಿಗೇ ಅನುಕೂಲ ಮಾಡಿಕೊಡಲಾಗಿದೆ. ಇಷ್ಟಕ್ಕೂ ವಿಶ್ವ ಬಂಡವಾಳ ಹೂಡಿಕೆದಾರರು ನಮ್ಮ ದೇಶದ ಉದ್ಧಾರಕ್ಕೆ ಬಂಡವಾಳ ಹೂಡುವುದಿಲ್ಲ. ತಮಗೆ ಲಾಭ ತಂದುಕೊಡುವ ಕ್ಷೇತ್ರಗಳಲ್ಲಿ ಮಾತ್ರ ಹೂಡಿಕೆ ಮಾಡುತ್ತಾರೆ. ನಮ್ಮ ನೆಲ, ಜಲ,

ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲಗಳನ್ನು ಬಳಸಿಕೊಂಡು ತಾವು ಲಾಭ ಮಾಡಿಕೊಳ್ಳುತ್ತಾರೆ. ಅವರಿಗೆ ಲಾಭ ಮುಖ್ಯವೇ ಹೊರತು ಲೇಬಲ್ ಅಲ್ಲ. ಅಂಥವರನ್ನು ಕರೆದು ಮೇಡ್ ಇನ್ ಇಂಡಿಯಾ ಲೇಬಲ್ ಅಂಟಿಸುವ ಕೆಲಸಕ್ಕೆ ನಮ್ಮ ಪ್ರಧಾನಿ ಕೈ ಹಾಕಿದ್ದಾರೆ.

ಪೆಟ್ರೋಲಿಯಂ ಉತ್ಪನ್ನಗಳನ್ನು ಹೊರತುಪಡಿಸಿ ಉಳಿದೆಲ್ಲ ಕ್ಷೇತ್ರಗಳಲ್ಲಿಯೂ ಗಣನೀಯ ಪ್ರಮಾಣದ ಉತ್ಪಾದನೆ ಮಾಡಿ ನಮ್ಮ ಆಂತರಿಕ ಬಳಕೆಯ ಅವಶ್ಯಕತೆಯನ್ನು ಪೂರೈಸಿ, ಸಾಕಷ್ಟು ರಫ್ತು ಮಾಡಬಲ್ಲಂತಹ ಸಾಧ್ಯತೆಗಳು ನಮ್ಮ ದೇಶದಲ್ಲಿವೆ. ಅದರ ಕುರಿತು ಚಿಂತಿಸಿ, ಕಾರ್ಯಕ್ರಮ ರೂಪಿಸದೇ ನೆರೆಮನೆಯವರ ಮಗುವನ್ನು ತಂದು ನಮ್ಮ ಮನೆಯಲ್ಲಿ ನಾಮಕರಣ ಮಾಡಿ ಅದಕ್ಕೆ 'ಮೇಡ್ ಇನ್ ಇಂಡಿಯಾ' ಲೇಬಲ್ ಅಂಟಿಸುವುದಕ್ಕೆ ನಮ್ಮನ್ನು ಆಳುವವರಿಗೆ ನಾಚಿಕೆಯಾಗಬೇಕು. ಇದು ನಾಚಿಕೆಯ ಪ್ರಶ್ನೆಯಲ್ಲ ಋಣಭಾರದ ಪ್ರಶ್ನೆ. ಮೋದಿ ಪ್ರಧಾನಿಯಾದದ್ದು ಬಿ.ಜೆ.ಪಿ. ಅಧಿಕಾರ ಹಿಡಿದದ್ದು ಭಾರತವನ್ನು ಒಳಗೊಂಡ ವಿಶ್ವದ ಕಾರ್ಪೊರೇಟ್ ಕಂಪನಿಗಳ ಬೆಂಬಲದಿಂದ. ಈಗ ಅವರ ಉಪಕಾರ ತೀರಿಸಬೇಕಿದೆ. ಅದಕ್ಕೆ ಈ ಮುಕ್ತ ಆಹ್ವಾನವನ್ನು ಮೋದಿ ಕೆಂಪುಕೋಟೆಯ ಮೇಲೆ ನಿಂತು ಕೊಡುತ್ತಾರೆ. ಅದಕ್ಕೆ ಉದ್ಯೋಗ ಹೆಚ್ಚಳ ಮತ್ತು ಡಿಜಿಟಲ್ ಇಂಡಿಯಾ, ಮೇಡ್ ಇನ್ ಇಂಡಿಯಾಗಳ ಪೋಷಾಕು.

ದೇಶದ ಜನತೆಯ ಹಿತಾಸಕ್ತಿಗಿಂತ ಕಾರ್ಪೊರೇಟ್ ಕಂಪನಿಗಳ ಹಿತಾಸಕ್ತಿಗೇ ಒತ್ತುಕೊಟ್ಟು ಕೆಲಸ ಮಾಡಿದ ಕಾಂಗ್ರೆಸ್ ಪಕ್ಷ ಈಗ ಮಣ್ಣು ಮುಕ್ಕಿದೆ. ಅದೇ ಕೆಲಸವನ್ನು ಇನ್ನೂ ವೇಗವಾಗಿ ಭಾವನಾತ್ಮಕ ಶಬ್ದಗಳ ಡೊಂಬರಾಟಗಳೊಂದಿಗೆ ಬಿ.ಜೆ.ಪಿ.ಯ ನಾಯಕ ಮೋದಿ ಮಾಡುತ್ತಿದ್ದಾರೆ. ವಿದೇಶೀ ಬಂಡವಾಳ ಬೇಡವೇ ಬೇಡ ಎಂದು ಹೇಳುವುದು ನಮ್ಮ ಉದ್ದೇಶವಲ್ಲ. ಯಾವ ಕ್ಷೇತ್ರ, ಎಷ್ಟು ಬಂಡವಾಳ ಎನ್ನುವ ವಿವೇಚನೆ ಒಬ್ಬ ಪ್ರಧಾನಿಯಾದವರಿಗೆ ಬೇಡವೇ? ನೀರು ಸರಬರಾಜು, ರಸ್ತೆ ನಿರ್ಮಾಣ, ಬೀಜ, ರಾಸಾಯನಿಕ, ಉಕ್ಕು, ಕೈಗಾರಿಕೆ, ಸಾರಿಗೆ, ಕೃಷಿ, ಆಹಾರ, ಬ್ಯಾಂಕ್, ವಿಮಾ, ಶಿಕ್ಷಣ, ಆರೋಗ್ಯ ಇಂಥ ದೇಶದ ಸ್ವಾವಲಂಬನೆಗೆ ಪೂರಕವಾದ ಎಲ್ಲ ಕ್ಷೇತ್ರಗಳಲ್ಲಿಯೂ ಇಂದು ವಿದೇಶೀ ಬಂಡವಾಳಗಾರರು ದಾಳಿ ಇಡುತ್ತಿದ್ದಾರೆ. ಇದಕ್ಕೆ ಭಾವನಾತ್ಮಕ ವೇಷ ತೊಡಿಸಿ ಗುಲಾಮಗಿರಿಯನ್ನೂ ವೈಭವೀಕರಿಸುವ ಕ್ರಿಯೆಯನ್ನು ಮೋದಿ ಮಾಡುತ್ತಿದ್ದಾರೆ.

ಕೆಂಪುಕೋಟೆಯ ಮೇಲೆ ಇನ್ನೂ ಒಂದು ಮಾತನ್ನು ಮೋದಿ ಹೇಳಿದ್ದಾರೆ. ಕೋಮುವಾದ ಮತ್ತು ಜಾತೀಯತೆ ನಮ್ಮ ದೇಶದ ಪ್ರಗತಿಗೆ ಅಡ್ಡಿಯಾಗಿವೆಯಂತೆ ಅವುಗಳನ್ನು ತೊಡೆದು ಹಾಕುತ್ತಾರಂತೆ. ಅದೂ ಹತ್ತು ವರ್ಷದಲ್ಲಿ. ನಗಲೂ ಸಾಧ್ಯವಾಗುತ್ತಿಲ್ಲ. ಕಳೆದ ಇಪ್ಪತ್ತು ವರ್ಷಗಳಲ್ಲಿ ದೇಶದಲ್ಲಿ ಕೋಮು ಸಂಘರ್ಷಗಳನ್ನು ನಡೆಸಿ, ಸಂಘರ್ಷದಲ್ಲಿ ಸತ್ತವರ ಶವಗಳನ್ನೇ ಮೆಟ್ಟಿಲು ಮಾಡಿಕೊಂಡು ದೆಹಲಿಯ ಕೆಂಪುಕೋಟೆ ಏರಿದವರು ಇಂದು ಕೋಮುವಾದವನ್ನು ತಡೆಗಟ್ಟುವ ಮಾತನಾಡುತ್ತಿದ್ದಾರೆ. ಹಿಂದುಳಿದವರ ಉನ್ನತಿಗಾಗಿ ಜಾರಿಮಾಡಿದ ಮಂಡಲ ವರದಿ ವಿರುದ್ಧ ದೇಶದಾದ್ಯಂತ ಜಾತಿ ಸಂಘರ್ಷ ಹೆಚ್ಚಿಸಿ ರಾಜಕೀಯ ಬೇಳೆ ಬೇಯಿಸಿಕೊಂಡವರು ಇಂದು ಜಾತೀಯತೆ ಪ್ರಗತಿಗೆ ಮಾರಕವೆಂದು ಹೇಳುತ್ತಿದ್ದಾರೆ. ಗಾಂಧಿಯನ್ನು ಕೊಂದವರು ಗಾಂಧಿಗಾಗಿ ಕಾಣಿಕೆಗಳನ್ನು ಸಿದ್ಧಪಡಿಸುತ್ತಿದ್ದಾರೆ. ಈ ಗೋಸುಂಬೆ ರಾಜಕಾರಣ ಹೆಚ್ಚು ದಿನ ನಡೆಯಲಾರದು. ಮೋದಿ 'ಪ್ರಧಾನ ಸೇವಕ' ಎಂದು ಹೇಳಿಕೊಂಡಿದ್ದಾರೆ. ಅವರು ಕಾರ್ಪೊರೇಟ್ ಕಂಪನಿಗಳ ಪ್ರಧಾನ ಸೇವಕ ಎನ್ನುವ ರಹಸ್ಯ ಈಗಾಗಲೇ ಬಯಲಾಗುತ್ತಿದೆ.

## ಧರ್ಮ ನಿರಪೇಕ್ಷತೆ ನಿರ್ನಾಮಗೊಳಿಸಲು ಸನ್ನಾಹ

ಹಿಂದುತ್ವವೇ ಎಲ್ಲ ಭಾರತೀಯರ ಸಾಂಸ್ಕೃತಿಕ ಹೆಗ್ಗುರುತು. ಆದ್ದರಿಂದ ಈಗಿನ ಎಲ್ಲಾ ಭಾರತೀಯರೂ ಹಿಂದುತ್ವ ಎಂಬ ಮಹಾಸಂಸ್ಕೃತಿಯ ಅನುಯಾಯಿಗಳು. ಹಿಂದುತ್ವವೇ ಜೀವನ ಮಾರ್ಗ. ಯಾವುದೇ ಧರ್ಮದವರಾದರೂ ಅವರು ಹಿಂದೂವೇ. ಯಾವ ದೇವರನ್ನು ಪೂಜಿಸಲಿ ಅಥವಾ ಬಿಡಲಿ ಅವರು ಹಿಂದೂಗಳೆ. ಆರೆಸ್ಸೆಸ್‌ನ ಮುಖ್ಯಸ್ಥ ಮೋಹನ್ ಭಾಗವತ್ ಈಚೆಗೆ ಬಡಬಡಿಸಿದ್ದಾರೆ. ಅದೇ ಧಾಟಿಯಲ್ಲಿ ಅವರು ಎರಡು ದಿನ ಬಿಟ್ಟು ಹಿಂದುತ್ವ ಭಾರತದ ಅಸ್ಮಿತೆ. ಅದು ಇತರ ಅಸ್ಮಿತೆಗಳನ್ನು ಅರಗಿಸಿಕೊಳ್ಳಲು ಸಮರ್ಥವಾಗಿದೆ ಎಂದೂ ಹೇಳಿದ್ದಾರೆ, ತಮ್ಮ ವಾದವನ್ನು ಸಮರ್ಥಿಸಿಕೊಳ್ಳಲು ಅವರು ಅನ್ಯದೇಶಗಳ ಉದಾಹರಣೆಯನ್ನು ನೀಡಿದ್ದಾರೆ. ಅವರ ಈ ಹೇಳಿಕೆಯಲ್ಲಿ ಹೊಸದೇನೂ ಇಲ್ಲ. ಏಕೆಂದರೆ ಆರೆಸ್ಸೆಸ್ಸಿನ ಸಿದ್ಧಾಂತವೇ ಅದು. ಎಪ್ಪತ್ತು ವರ್ಷಗಳ ಹಿಂದೆಯೇ ಈ ಹಿಂದೂ ಸಂಘಟನೆಯ ಪ್ರಮುಖ ಸಿದ್ಧಾಂತಿ ಗೋಲ್ವಾಲ್ಕರ್ ಇದನ್ನೇ ಹೇಳಿದ್ದರು : 'ಹಿಂದೂಸ್ಥಾನದಲ್ಲಿರುವ ಹಿಂದೂಗಳಲ್ಲದ ಜನರು ಹಿಂದು ಸಂಸ್ಕೃತಿ, ಭಾಷೆಗಳನ್ನು ಅಳವಡಿಸಿಕೊಳ್ಳಬೇಕು, ಹಿಂದು ಧರ್ಮವನ್ನು ಗೌರವಿಸಲು, ಅದು ಪವಿತ್ರವೆಂದು ಭಾವಿಸಲು ಕಲಿಯಬೇಕು,... ಒಂದೇಮಾತಿನಲ್ಲಿ ಹೇಳುವುದಾದರೆ ಅವರು ಪರಕೀಯರಾಗಿರುವುದು ನಿಲ್ಲಬೇಕು. ಅಂದರೆ, ಈ ದೇಶದಲ್ಲಿ ಸಂಪೂರ್ಣವಾಗಿ ಹಿಂದೂ ರಾಷ್ಟ್ರಕ್ಕೆ ಅಧೀನರಾಗಿ ಬದುಕಬೇಕು. ಯಾವುದೇ ಸೌಲಭ್ಯಗಳನ್ನು ಕಡೆಗೆ ಪೌರತ್ವವನ್ನು ಕೂಡ, ನಿರೀಕ್ಷಿಸಬಾರದು.'






■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ – ೫೮೫ ೧೦೨
✆ : ೦೮೪೭೨-೨೨೪೩೦೨

ಮೊದಲಿನಿಂದಲೂ ಆರೆಸ್ಸೆಸ್ಸಿನ ತಾರಕಮಂತ್ರ ಅಖಂಡ ಭಾರತದಲ್ಲಿ ವಾಸಿಸುವ ಹಿಂದುಗಳಲ್ಲದ, ಇತರ ಎಲ್ಲ ಧರ್ಮೀಯರೂ ಸಹ ಹಿಂದೂಗಳಿಗೆ ಅಧೀನರಾಗಿರ ಬೇಕು ಎಂಬುದು. ಮೋಹನ್ ಭಾಗವತ್ ಈಗ ಅದನ್ನು ಪುನರುಚ್ಚರಿಸುತ್ತಿರುವುದಕ್ಕೆ ಕಾರಣ ತಮ್ಮ ಅಂಗಸಂಸ್ಥೆಯಾದ, ರಾಜಕೀಯ ಮುಖವಾಡವಾದ ಭಾರತೀಯ ಜನತಾಪಕ್ಷ ಅತ್ಯಧಿಕ ಬಹುಮತದಿಂದ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿರುವುದೇ ಆಗಿದೆ. ಸಂದರ್ಭಕ್ಕೆ ತಕ್ಕಹಾಗೆ ಅವರು ಈಗ ಬಹಿರಂಗವಾಗಿ ತಮ್ಮ ಸಿದ್ಧಾಂತಕ್ಕೆ ಪ್ರಚಾರ ನೀಡತೊಡಗಿದ್ದಾರೆ.

ಇದು ನಿಜವಾಗಿ ಆತಂಕಕಾರಿ ಬೆಳವಣಿಗೆ. ಅಭಿವೃದ್ಧಿ, ದಕ್ಷ ಆಡಳಿತದ ಮಂತ್ರ ಜಪಿಸಿದ ಮೋದಿ ಸರಕಾರ ಅಧಿಕಾರಕ್ಕೆ ಬಂದು ಇನ್ನೂ ಮೂರು ತಿಂಗಳೂ ಕಳೆದಿಲ್ಲ ಆಗಲೇ ಒಂದೊಂದಾಗಿ ಹಿಂದುತ್ವವಾದಿ ಅಜೆಂಡಾ ಹೊರಬರುತ್ತಿದೆ. ಗಮನಿಸಬೇಕಾದ ಇನ್ನೊಂದು ಸಂಗತಿ ಎಂದರೆ ಭಾಜಪದ ಸಂಘಟನೆಯ ಮೇಲೂ ಆರೆಸ್ಸೆಸ್‌ನ ಹಿಡಿತ ಹೆಚ್ಚಾಗಿದೆ. ಅಧಿಕಾರ ವರ್ಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಆರೆಸ್ಸೆಸ್ ಪ್ರಮುಖರು ಸೇರಿಕೊಂಡಿದ್ದಾರೆ. ಇನ್ನು ಮುಂದೆ ಹಿಂದುತ್ವದ ಪ್ರಚಾರ ಮತ್ತಷ್ಟು ಬಿರುಸುಗೊಳ್ಳುವುದನ್ನು ನಿರೀಕ್ಷಿಸಬಹುದು. ತಮ್ಮ ಸಿದ್ಧಾಂತವನ್ನು ಹರಡಲು ಯಾವ ಜನ ವಿಭಾಗವನ್ನು ಆಶ್ರಯಿಸಬೇಕು ಎನ್ನುವುದನ್ನು ಆರೆಸ್ಸೆಸ್ ಚೆನ್ನಾಗಿ ಅರಿತಿದೆ, ಪಳಗಿದೆ. ವಿದ್ಯಾರ್ಥಿಗಳು, ಪಠ್ಯಪುಸ್ತಕಗಳು ಒಂದು ಕಡೆಯಾದರೆ, ಗೃಹಿಣಿಯರನ್ನು ಬಳಸಿಕೊಳ್ಳಲು ನಾನಾಬಗೆಯ ವ್ಯವಸ್ಥೆಯನ್ನು ರೂಪಿಸಿದ್ದಾರೆ. ಧರ್ಮನಿರಪೇಕ್ಷತೆಯ ಭಾವನೆಯನ್ನು ತೊಡೆದುಹಾಕಲು, ಹಿಂದೂ ರಾಷ್ಟ್ರದ ಕಲ್ಪನೆಯನ್ನು ಬೇರೂರಿಸಲು ಬೇಕಾದ ಎಲ್ಲ ಪ್ರಯತ್ನಗಳನ್ನು ಆರೆಸ್ಸೆಸ್ ಮಾಡತೊಡಗಿದೆ.

ಅಪಾಯಕಾರಿಯಾದ ಈ ಪ್ರಯತ್ನಗಳನ್ನು ಈಗಲೇ ಕಿತ್ತೊಗೆಯದಿದ್ದರೆ ಅದು ಈ ದೇಶದ ಬಹುಮುಖೀ ಸಂಸ್ಕೃತಿಯನ್ನು, ಬಹುಧರ್ಮೀಯತೆಯನ್ನು ನಾಶಗೊಳಿಸುತ್ತದೆ. ಇಷ್ಟಕ್ಕೂ ಹಿಂದುತ್ವ ಎನ್ನುವುದು ಪ್ರಾಚೀನ ಮತಧರ್ಮವಲ್ಲ. ಅದು ಹಿಂದೂ ಕೋಮುವಾದಿಗಳು ಹೇಳಿಕೊಳ್ಳುವಂತೆ ಪ್ರಾಚೀನವಾದುದೇನಲ್ಲ. ಈ ಪರಿಕಲ್ಪನೆ ಇತ್ತೀಚಿನದು. ವಸಾಹತುಶಾಹಿ ಕಾಲದಲ್ಲಿ ರೂಢಿಗೆ ಬಂದದ್ದು ಎನ್ನುವುದು ಇತಿಹಾಸ ತಜ್ಞರ ಅಭಿಪ್ರಾಯ. ಹಿಂದು ಎಂಬ ಶಬ್ದದ ಮೂಲ ಪರ್ಶಿಯನ್ ಭಾಷೆಯಿಂದ ಬಂದದ್ದು. ಸಿಂಧು ನದಿಯ ತೀರದಲ್ಲಿ ವಾಸಿಸುತ್ತಿದ್ದ ಜನಸಮುದಾಯವನ್ನು ಗುರ್ತಿಸಲು ಅದು ಬಳಕೆಗೆ ಬಂದಿತು. ಅದು ಕೋಮುವಾದಿಗಳು ಅಂದುಕೊಂಡಿರುವಂತೆ ಏಕರೂಪದ ಹಿಂದೂ ಧರ್ಮವನ್ನು ಪ್ರತಿನಿಧಿಸುವುದಿಲ್ಲ. 'ಹಿಂದೂಯಿಸಂ' ಎನ್ನುವ ಪದ ಒಂದು ಮತಧರ್ಮವನ್ನು ಗುರ್ತಿಸಲು ಪ್ರಯೋಗವಾದದ್ದೆ ಹತ್ತೊಂಬತ್ತನೇ ಶತಮಾನದಲ್ಲಿ. ಅದೂ ಮುಸಲ್ಮಾನರು, ಯೂರೋಪಿಯನ್ನರ ಆಗಮನದ ನಂತರ. ಅದಲ್ಲದೆ ಯಾವುದೇ ಪವಿತ್ರ ಗ್ರಂಥಗಳಲ್ಲಿ, ಧರ್ಮಶಾಸ್ತ್ರಗಳಲ್ಲಿ ಕೂಡ 'ಹಿಂದು' ಎಂಬ ಶಬ್ದ ಕಂಡುಬರುವುದಿಲ್ಲ. ಹಾಗಿರುವಾಗ ಅದಕ್ಕೆ ಸಾವಿರಾರು ವರ್ಷಗಳ ಪ್ರಾಚೀನತೆಯ ಮೆರುಗು ನೀಡುವುದು ಮೂರ್ಖತನ.

ಹಿಂದಿನಿಂದಲೂ ಭಾರತ ಬಹುಧರ್ಮೀಯ ಪ್ರದೇಶವಾಗಿದೆ. ಇಲ್ಲಿ ಹಿಂದೂ ಗಳಲ್ಲದೆ ಬೌದ್ಧರು, ಜೈನರು, ಸಿಖ್ಖರು, ಯಾವ ಮತಧರ್ಮಕ್ಕೂ ಸೇರದ ಚಾರ್ವಾಕರು, ಮುಸಲ್ಮಾನರು, ಕ್ರಿಶ್ಚಿಯನ್ನರು ಮುಂತಾದವರು ಸಹಬಾಳ್ವೆಯಿಂದ ಕೂಡಿ ಬಾಳುತ್ತಿದ್ದಾರೆ. ಭಾರತೀಯ ಸಂಸ್ಕೃತಿಯ ಬೆಳವಣಿಗೆಗೆ ಈ ಎಲ್ಲ ಮತಧರ್ಮೀಯರ ಕಾಣಿಕೆಯೂ ಸೇರಿದೆ. ಹಾಗಿರುವಾಗ ಈ ಬಹುಧರ್ಮೀಯ ಚೌಕಟ್ಟನ್ನು ಮುರಿಯಲು ಹಿಂದುತ್ವವಾದಿ ಸಂಘಪರಿವಾರದವರು ಹೊರಟಿರುವುದು ಖಂಡನೀಯ. ಧರ್ಮನಿರಪೇಕ್ಷತೆಯ ಸಮಾಜವನ್ನು, ರಾಜ್ಯವನ್ನು, ರಾಷ್ಟ್ರವನ್ನು ಬಲಗೊಳಿಸುವುದು ಭಾರತದ ಎಲ್ಲ ಪ್ರಜೆಗಳ ಕರ್ತವ್ಯ. ಸಂವಿಧಾನದತ್ತವಾದ ಧಾರ್ಮಿಕ ಸ್ವಾತಂತ್ರ್ಯವನ್ನು ಎತ್ತಿಹಿಡಿಯುವುದು, ಅದನ್ನು ಬಲಗೊಳಿಸುವುದು, ಮೂಲಭೂತವಾದಿಗಳ ಪ್ರಹಾರದಿಂದ ಅದನ್ನು ಕಾಪಾಡುವುದು ಇಂದು ಹಿಂದೆಂದಿಗಿಂತಲೂ ಹೆಚ್ಚು ಅಗತ್ಯ. ಆರೆಸ್ಸೆಸ್ ಪ್ರಮುಖರ ಹೇಳಿಕೆಗಳನ್ನು ಕಡೆಗಣಿಸಿದರೆ ಅನಾಹುತ ಕಟ್ಟಿಟ್ಟ ಬುತ್ತಿ. ಭಾರತದ ಬಹುಮುಖಿ ಸಂಸ್ಕೃತಿ, ಬಹುಧರ್ಮೀಯತೆಯಲ್ಲಿ ವಿಶ್ವಾಸವಿರುವವರೆಲ್ಲ ಎಚ್ಚೆತ್ತು ಕಾರ್ಯಪ್ರವೃತ್ತರಾಗಬೇಕಾಗಿದೆ.

## ನಾಳೆಗಳೇ ಭೀಕರ



ದೇಶದ ಸಮಗ್ರ ಚಿತ್ರಣವನ್ನೆ  
ಬದಲಾಯಿಸಿ ಬದಲಾವಣೆಯನ್ನು  
ತರುತ್ತೇವೆನ್ನುತ್ತಾರೆ ಆಳುವವರು  
ಆದರೆ, ನಾಳೆಗಳು ಭೀಕರವಾಗಿವೆ  
ಎಂಬ ಸತ್ಯ ಮರೆಮಾಚಿ

ನದಿಗಳನ್ನೆ ಜೋಡಿಸುತ್ತೇವೆ  
ಜಲಶಕ್ತಿಯ ಉತ್ಪಾದಿಸುತ್ತೇವೆಂದು  
ಗಂಗೆಯ ನಿರ್ಮಲಗೊಳಿಸುತ್ತೇವೆಂದು  
ಹೇಳುತ್ತಾರೆ.  
ಆದರೆ, ನಾಳೆಗಳು ಭೀಕರವಾಗಿವೆ  
ಎಂಬ ಅರಿವಿಲ್ಲದೆ.

ದೇಶದ ಗ್ರಾಮಗಳ ದತ್ತುಪಡೆದು  
ದೇಶೋದ್ಧಾರ ಮಾಡುತ್ತೇವೆ  
ನವ ಭಾರತ ನಿರ್ಮಿಸುತ್ತೇವೆ  
ಬೃಹತ್ ಯೋಜನೆ ರೂಪಿಸುತ್ತೇವೆನ್ನುತ್ತಾರೆ  
ಆದರೆ, ನಾಳೆಗಳು ಭೀಕರವಾಗಿವೆ  
ಎಂಬ ಆಲೋಚನೆ ಮಾಡದೆ.

ಕೆಂಪುಕೋಟೆಯ ಮುಂದೆ ನಿಂತು  
ಕೇಸರಿ ರುಮಾಲು ಸುತ್ತಿ  
ಅಭೇದ್ಯ ಭದ್ರಕೋಟೆಯನ್ನು ಕಟ್ಟಿಸಿ  
ಗುಂಡು ನಿರೋಧಕ ಕವಚವ ಸರಿಸಿ  
ಡಿಜಿಟಲ್ ಇಂಡಿಯಾ ಎನ್ನುತ್ತಾರೆ.  
ಆದರೆ, ನಾಳೆಗಳು ಭೀಕರವಾಗಿವೆ  
ಎಂಬ ಸತ್ಯವ ಮರೆಮಾಚಲಾಗದು!

**ಎಸ್. ನಿಂಗರಾಜ್,** ಹೂವಿನಹಡಗಲಿ

***ಈ ತಿಂಗಳು (೩ನೇ ಪುಟದಿಂದ)***

ಎಡಸಿದ್ಧಾಂತದ ತಾತ್ವಿಕತೆಯನ್ನು ಗುರುತಿಸಿದ್ದಾರೆ. ತಮ್ಮ 'ಬಲ ಸಿದ್ಧಾಂತ'ದಲ್ಲಿ ಬಲವಿಲ್ಲವೆಂದು ಅವರ ಮನದಾಳದಲ್ಲಿ ಎಲ್ಲೋ ಖಾತರಿಯಾದ ಭಾವನೆ ಅಡಗಿದೆ. ಭೈರಪ್ಪನವರ ವಾದದಿಂದ ಮರುಳಾದ "ಪ್ರಧಾನ ಸೇವಕ" ನರೇಂದ್ರ ಮೋದಿ ಯೋಜನಾ ಆಯೋಗವನ್ನು ರದ್ದುಪಡಿಸಿರುವುದು ಭೈರಪ್ಪನವರಿಗೆ ಪ್ರಿಯವಾದೀತು. ಅಮಿತ್ ಷಾ ಭಾಜಪದ ಅಧ್ಯಕ್ಷರಾಗಿ ಗುಡುಗಿದ್ದಾರೆ, "ಈ ದೇಶದಲ್ಲಿ ಭಾಜಪ ಸಿದ್ಧಾಂತವೊಂದೇ ಉಳಿಯಬೇಕು, ಬೇರೆ ಸಿದ್ಧಾಂತಗಳನ್ನೆಲ್ಲಾ ಭಾಜಪ – ಆರೆಸ್ಸೆಸ್ ಕಾರ್ಯಕರ್ತರು ಹೂತುಹಾಕಬೇಕು," ಎಂದು. ಅಂದರೆ, ಭೈರಪ್ಪನವರು ಸ್ವಯಂ ನೇಮಕ ಮಾಡಿಕೊಂಡಿರುವ ಭಾಜಪ ಸಿದ್ಧಾಂತಿ ಮತ್ತು ಅವರ ಕಾಣ್ಕೆಯಂತೆ "ಅಪ್ರಯೋಜಕ ಸಿದ್ಧಾಂತಿ." ಹಾಗಿಲ್ಲದಿದ್ದರೆ, ಬಂಡವಳಿಗರಿಗೆ ಇಂದಿರಾ ಗಾಂಧಿ ಶೇ. ೯೭.೨ರಷ್ಟು ಆದಾಯ ತೆರಿಗೆ ವಿಧಿಸಿದ್ದರೆಂದು ಮಹಾನ್ ಸುಳ್ಳನ್ನು ಹೇಳಲು ಸಾಧ್ಯವಿರುತ್ತಿರಲಿಲ್ಲ. ಬಂಡವಳಿಗರ ಲಾಭದ ಯಾವ ಹಂತದಲ್ಲಿ ಎಷ್ಟು ತೆರಿಗೆ ಇರುತ್ತಿತ್ತೆಂಬುದು ಗುಟ್ಟಾಗಿಟ್ಟಿರುವ ವಿಷಯವಲ್ಲ. ವಿಜಯ ಮಲ್ಯ ಎಂಬಾತ ಬ್ಯಾಂಕುಗಳಿಂದ ಸಾಲವಾಗಿ ಪಡೆದ ೨೦೦೦ ಕೋಟಿ ರೂಪಾಯಿಗಳಲ್ಲಿ ಬಿಡಿಗಾಸನ್ನೂ ಹಿಂದಿರುಗಿಸದೆ ಸಾರ್ವಜನಿಕರಿಗೆ ಪಂಗನಾಮ ಹಾಕಿದ್ದಾರೆಂಬುದು ಭೈರಪ್ಪನವರಿಗೂ ತಿಳಿದಿರಬೇಕು. ಅದು ಬಂಡವಾಳಶಾಹಿಯಡಿಯಲ್ಲಿ ಮಾತ್ರವೇ ಸಾಧ್ಯವೆಂಬುದೂ ಅವರಿಗೆ ಗೊತ್ತು. "ಬಂಡವಾಳಶಾಹಿ ಇಲ್ಲದಿದ್ದರೆ ಉದ್ಯೋಗ ಕೊಡುವವರು ಯಾರು ?" ಎಂಬ ಪ್ರಶ್ನೆಯನ್ನು ಶ್ರೀಯುತರು ತಮ್ಮ ಮಾರಕಾಸ್ತ್ರವನ್ನಾಗಿ ಮಾಡಿಕೊಂಡಿದ್ದಾರೆ. ಬಂಡವಾಳಶಾಹಿಯ ವಯಸ್ಸು ಹೆಚ್ಚೆಂದರೆ ಮುನ್ನೂರು ವರ್ಷ. ಅದಕ್ಕೆ ಮುಂಚೆ ಪ್ರಪಂಚದ ಜನ ನಿರುದ್ಯೋಗಿಗಳಾಗಿರಲಿಲ್ಲ ಮತ್ತು ಅದರ ಸಾವಿನ ನಂತರವೂ ಜನ ಉತ್ಪಾದನೆಯಲ್ಲಿ ತೊಡಗಿಯೇ ಇರುತ್ತಾರೆ. "ಸಮಾಜವಾದದಲ್ಲಿ ಸರ್ಕಾರವೇ ಎಲ್ಲವನ್ನೂ ಮಾಡಬೇಕು, ಆದ್ದರಿಂದ ಅದರಲ್ಲಿ ನ್ಯೂನತೆಗಳು ಅಗಾಧ" ಎನ್ನುತ್ತಾರೆ ಮಾನ್ಯ ಭೈರಪ್ಪನವರು. ಸರ್ಕಾರವೆಂದರೆ ಯಾವುದೋ ಕಲ್ಲೇನು ? ಎಲ್ಲ ವ್ಯವಸ್ಥೆಗಳಲ್ಲೂ ದುಡಿಯುವವರು ಜನಸಮುದಾಯದವರೇ; ಸಮಾಜವಾದದಲ್ಲೂ ಅಷ್ಟೇ. "ದರೋಡೆ ಮಾಡದಿದ್ದರೆ ಸಂಪತ್ತು ವೃದ್ಧಿಯಾಗುವುದಿಲ್ಲ" ಎಂಬುದು ಬಂಡವಾಳಶಾಹಿ ಪರವಾದ ಭೈರಪ್ಪನವರ ಕೊರಗು. ಮಹಾನ್ ಸಾಹಿತಿಯಾಗಿ ಶ್ರೀಯುತರು ಈ ಕೊರಗನ್ನೇ ಬಂಡವಾಳ ಮಾಡಿಕೊಂಡು ಸಾಹಿತ್ಯ ಸೃಷ್ಟಿಯಲ್ಲಿ ಉನ್ನತ ಹಂತಕ್ಕೇರಿದ್ದಾರೆ. ಅವರ ಸಿದ್ಧಾಂತ ಅಪ್ರಯೋಜಕವಾದರೇನಂತೆ, ಅವರ ಯಾನ ಸುಸೂತ್ರವಾಗಿ ಸಾಗಿದೆ, ಏಕೆಂದರೆ 'ಯಾನ' ಕಾದಂಬರಿಯು ದಿನಕ್ಕೆ ಮೂರುಸಾವಿರದಂತೆ ಅಚ್ಚಾಗಿವೆಯಲ್ಲ !

✶ ✶ ✶

ಸಿದ್ಧಾಂತಿ ಭೈರಪ್ಪನವರ ಇನ್ನೊಂದು ಸ್ಮರಣಯೋಗ್ಯ ಸೂಕ್ತಿ ಇದೆ: "ದ್ರಾವಿಡ ಮುನ್ನೇತ್ರ ಕಳಗಂ" ಪಕ್ಷ ಮತ್ತು ತಮಿಳರಿಂದಾಗಿ ತಮಿಳುನಾಡಿನಲ್ಲಿ ಸಂಸ್ಕೃತವು ಊರ್ಜಿತವಾಗುತ್ತಿಲ್ಲ, ಎಂದು. ಅವೆರಡೂ ಇಲ್ಲದ ನಮ್ಮ ಕರ್ನಾಟಕದಲ್ಲಿ ಸಂಸ್ಕೃತವು ಅದ್ಭುತವಾಗಿ ವರ್ಧಿಸುತ್ತಿದೆಯೆಂಬ ಸಂತಸವು ಶ್ರೀಯುತರದು. ನಮ್ಮ ರಾಜ್ಯದಲ್ಲಿ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಗಳಿಗೆ ಘಟಿಕೋತ್ಸವ ಏರ್ಪಡಿಸುವ ಸಂಸ್ಕೃತ ವಿಶ್ವವಿದ್ಯಾನಿಲಯ ಇರುವಾಗ ಸಂಸ್ಕೃತವು ಶಿಖರಗಳನ್ನೇರುವುದು ಶತಸ್ಸಿದ್ಧ, ಏಕೆಂದರೆ ಡಾ॥ ಭೈರಪ್ಪನವರು ಸದರಿ ವಿಶ್ವವಿದ್ಯಾನಿಲಯವನ್ನು ಬೆಂಬಲಿಸಿ "ಅಂತಹ ವಿಶ್ವವಿದ್ಯಾನಿಲಯ ಇಲ್ಲದಿದ್ದರೆ ಕನ್ನಡ ಬೆಳೆಯುವುದಿಲ್ಲ" ಎಂಬ ಭವಿಷ್ಯವನ್ನು ನಾಲ್ಕು ವರ್ಷಗಳ ಹಿಂದೆಯೇ ನುಡಿದಿದ್ದರು ! ಅದಕ್ಕೆ ಸ್ವಲ್ಪ ಮುಂಚೆ "ಬುದ್ಧ ಒಬ್ಬ ಜನವಿರೋಧಿ ತತ್ತ್ವಜ್ಞಾನಿ" ಎಂಬ ನಿರ್ಣಯವನ್ನೂ ಅವರು ಘೋಷಿಸಿದ್ದರು. ತಮಿಳುನಾಡಿನಲ್ಲಿ ಎ. ಶಂಕರನ್, ವಿ. ರಾಘವನ್, ಎಸ್. ಕುಪ್ಪುಸ್ವಾಮಿ ಶಾಸ್ತ್ರಿ, ಟಿ. ಎಂ. ಪಿ. ಮಹಾದೇವನ್, ಕೆ. ವಿ. ಶರ್ಮ, ಎಸ್. ಜಾನಕಿ, ಮುಂತಾದವರ ಶಿಷ್ಯರು ಈಗಲೂ ಸಂಸ್ಕೃತ ಗ್ರಂಥಗಳನ್ನೋದುತ್ತಿದ್ದಾರೆ, ಇತರರಿಗೆ ಪಾಠ ಹೇಳುತ್ತಿದ್ದಾರೆ. ಕರುಣಾನಿಧಿ ಮತ್ತು ಜಯಲಲಿತ ಅದಕ್ಕೆ ನಿರ್ಬಂಧವನ್ನೇನೂ ಹೇರಿಲ್ಲ. ತಂಜಾವೂರಿನ ಸರಸ್ವತಿ ಮಹಲ್ ಪುಸ್ತಕಭಂಡಾರ, ಚೆನ್ನೈನ ಅಡ್ಯಾರ್ ಪುಸ್ತಕ ಭಂಡಾರ, ಕುಪ್ಪುಸ್ವಾಮಿ ಶಾಸ್ತ್ರಿ ಸಂಶೋಧನಾ ಸಂಸ್ಥೆ, ಮುಂತಾದುವಕ್ಕೆಲ್ಲಾ ಈಗಲೂ ತಮಿಳುನಾಡು ಸರ್ಕಾರವು ಅನುದಾನ ನೀಡುತ್ತಿದೆ. ತಮಿಳುನಾಡಿನಲ್ಲಿ ವಿರೋಧ ಬಂದಿದ್ದು ಸಂಸ್ಕೃತದ ಹೆಸರಿನಲ್ಲಿ ನಡೆಸಲಾಗುತ್ತಿದ್ದ "ಸಾಂಸ್ಕೃತಿಕ ಯಜಮಾನಿಕೆ"ಗೆ. ಅದು ಬೇರೆ ರಾಜ್ಯಗಳಲ್ಲೂ ನಡೆದಿದೆ. ಒಂದು ಭಾಷೆ ಮತ್ತು ಅದರ ಪ್ರೇರಣೆಯನ್ನು ರಾಜಕೀಯ ಆಯುಧವನ್ನಾಗಿ ಮಾರ್ಪಡಿಸಿಕೊಳ್ಳುವ ಹುನ್ನಾರಕ್ಕೆ ಜನರಿಂದ ವಿರೋಧ ಬಂದರೆ ಅದು ಅಪರಾಧವೆ ? ಸಂಸ್ಕೃತ ಎಂದರೆ "ಅವೈಚಾರಿಕತೆಯ ಗೂಡು" ಎಂಬ ತಪ್ಪು ಕಲ್ಪನೆಯನ್ನು ತೊಲಗಿಸುವುದು ಮಾನ್ಯ ಡಾ॥ ಭೈರಪ್ಪನವರಿಗೆ ಶೋಭೆ ತರುತ್ತದೆ. ಮೊದಲು ಅವರು ಅದನ್ನು ಮಾಡಿದರೆ ಒಳಿತು.

✶ ✶ ✶

ಕೇಂದ್ರ ಮಾನವ ಸಂಪನ್ಮೂಲ ಸಚಿವೆ ಶ್ರೀಮತಿ. ಸ್ಮೃತಿ ಇರಾನಿಯವರು ತಾವು ಪದವೀಧರರಲ್ಲವೆಂಬ ವಿಚಾರವನ್ನು ಅನಗತ್ಯವಾಗಿ ವಿಪರೀತ ತಲೆಗೆ ತುಂಬಿಕೊಂಡಿದ್ದಾರೆ. ಅದರಿಂದಾಗಿ ಆಗಾಗ್ಗೆ ಏನೇನೋ ಸಮರ್ಥನೆ ನೀಡಲು ಮುಂದಾಗುತ್ತಿದ್ದಾರೆ. ಪದವಿಯನ್ನು ಹೊಂದಿದವರು ಮಾತ್ರವೇ ಸಚಿವರಾಗಬೇಕೆಂದು ಸಂವಿಧಾನವು ಹೇಳಿಲ್ಲ ಮತ್ತು ಪದವಿಗಳನ್ನು ಹೊಂದದಿದ್ದವರು ಹಲವರು ಯಶಸ್ವಿ ಸಚಿವರಾಗಿ ಕೆಲಸ ಮಾಡಿದ್ದಾರೆ. ಅಂತೆಯೇ ಅನೇಕ ಪದವಿಗಳನ್ನು ಕುತ್ತಿಗೆಗೆ ನೇತುಹಾಕಿಕೊಂಡಿದ್ದ ಅತ್ಯಂತ ಅಯೋಗ್ಯ ಸಚಿವರು ನಮ್ಮಲ್ಲಿ ಆಗಿಹೋಗಿದ್ದಾರೆ. ಈಗಲೂ ಶ್ರೀಮತಿ. ಇರಾನಿಯವರ ಸಹೋದ್ಯೋಗಿಗಳಲ್ಲಿ ಅಂಥವರಿದ್ದಾರೆ. ಪದವಿಯ ಅಭಾವದ ಬೀಸುಕಲ್ಲನ್ನು ಧರಿಸಿಕೊಂಡು ಅಸ್ವಸ್ಥರಾಗುವ ಬದಲು ಶ್ರೀಮತಿ. ಸ್ಮೃತಿಯವರು ಸ್ವಲ್ಪ ವೈಚಾರಿಕ ಅಂಶಗಳ ಪರಿಚಯ ಮಾಡಿಕೊಳ್ಳುವುದು ಅವರಿಗೆ ಮತ್ತು ಅವರ ಸಚಿವಾಲಯಕ್ಕೆ ಆರೋಗ್ಯಕರ. ದೀನನಾಥ ಬತ್ರನಂತಹ "ವಿದ್ವಾಂಸ"ನ ಅಸಾಧ್ಯ ಪಾಂಡಿತ್ಯಕ್ಕೆ ಮರುಳಾಗದೆ ಆತನನ್ನು ಹಾಗೂ ಆತನಂಥವರನ್ನು ದೂರವಿರಿಸಿದರೆ ಸಾಕು, ಸಚಿವೆಯು ನಿಷ್ಕಳಂಕವಾಗಿ ಕೆಲಸ ಮಾಡಬಹುದು. ಆದರೆ ಅವರಿಗೆ ಏಕೋ ಏನೋ ಸುಳ್ಳುಗಳನ್ನು ಹೇಳುವುದು ಸರಾಗವಾಗಿಹೋಗಿದೆ. ರವಿಶಂಕರ ಗುರುವಿನಂತಹ ಸಾನ್ನಿಧ್ಯದಲ್ಲಿ ಬೇಕಾದರೆ ಆಕೆ ನಿರರ್ಗಳವಾಗಿ ಉಪನ್ಯಾಸ ನೀಡಬಲ್ಲರು; ಏಕೆಂದರೆ, ಅಲ್ಲಿ ಹೇಳಿದ್ದೆಲ್ಲಾ ತರ್ಕಶುದ್ಧವಾಗಿರಬೇಕು, ಅರ್ಥವತ್ತಾಗಿರಬೇಕು, ಎಂಬ ನಿಯಮವಿಲ್ಲ. ಸಚಿವೆಯಾಗಿ ಸುಳ್ಳು ಹೇಳಿದರೆ ವಿನಾಕಾರಣ ಮುಳ್ಳಿನ ಬೇಲಿಯಲ್ಲಿ ಸಿಲುಕಿಕೊಂಡು ಪ್ರಧಾನ ಸೇವಕ ಮೋದಿಯವರ ಕೃಪೆಯನ್ನು ಆಶ್ರಯಿಸಬೇಕಾಗುತ್ತದೆ. ಇತ್ತೀಚಿನ ಅವರ ಪರಮಸುಳ್ಳು ಅವರನ್ನು ಹಾಸ್ಯಾಸ್ಪದವನ್ನಾಗಿಸಿದೆ. ತಮ್ಮ ವ್ಯಾನಿಟಿ ಬ್ಯಾಗಿನಲ್ಲಿ ಅಮೆರಿಕಾದ ಪ್ರತಿಷ್ಠಿತ ಯೇಲ್ ವಿಶ್ವವಿದ್ಯಾನಿಲಯವು ನೀಡಿರುವ ಪದವಿಯ ದಾಖಲೆ ಇದೆಯೆಂದು ಪತ್ರಕರ್ತರಿಗೆ ಆಕೆ ಹೇಳಿದರು. ಆ "ಪದವಿ" ಅವರು ಪಡೆದದ್ದು ಅಲ್ಲಿ ಆರು ದಿನಗಳ ಕೆಲಸಕ್ಕೆ ಬಾರದ ಒಂದು ತರಬೇತಿ ಶಿಬಿರದಲ್ಲಿ ಪಾಲ್ಗೊಂಡಿದ್ದರಿಂದ. ನಮ್ಮ ದೇಶದ ಸರ್ಕಾರವು ಗುಲಾಮಿ ಸರ್ಕಾರದಂತೆ ವರ್ತಿಸಲು ಅದಕ್ಕೆ ನಾಚಿಕೆಯಿಲ್ಲ: ನಮ್ಮ ಪಾರ್ಲಿಮೆಂಟ್ ಸದಸ್ಯರನ್ನು ಮತ್ತು ಸಚಿವರನ್ನು ಇಂತಹ ಕ್ಷುಲ್ಲಕ ತರಬೇತಿಗೆ ಕಳಿಸುವುದು ಅಕ್ಷಮ್ಯ. ಆ ಘನಂದಾರಿ ತರಬೇತಿ ನೀಡಲು ನಮ್ಮ ದೇಶದಲ್ಲಿ ಸಾವಿರಮಂದಿ ಇದ್ದಾರೆ. ಅಮೆರಿಕಾ ಸರ್ಕಾರಕ್ಕೆ ಅನುಕೂಲವಾಗುವಂತಹ ಭಾರತವಿರೋಧಿ ಕುತಂತ್ರಗಳನ್ನು ನಮ್ಮ ದೇಶಕ್ಕೆ ಅತ್ಯಂತ ಶ್ರೇಯಸ್ಕರವಾದ ನೀತಿಗಳೆಂಬ ನೀಚತನದ ಬೋಧನೆ ಪಡೆಯಲು ನಮ್ಮ ಪ್ರತಿನಿಧಿಗಳು ಅಮೆರಿಕಾದ ಜೀತದಾಳುಗಳೆ ? ಯಾವಾಗಲೂ 'ರಾಷ್ಟ್ರೀಯತೆಯೇ ನಮ್ಮ ಉಸಿರು' ಎಂದು ನುಡಿಯುವ ಮೋದಿಯವರು ಇಂತಹ ಪರದೇಸಿ ತರಬೇತಿಗೆ ಸಚಿವೆ ಇರಾನಿಯಂಥವರನ್ನು ಕಳಿಸಿದ್ದಾದರೂ ಏಕೆ ? ಅಷ್ಟಕ್ಕೂ ಏನಿದು ಯೇಲ್ ವಿಶ್ವವಿದ್ಯಾನಿಲಯ ? ಅದರ ಉಗಮ ಹೇಗಾಯಿತು ಗೊತ್ತೆ ? ಯೇಲ್ ಎಂಬೊಬ್ಬ ಬಿಳಿಯನಿದ್ದ, ಅವನು ಆಫ್ರಿಕಾದ ಕರಿಯರನ್ನು ಗುಲಾಮರನ್ನಾಗಿ ಕೊಂಡು ಅಮೆರಿಕಾಕ್ಕೆ ತರುವ ಉದ್ಯೋಗ ಹೊಂದಿದ್ದ. ಅಮೆರಿಕಾದಲ್ಲಿ ಬಿಳಿಯ ಜಮೀನ್ದಾರರಿಗೆ ಅವರನ್ನು ಮಾರಿ ಅಪಾರ ಹಣ ಗಳಿಸಿಕೊಂಡ. ಅದರ ಪಾಪಪ್ರಜ್ಞೆಯನ್ನು ಪರಿಹರಿಸಿಕೊಳ್ಳಲು ಅವನು ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ. ಆ ಕಾರಣಕ್ಕೆ ಯಾರೂ ಅಲ್ಲಿ ವಿದ್ಯಾರ್ಥಿಗಳಾಗಬಾರದೆಂದಲ್ಲ, ಆದರೆ ನಮ್ಮ ಜನಪ್ರತಿನಿಧಿಗಳು ಅಲ್ಲಿಗೆ ಹೋಗಿ, ನಮ್ಮ ದೇಶದ ಹಣವನ್ನು ಸುರಿದು, ಗುಲಾಮಗಿರಿಯ ಪಾಠವನ್ನು ಕೇಳಿಬರಬೇಕಾಗಿಲ್ಲ. ಅದನ್ನು "ತರಬೇತಿ" ಎಂದು ಕರೆಯುವುದು ವಿಷವನ್ನು ಅಮೃತವೆಂದು ಸ್ವೀಕರಿಸುವುದಕ್ಕೆ ಸಮನಾದ್ದು. ಅಂತಹ "ತರಬೇತಿ" ಪಡೆದಿದ್ದಕ್ಕೆ ಒಂದು ತುಂಡು ಪತ್ರದಲ್ಲಿ ಯೇಲ್ ಸಚಿವೆ ಸ್ಮೃತಿ ಇರಾನಿಯವರಿಗೆ ಒಂದು "ಹಾಜರಿ ಪ್ರಮಾಣ ಪತ್ರ" ನೀಡಿದೆ. ಅದನ್ನವರು ಪದವಿ ಪ್ರಮಾಣ

ಪತ್ರವೆಂದು ಹೇಳಿಕೊಂಡಿದ್ದಾರೆ, ಪತ್ರಕರ್ತರನ್ನು ದಂಗು ಬಡಿಸಿದ್ದಾರೆ. ನಮ್ಮ ಪಾರ್ಲಿಮೆಂಟ್ ಸದಸ್ಯರನ್ನೂ, ಸಚಿವರನ್ನೂ ಯೇಲ್‌ಗೆ "ತರಬೇತಿ"ಗಾಗಿ ಸರ್ಕಾರವು ಕಳಿಸಿದುದರ ಬಗ್ಗೆ ಪೂರ್ಣಪ್ರಮಾಣದ ತನಿಖೆಯಾಗ ಬೇಕು, ದೇಶದ ಪ್ರಧಾನ ಮಂತ್ರಿಯವರು ಅದಕ್ಕೆ ಜನರ ಕ್ಷಮೆ ಕೇಳಬೇಕು, ಮತ್ತೆ ಇಂತಹ ಪ್ರಸಂಗ ನಡೆಯು ವುದಿಲ್ಲವೆಂದು ಆಶ್ವಾಸನೆ ಕೊಡಬೇಕು. ಮಾನ್ಯ ಸಚಿವೆ ಶ್ರೀಮತಿ. ಸ್ಮೃತಿ ಇರಾನಿಯವರು ಆ ಹಾಜರಿ ಪತ್ರವನ್ನು ಹರಿದು ಅವರ ಕಚೇರಿಯಲ್ಲಿರುವ ಕಸದ ಬುಟ್ಟಿಗೆ ಹಾಕಿ ಕೈ ತೊಳೆದುಕೊಳ್ಳುವುದು ಪ್ರಾಯಶ್ಚಿತ್ತವಲ್ಲ ದಿದ್ದರೂ ಮಾನಸಿಕವಾಗಿ ಆರೋಗ್ಯಕರ.

✶ ✶ ✶

ನಮ್ಮ ದೇಶದ ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಲಯಗಳಿಗೆ ನ್ಯಾಯಮೂರ್ತಿಗಳನ್ನು ನೇಮಕ ಮಾಡಲು ಹೊಸ ವಿಧಾನವೊಂದನ್ನು ಅನುಸರಿಸಲು ತೀರ್ಮಾನಿಸಿರುವುದು ಸ್ವಾಗತಾರ್ಹ ಕ್ರಮ. ತಮ್ಮನ್ನು ತಾವೇ ಆಯ್ಕೆ ಮಾಡಿಕೊಳ್ಳುವುದು, ತಮಗೆ ತಾವೇ ಬಡ್ತಿ ಕೊಟ್ಟುಕೊಳ್ಳುವುದು ಮತ್ತು ಅದರಿಂದ ನ್ಯಾಯಾಂಗವು ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುತ್ತದೆ ಎಂಬ ಐತಿಹ್ಯವು ಇಪ್ಪತ್ತು ವರ್ಷಗಳಿಗೂ ಹೆಚ್ಚು ಕಾಲ ಸಾರ್ವಭೌಮತ್ವದ ಸ್ಥಾನದಲ್ಲಿತ್ತು. ಅದರಿಂದ ನ್ಯಾಯಾಂಗವು ಎಂತಹ ಸ್ವಾತಂತ್ರ್ಯವನ್ನು ಭೋಗಿಸಿತು ಎಂಬುದನ್ನು ಚರ್ಚಿಸುವುದು ಬೇಡ, ಅದರಿಂದ ನ್ಯಾಯಾಂಗವು ಸಿಟ್ಟಾಗಬಹುದು. ಅಲ್ಲದೆ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶ ಶ್ರೀ. ಲೋಧಾ ಅವರು ತಮ್ಮ ತವಕವನ್ನು ವ್ಯಕ್ತಪಡಿಸಿದ್ದಾರೆ : "ನ್ಯಾಯಾಂಗವನ್ನು ಟೀಕೆ ಮಾಡಲಾರಂಭಿಸಿದರೆ ದೇಶದ ಜನಕ್ಕೆ ನ್ಯಾಯಾಂಗದ ಬಗೆಗಿನ ನಂಬಿಕೆ ಕ್ಷೀಣಿಸಿಬಿಡುತ್ತದೆ," ಎಂದು. ವಿಚಾರ ಮಾಡಬೇಕಾದ ಸಂಗತಿಯೇ ಸರಿ. ಆದರೆ ಮೂಲಪ್ರಶ್ನೆ ಹೀಗೂ ಇರಬಹುದು : "ನ್ಯಾಯಾಂಗದ ಬಗ್ಗೆ ಜನ ನಂಬಿಕೆ ಇರಿಸಿಕೊಂಡಿದ್ದುದು ಯಾವಾಗ ?" ನ್ಯಾಯಾಂಗವು ತಿಳಿಸಿರುವಂತೆ ಕಾರಾಗೃಹಗಳಲ್ಲಿ ಅಪರಾಧಿಗಳಿಗಿಂತಲೂ ತನಿಖೆಗೆ ಒಳಗಾಗಬೇಕಾದವರೇ ಹೆಚ್ಚಾಗಿದ್ದಾರೆ. ಮೊಕದ್ದಮೆಗಳೇ ನಡೆಯದೆ ಲಕ್ಷಗಟ್ಟಲೆ ಜನ ಐದು – ಹತ್ತು ವರ್ಷಗಳಿಂದ ಕಾರಾಗೃಹಗಳಲ್ಲಿ ಕೊಳೆಯು ತ್ತಿದ್ದಾರೆ, ಅವರ ಜೀವನ ಭಸ್ಮವಾಗಿಹೋಗಿದೆ. ಎಂತಹ ನಂಬಿಕೆ ಇರಿಸಿಕೊಳ್ಳೋಣ !

✶ ✶ ✶

ಪ್ರಧಾನಿಯವರು ಕೆಂಪುಕೋಟೆಯ ಮೇಲಿಂದ ದೇಶವನ್ನು ಉದ್ದೇಶಿಸಿ ಮಾತನಾಡುವಾಗ ಗುಂಡೇಟನ್ನು ಹಿಮ್ಮೆಟ್ಟಿಸುವ ಗಾಜಿನ ಪಂಜರದ ರಕ್ಷಣೆಯನ್ನು ಪಡೆಯದಿದ್ದುದು ಅಭಿನಂದನಾರ್ಹ ಕ್ರಮ. ರಕ್ಷಣಾ ಪಡೆಗಳಲ್ಲಿ ವಿಶ್ವಾಸ ಇರಿಸಿದಂತಾಯಿತು. ಎಲ್ಲ ಕೋಮುಗಳ, ಎಲ್ಲ ಜಾತಿಗಳ, ಜನರನ್ನು ಸಮಾನವಾಗಿ ಕಾಣುವುದಾಗಿ ಅವರು ಹೇಳಿದರು; ಆದರೆ ಅವರ ಸ್ವಂತ ಪಡೆಗಳಾದ ಆರೆಸ್ಸೆಸ್, ದಳ, ಪರಿಷತ್, ಸೇನೆ ಮುಂತಾದುವನ್ನು ಹತೋಟಿಯಲ್ಲಿಟ್ಟುಕೊಳ್ಳುವ ಮಾತನ್ನಾಡಲಿಲ್ಲ. ಅದೊಂದು ನ್ಯೂನತೆ. ದಿನ ಬೆಳಗಾದರೆ ಒಂದಲ್ಲ ಒಂದು ಮತೀಯ ಉಪಟಳವನ್ನು ಸೃಷ್ಟಿಸುವ ಶ್ರೀ. ಮೋದಿಯವರ ಪಡೆಯನ್ನು ನಿಗ್ರಹಿಸುವವರು ಯಾರು ? ಆಯಾ ರಾಜ್ಯಗಳ ಪೊಲೀಸರೋ ಅಥವಾ ಉಪಟಳಗಳಿಗೆ ಗುರಿ ಯಾಗುವ ಜನರೋ ? ಶ್ರೀ. ಮೋದಿಯವರ ಪಕ್ಷವು ಉಪಟಳದ ಕೃತ್ಯಗಳನ್ನು ಬೆಂಬಲಿಸುತ್ತದೆ ಮತ್ತು ಕಿರಿಕಿರಿಯುಂಟುಮಾಡುವ ಅಬದ್ಧ ಮಾತುಗಳ ನ್ನಾಡುತ್ತದೆ; ಹಿಂದು ಕ್ರೈಸ್ತ, ಹಿಂದು ಮುಸಲ್ಮಾನ, ಹಿಂದು ಹಿಂದು, ಮುಂತಾದ ಪರಿಭಾಷೆಯನ್ನು ಬಳಸ ಬೇಕೆಂದು ಒತ್ತಾಯಿಸುವ ಮೋಹನ್ ಭಾಗವತ್ ಅವರಿಗೆ ಗೃಹ ಸಚಿವ ಶ್ರೀ. ರಾಜನಾಥ ಸಿಂಗ್ ಬುದ್ಧಿವಾದ ಹೇಳುವರೆ ? ಅಂದರೆ, ಮೋದಿಯವರ ಘೋಷಿತ ಆಶಯವು ಈಡೇರದಂತೆ ಅವರ ಪಕ್ಷದ ಬೇರೆಬೇರೆ ವಿಭಾಗಗಳು ಕಾರ್ಯಪ್ರವೃತ್ತವಾಗು ವುದನ್ನು ಶ್ರೀ. ಮೋದಿಯವರು ತಡೆಯಲು ಸಿದ್ಧ ರಾಗುತ್ತಾರೆಯೇ ? ರಾಷ್ಟ್ರಕ್ಕೆ ಬದ್ಧತೆ, ನೈತಿಕತೆ, ಎಲ್ಲಾ ಅವರ ಏಕಸ್ವಾಮ್ಯದಲ್ಲಿದೆಯೆಂಬಂತೆ ಮೋದಿಯವರ ಪಕ್ಷದ ವಿದ್ಯಾರ್ಥಿ ಪರಿಷತ್ತು ನಡೆದುಕೊಳ್ಳುತ್ತದೆ. ಭಾರತದ ಸಂವಿಧಾನಕ್ಕಿಂತಲೂ ಈ ಪರಿಷತ್ತು ವಿಧಿಸುವ ಸಂವಿಧಾನವು ಶ್ರೇಷ್ಠವೆಂದು ಮೋದಿಯವರು ಬಗೆದಿದ್ದಾರೆಯೆ ? ಇಲ್ಲವಾದಲ್ಲಿ ಅವರ ವಿದ್ಯಾರ್ಥಿ ಪರಿಷತ್ತಿಗೆ ಎಲ್ಲೆ ಮೀರದಂತೆ ಕಟ್ಟುಪಾಡುಗಳನ್ನು ವಿಧಿಸಬೇಕು. ರಾಜ್ಯ ಪೊಲೀಸರಿಗಿಂತಲೂ ಉನ್ನತ ಮಟ್ಟದ ಪೊಲೀಸ್ ದಳದಂತೆ ಪರಿಷತ್ತು ನಡೆದು ಕೊಂಡಾಗ ರಾಜ್ಯಯಂತ್ರವು ವೀಕ್ಷಕನಾಗಿ ಉಳಿಯುವುದು ಸರ್ವಥಾ ಅಸಮರ್ಥನೀಯ. ಮುಂಬೈನ ಸೆಂಟ್ ಜ಼ೇವಿಯರ್ ಕಾಲೇಜು ಒಂದು ವಿಚಾರಗೋಷ್ಠಿಗೆ ಕಬೀರ್ ಮಂಚದ ಕಾರ್ಯಕರ್ತೆ ಶೀತಲ್ ಸಾತೆಯವರನ್ನು ಆಹ್ವಾನಿಸಿತ್ತು, ಆದರೆ ಬಲಪ್ರಯೋಗ ಮಾಡುವ ಬೆದರಿಕೆ ಹಾಕಿ ವಿದ್ಯಾರ್ಥಿ ಪರಿಷತ್ತು ಆಹ್ವಾನವನ್ನು ಹಿಂತೆಗೆದುಕೊಳ್ಳುವಂತೆ ಕಾಲೇಜಿನ ಮೇಲೆ ಅಧಿಕಾರ ಚಲಾಯಿಸಿತು. ಕಾಲೇಜಾಗಲಿ, ರಾಜ್ಯ ಪೊಲೀಸರಾಗಲಿ, ರಾಜ್ಯ ಸರ್ಕಾರವಾಗಲಿ ಇದನ್ನೆಲ್ಲಾ ನೋಡಿಯೂ ನೋಡದಂತೆ ನಾಟಕವಾಡಿದರು. ಕಾಲೇಜಿನ ಸ್ವಾತಂತ್ರ್ಯಹರಣ ವಾಯಿತು. ಶೀತಲ್ ಅವರ ವ್ಯಕ್ತಿ ಸ್ವಾತಂತ್ರ್ಯವನ್ನು ನುಚ್ಚುನೂರು ಮಾಡಲಾಯಿತು. ಮೋದಿಯವರಿಗೂ ಇದು ತಿಳಿದೇಇರುತ್ತದೆ. ಆದರೆ ಅವರು ನಿಷ್ಕ್ರಿಯ ರಾದರು. ಶೀತಲ್ ಅವರನ್ನು ತೀವ್ರವಾದಿಯೆಂದು ಶಂಕಿಸಿ ಪೊಲೀಸರು ದಸ್ತಗಿರಿ ಮಾಡಿದ್ದುದು ನಿಜ, ಆದರೆ ನ್ಯಾಯಾಲಯವು ಅವರಿಗೆ ಜಾಮೀನು ನೀಡಿದೆ ಮತ್ತು ಅವರ ನಾಗರಿಕ ಹಕ್ಕುಗಳ ಮೇಲೆ ಯಾವ ದಿಗ್ಬಂಧನವನ್ನೂ ಹೇರಿಲ್ಲ. ಹೀಗಿರುವಾಗ ವಿದ್ಯಾರ್ಥಿ ಪರಿಷತ್ತಿನ ಕೆಲವು ಸದಸ್ಯರು ಆಕೆಯನ್ನು "ರಾಷ್ಟ್ರ ದ್ರೋಹಿ" ಎಂದು ಕರೆದು "ರಾಷ್ಟ್ರದ ಹಿತದ ದೃಷ್ಟಿಯಿಂದ ಆಕೆಗೆ ನೀಡಿರುವ ಆಹ್ವಾನವನ್ನು ಹಿಂಪಡೆಯಬೇಕು" ಎಂದು ಕಾಲೇಜನ್ನು ಆಗ್ರಹಿಸಿ ತಮ್ಮ ಶಾಸನವು ರಾಜ್ಯ ಶಾಸನಕ್ಕಿಂತಲೂ ಹಿರಿದೆಂದು ತೋರಿಸಿಕೊಟ್ಟಿದ್ದಾರೆ. ಮಹಾರಾಷ್ಟ್ರದ ಮುಖ್ಯಮಂತ್ರಿ ಬೆಣ್ಣೆ ಮೆಲ್ಲುತ್ತಾ ಕುಳಿತಿದ್ದಾರೇನೊ ! ಹೀಗಾದರೆ ಶ್ರೀ. ಮೋದಿಯವರ ಆಶಯ ಮತ್ತು ಆಶ್ವಾಸನೆಗಳಿಗೆ ಏನು ಬೆಲೆ ? ಶಿವಸೇನೆಗೂ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿಗೂ ವ್ಯತ್ಯಾಸವೇನೂ ಉಳಿದಿಲ್ಲ. ಶ್ರೀ. ಮೋದಿ ಅವರು ದೆಹಲಿಯಲ್ಲಿದ್ದಾರೆ, ಬಿಡಿ; ಆದರೆ ಮುಂಬೈನಲ್ಲಿ ಗುಂಡುಕಲ್ಲಂತೆ ಕೂತಿರುವ ಕಾಂಗ್ರೆಸ್ ಪಕ್ಷದ ಮುಖ್ಯಮಂತ್ರಿಗೇನಾಗಿದೆ ? ಅವರೂ ವಿದ್ಯಾರ್ಥಿ ಪರಿಷತ್ತಿನ ಸದಸ್ಯತ್ವ ಪಡೆಯಲಿದ್ದಾರೇನು ? ಕಾಂಗ್ರೆಸ್ ಶಾಸಕರು ಮತ್ತು ಲೋಕಸಭಾ ಸದಸ್ಯರು ಬಾಯಲ್ಲಿ ಏನು ತುರುಕಿಕೊಂಡಿದ್ದಾರೆ ? ವಿದ್ಯಾರ್ಥಿ ಪರಿಷತ್ತಿನ ಕಾರ್ಯಾಚರಣೆಯನ್ನು ಬೇಕಾದರೆ ಬಹಿರಂಗವಾಗಿ ಸಮರ್ಥಿಸಲಿ, ಆದರೆ ಬಾಯಿಗೆ ಬೀಗ ಹಾಕಿಕೊಂಡು ನಕ್ಷತ್ರ ಎಣಿಸುವ ಈ ಮಂದಿಗೆ ಧಿಕ್ಕಾರ ಹೇಳಬೇಕು.

✶ ✶ ✶

ಮಾನ್ಯ ಮೋದಿಯವರ ಸ್ವಾತಂತ್ರ್ಯ ದಿನಾಚರಣೆಯ ಭಾಷಣದಲ್ಲಿ ಏನೆಲ್ಲಾ ಇದೆಯೆಂಬ ವಿಶ್ಲೇಷಣೆಯನ್ನು ರಾಜಕಾರಣಿಗಳು, ಮಾಧ್ಯಮಗಳು, ಬೇಕಾದಷ್ಟು ಮಾಡಿರುವುದನ್ನು ನೋಡಿದ್ದೇವೆ. ಆದರೆ ಭಾಷಣದಲ್ಲಿ ಏನಿಲ್ಲವೆಂಬುದು ಅಷ್ಟೇ ಮುಖ್ಯವಾದ ವಿಚಾರ. ಭಾಷಣದಲ್ಲಿ ಹೇಳಿರುವುದೆಲ್ಲಾ ಕಾರ್ಯರೂಪಕ್ಕೆ ಬರದಿರಬಹುದು ಮತ್ತು ಹೇಳದಿರುವುದು ಏನಾದರೂ ಕಾರ್ಯರೂಪಕ್ಕೆ ಬರಬಹುದು. ಹಾಗೆ ಬರಬೇಕಾದ್ದು ದೇಶದ ಎಲ್ಲ ದುಡಿಯುವ ಜನಕ್ಕೆ ನಿಗದಿತವಾದ ಕನಿಷ್ಠ ವೇತನ ಅಥವಾ ಕನಿಷ್ಠ ಕೂಲಿ. ಅದು ಸಿದ್ಧಿಸದಿದ್ದರೆ ಔದ್ಯಮಿಕ ಉತ್ಪಾದನೆಯ ಮಾತು ಜೊಳ್ಳಾಗುತ್ತದೆ. ಉತ್ಪಾದಿತ ವಸ್ತುಗಳನ್ನು ಕೊಳ್ಳುವ ಜನ ಈಗಿರು ವಂತೆಯೇ ಇದ್ದುಬಿಟ್ಟರೆ ಹೆಚ್ಚಿನ ಉತ್ಪಾದನೆಯ ಗ್ರಾಹಕರಾಗುವುದು ಯಾರು ? ಜನರ ಜೇಬಿಗೆ ಒಂದಿಷ್ಟು ಹಣ ತುಂಬಿದರೆ ತಾನೆ ಔದ್ಯಮಿಕ ಉತ್ಪಾದನೆಗಳಿಗೆ ಗ್ರಾಹಕರು ದೊರೆಯುವುದು ? ಆದ್ದರಿಂದ ನಮ್ಮ ದೇಶದ ಕನಿಷ್ಠ ಕಾರ್ಯಕ್ರಮವೆಂದರೆ ಎಲ್ಲರಿಗೂ ಕನಿಷ್ಠ ಕೂಲಿಯನ್ನು ಕೊಡಮಾಡುವುದು. ಅದು ಯಾರದೋ ಮನೆಯಲ್ಲಿ ಮುಸುರೆ ತಿಕ್ಕುವ ರಂಗಮ್ಮನಿಗೆ, ಖಾಸಗಿ ಶಾಲೆಯಲ್ಲಿ ಅಧ್ಯಾಪಕಿಯಾದ ನಾಗಮಣಿಗೆ, ಮದ್ರಸಾದಲ್ಲಿ ಕೆಲಸ ಮಾಡುವ ರಜ಼ಿಯಾಳಿಗೆ, ಮೂಟೆ ಹೊರುವ ದ್ಯಾವಯ್ಯನಿಗೆ, ಯಾರದೋ ಹೊಲದಲ್ಲಿ ಕಳೆ ಕೀಳುವ ದೇವೆಂದ್ರಪ್ಪನಿಗೆ, ಸೈಕಲ್ ಶಾಪಿನಲ್ಲಿ ಒದೆತ ತಿನ್ನುವ ಜಮಾಲ್‌ಗೆ, ಎಲ್ಲರಿಗೂ ಅನ್ವಯವಾಗಬೇಕು. ಮಾನ್ಯ ಮೋದಿಯವರು ಈ ವಿಷಯ ಪ್ರಸ್ತಾಪಿಸಲಿಲ್ಲ, ಆದರೆ ಅದನ್ನು ಯೋಜಿತ ರೀತಿಯಲ್ಲಿ ಜಾರಿಗೆ ತರಬೇಕು. ಇಲ್ಲವಾದಲ್ಲಿ ಅವರ ಕನಸು ಮತ್ತು ಆಶ್ವಾಸನೆಗಳು ಮಾತಿನ ಆಡಂಬರವಾಗಿ ಕೊನೆಗೊಳ್ಳುತ್ತವೆ. ಜನತೆಯು ಸದಾ ಇದನ್ನು ಅವರಿಗೆ ನೆನಪಿಸುತ್ತಿರಬೇಕು.

✶ ✶ ✶

ಬೆಂಗಳೂರಿನ ಕೋಳದಮಠದ ಸ್ವಾಮಿಗಳು ಇತ್ತೀಚೆಗೆ ಒಂದು ಸಮಾರಂಭದಲ್ಲಿ ತಮ್ಮ ಸ್ವಾಮಿತ್ವದ ಎಲ್ಲೆಗಳನ್ನು ಮೀರಿ ಒಂದು ಅಮೋಘ ಸಲಹೆ ನೀಡಿದ್ದಾರೆ : "ಅನಂತಮೂರ್ತಿ ದೇವರ ಮೇಲೆ ಉಚ್ಚೆ ಹೊಯ್ಯಿರಿ ಎನ್ನುತ್ತಾನೆ. ಕಲ್ಬುರ್ಗಿ ಇನ್ನೇನನ್ನೋ ಹೇಳುತ್ತಾನೆ. ಅವರನ್ನು ಕತ್ತರಿಸಿ ಹಾಕಬೇಕು." ಈ ವರದಿಯು "ಪ್ರಜಾವಾಣಿ"ಯಲ್ಲಿ ಪ್ರಕಟವಾಗಿತ್ತು.

ಅನಂತಮೂರ್ತಿ ಉಚ್ಚೆ ಹೊಯ್ಯಬೇಕೆಂದು ಹೇಳಿಲ್ಲ ಮತ್ತು ಕಲ್ಬುರ್ಗಿ ಏನೇನೋ ಏನೂ ಹೇಳಿಲ್ಲ. ಸ್ವಾಮಿಗಳಿಗೆ "ಪ್ರಚೋದನಾ ಚತುರ ಶ್ರೀ" ಎಂಬ ಬಿರುದು ಕೊಡಬಹುದು. ಅದಕ್ಕಿಂತಲೂ ಮುಖ್ಯವಾಗಿ "ಸನ್ಮಾನ್ಯ ಜಗದ್ಗುರು"ಗಳ ಮನಸ್ಸು ಎಷ್ಟು ಕೊಳಕಾಗಿದೆಯೆಂದು ಗಮನಿಸಿ ಅವರಿಗೆ ಒಂದು ಮಣ ಸೀಗೆಪುಡಿ ದಾನ ಮಾಡಬೇಕು !

* * *

ಸರಕಾರದ ನಿರ್ಧಾರಗಳಲ್ಲಿ ಕ್ರಮ ಯಾವುದು ಅಕ್ರಮ ಯಾವುದು ಎಂದು ಹೇಳುವುದು ಯಾರಿಗೂ ಸಾಧ್ಯವಾಗದು. ನ್ಯಾಯಾಲಯಗಳಿಗೂ ಕೂಡ ಅದು ಗೊಂದಲವೇ. ಭೂಕಬಳಿಕೆ ಪ್ರಕರಣಗಳಲ್ಲಿ ಇದು ಸರ್ವೇಸಾಮಾನ್ಯ. ಅಕ್ರಮವೇ ಹೆಚ್ಚು ಎನ್ನುವುದಂತೂ ಖಚಿತ. ಅಕ್ರಮ–ಸಕ್ರಮಗಳ ಜುಗ್ಗಾಟ ಇನ್ನೂ ನಡೆಯುತ್ತಲೇ ಇದೆ. ಈಗ ದೊಡ್ಡದಾಗಿ ಹೋರಾಟದಲ್ಲಿ ತೊಡಗಿರುವುದು 'ಕೆಪಿಎಸ್‌ಸಿ' ಹಗರಣ. ಸರಕಾರದ ಅಧಿಕಾರಿಗಳ ನೇಮಕಾತಿಗಾಗಿರುವ 'ಕರ್ನಾಟಕ ಲೋಕಸೇವಾ ಆಯೋಗ' ಎಂಬ ಸಂಸ್ಥೆ ಹುಟ್ಟಿಕೊಂಡಾಗಿನಿಂದ ಅದು ಭ್ರಷ್ಟಾಚಾರದ ಗೂಡು. ಈ ಸಂಸ್ಥೆಯು ಆಸ್ತಿಪಾಸ್ತಿ ನೋಂದಾಯಿಸುವ ಸಬ್ ರಿಜಿಸ್ಟ್ರಾರ್ ಕಛೇರಿ, ಅಬಕಾರಿ ಇಲಾಖೆ, ಹಾಗೂ ಸರಕಾರದ ಇತರ ಇಲಾಖೆಗಳಂತೆಯೇ ಲಂಚ ತಿನ್ನುವುದಕ್ಕೆ ಹೆಸರುವಾಸಿ. ಲೋಕಾಯುಕ್ತರು ಆಗಾಗ್ಗೆ ಸರಕಾರಿ ಅಧಿಕಾರಿಗಳ ಮನೆಗಳ ಮೇಲೆ ದಾಳಿ ನಡೆಸಿರುವ, ನೂರಾರು ಕೋಟಿ ರೂಪಾಯಿ ಅಕ್ರಮ ಆಸ್ತಿ ಜಪ್ತಿ ಮಾಡಿರುವ ವರದಿಗಳು ಪ್ರಕಟವಾಗುತ್ತಿರುತ್ತವೆ. ಆದರೆ ಈ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಯಿತು ಎಂಬುದು ಮಾತ್ರ ತಿಳಿಯುವುದಿಲ್ಲ. ಈ ಖದೀಮರೆಲ್ಲ ಹೇಗೋ ನುಣುಚಿಕೊಳ್ಳುತ್ತಾರೆ ಎಂದು ತೋರುತ್ತದೆ. ಅದೇನೇ ಇರಲಿ ಈಗ ಸರಕಾರ ೨೦೧೧ರ ಗೆಜೆಟೆಡ್ ಪ್ರೊಬೇಷನರಿ ಅಧಿಕಾರಿಗಳ ಆಯ್ಕೆ ಪಟ್ಟಿಯನ್ನು ತಿರಸ್ಕರಿಸಿರುವುದು ದೊಡ್ಡ ಹಗರಣದ ಸ್ವರೂಪ ಹೊತ್ತುಕೊಂಡು ರಾಜಕೀಯ ತಿರುವನ್ನು ಪಡೆದಿದೆ. ಹತಾಶರಾದ ಅಭ್ಯರ್ಥಿಗಳು ಬೆಂಗಳೂರಿನ ಫ್ರೀಡಂ ಪಾರ್ಕ್‌ನಲ್ಲಿ ನಿರಶನ ಸತ್ಯಾಗ್ರಹ ನಡೆಸುತ್ತಿದ್ದಾರೆ. ಮಾಜಿ ಮುಖ್ಯಮಂತ್ರಿ ಕುಮಾರಸ್ವಾಮಿ ಹೋರಾಟಗಾರರೊಂದಿಗೆ ಕೈಜೋಡಿಸಿ ದಿನಕ್ಕೊಂದು ಹೇಳಿಕೆ ನೀಡುತ್ತಿದ್ದಾರೆ. ಚುನಾವಣೆಯಲ್ಲಿ ಸೋತು ಮಣ್ಣು ಮುಕ್ಕಿರುವ ಜೆಡಿಎಸ್ ಇದರಿಂದ ರಾಜಕೀಯ ಪುನರುತ್ಥಾನಗೊಳ್ಳಲು ನೋಡುತ್ತಿದೆ. ಇನ್ನೊಂದು ಕಡೆ ಬಿಜೆಪಿ ಕೂಡ ಆದಷ್ಟು ಲಾಭ ಪಡೆದುಕೊಳ್ಳಲು ಪ್ರಯತ್ನಿಸಿದೆ. ಆಯ್ಕೆ ಪಟ್ಟಿಯನ್ನು ಸಾರಾಸಗಟಾಗಿ ಸರಕಾರ ರದ್ದುಗೊಳಿಸಿರುವುದರಿಂದ ಅರ್ಹರಾದವರಿಗೆ ಅನ್ಯಾಯವಾಗಿದೆ ಎಂಬುದು ನಿಜ. ಆದರೆ ಇಂಥ ಪ್ರಕರಣಗಳು ಸಂಭವಿಸಿದಾಗ ಅದು ಅನಿವಾರ್ಯ ಎನಿಸುತ್ತದೆ. ವ್ಯವಸ್ಥೆಯಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಭ್ರಷ್ಟಾಚಾರ ಅಕ್ರಮಗಳು ಇದ್ದದ್ದೆ. ಅದರ ಪರಿಣಾಮಗಳನ್ನು ಅನುಭವಿಸುತ್ತಿರುವವರು ಸಾಮಾನ್ಯ ಜನ. ಹಾಗಂತ ಎಲ್ಲ ಅಧಿಕಾರವರ್ಗದವರೂ ಕಳಂಕಿತರು ಎಂದೇನಲ್ಲ. ಪ್ರಾಮಾಣಿಕರೂ ಇದ್ದಾರೆ. ಇಡೀ ವ್ಯವಸ್ಥೆ ಬದಲಾಗುವವರೆಗೆ ಭ್ರಷ್ಟಾಚಾರದಿಂದ ಮುಕ್ತಿ ಇಲ್ಲ. ಈಗ ಕೆಪಿಎಸ್‌ಸಿಯ ಇಡೀ ಪ್ರಕರಣ ಕುರಿತು ನಿಷ್ಪಕ್ಷಪಾತವಾದ ತನಿಖೆ ನಡೆಯಬೇಕು. ಆದಷ್ಟು ಬೇಗ ಪರೀಕ್ಷೆಗಳನ್ನು ನಡೆಸಿ ಅರ್ಹರನ್ನು ಆಯ್ಕೆ ಮಾಡಬೇಕು. ಮತ್ತೆ ಕೆಪಿಎಸ್‌ಸಿಯಲ್ಲಿ ಭ್ರಷ್ಟಾಚಾರವನ್ನು ತಡೆಯಲು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಬೇಕು. ಪರಸ್ಪರ ದೂಷಣೆಯಿಂದ ಯಾವ ಸಮಸ್ಯೆಯೂ ಬಗೆಹರಿಯದು. ಅಕ್ರಮ ನಡೆಸುವುದೂ ಸರಕಾರ, ಸಕ್ರಮಗೊಳಿಸುವುದೂ ಸರಕಾರ. ಏನು ಹೇಳೋಣ!

* * *

ಜೆಡಿಎಸ್ ಪಿತಾಮಹ ದೇವೇಗೌಡರು ಪ್ರಧಾನಿ ನರೇಂದ್ರ ಮೋದಿಯ ಔದಾರ್ಯವನ್ನು ಹಾಡಿ ಹೊಗಳಿದ್ದಾರೆ. ಸಂದರ್ಭ ಇಲ್ಲಿ ಅಪ್ರಸ್ತುತ. ಪ್ರಾಯಶಃ ಗೌಡರ ವರಿಸೆ ನೋಡಿದರೆ ಭಾಜಪದೊಂದಿಗೆ ಶಾಮೀಲಾಗುವ ಪ್ರಯತ್ನ ಏನಾದರೂ ನಡೆಸಿದ್ದಾರೆಯೇ ಎಂಬ ಅನುಮಾನ ಬರುತ್ತಿದೆ. ಏಕೆಂದರೆ ಅಪ್ಪ–ಮಗನ ಈ ಪಕ್ಷ ಎಲ್ಲ ಕಳೆದುಕೊಂಡು ಹೀನಾಯ ಸ್ಥಿತಿಯಲ್ಲಿದೆ. ರಾಜ್ಯದಲ್ಲಿ ನಡೆಯುತ್ತಿರುವ ಉಪಚುನಾವಣೆಗಳಲ್ಲಿ ಭಾಗವಹಿಸದೇ ಇರುವ ನಿರ್ಧಾರ ಹಣದ ಕೊರತೆಯಿಂದ ಖಂಡಿತ ಅಲ್ಲ. ಇದರ ಹಿಂದೆ ರಹಸ್ಯ ಒಪ್ಪಂದ ಏನೋ ಇರುವುದು ಎದ್ದು ಕಾಣುತ್ತಿದೆ. ಈಚೆಗೆ ದೆಹಲಿಗೆ ದೌಡಾಯಿಸಿದ್ದ ಕುಮಾರಸ್ವಾಮಿ ಮತ್ತು ರೇವಣ್ಣ ಇಬ್ಬರೂ ಗೌಡರನ್ನು ತರಾಟೆಗೆ ತೆಗೆದುಕೊಂಡಿದ್ದರಂತೆ. ಗೌಡರು ಇನ್ನುಮುಂದೆ ಸಲಹೆಗಾರರಾಗಿರಬೇಕೇ ಹೊರತು ಪಕ್ಷದ ಮೇಲೆ ನಿರ್ಧಾರ ಹೊರಿಸುವುದನ್ನು ಕೈಬಿಡಬೇಕು ಎಂದು ತಾಕೀತು ಮಾಡಿದರೆಂದು ವರದಿ. ಸಿದ್ಧಾಂತಗಳಿಗೆ ಕಟ್ಟುಬೀಳುವ ಸಂದರ್ಭವಾದಿ ರಾಜಕಾರಣ ನಡೆಸಬೇಕೆಂಬುದೇ ಕುಮಾರಸ್ವಾಮಿ, ರೇವಣ್ಣ ಅಭಿಮತ. ಕುಮಾರಸ್ವಾಮಿ ಭಾಜಪದೊಂದಿಗೆ ಸೇರಿಕೊಂಡು ಸರಕಾರ ರಚಿಸಿದ್ದು 'ಜಾತ್ಯತೀತ' ಹಣೆಪಟ್ಟಿ ಹೊತ್ತಿರುವ ದೇವೇಗೌಡರಿಗೆ ಅಸಮಾಧಾನವಾಗಿತ್ತು. ಆದರೆ ಮಗ ಮುಖ್ಯಮಂತ್ರಿ ಗಾದಿ ಏರಿದ್ದು ಸಮಾಧಾನವನ್ನೂ ತಂದಿತ್ತು. ಆದರೆ ಒಪ್ಪಂದ ಮುರಿದು ಭಾಜಪಗೆ ಅಧಿಕಾರ ಹಸ್ತಾಂತರ ಮಾಡದಿರಲು ನಿರ್ಧಾರ ತೆಗೆದುಕೊಂಡವರೂ ಇದೇ ಗೌಡರೆ. ಮತ್ತೆ ಈಗ ತಾನೆ ನಡೆದ ಲೋಕಸಭಾ ಚುನಾವಣೆಗಳಲ್ಲಿ ನರೇಂದ್ರ ಮೋದಿಗೆ ಬೆಂಬಲ ನೀಡಿ ಹೊಂದಾಣಿಕೆ ಮಾಡಿಕೊಳ್ಳುವುದನ್ನು ತಡೆದವರೂ ಅವರೆ. ಈ ವಿಷಯ ಹೊರಗೆಡಹಿದವರು ಕುಮಾರಸ್ವಾಮಿ. ಹೊಂದಾಣಿಕೆ ಆಗಿದ್ದರೆ ಪ್ರಾಯಶಃ ಕೇಂದ್ರದಲ್ಲಿ ಈತ ಸಚಿವರಾಗುತ್ತಿದ್ದರೇನೊ. ಜೆಡಿಎಸ್‌ನ ಜಾತ್ಯತೀತತೆಯ ನಿಜವಾದ ಬಣ್ಣ ಬಯಲಾಗಿದೆ. ದೇವೇಗೌಡರು ಪ್ರಧಾನಿಯಾದದ್ದೆ ಆಕಸ್ಮಿಕ. ಇದು ಅವರಿಗೂ ಗೊತ್ತು. ಈಗ ಮಕ್ಕಳ ಮುಂದೆ ಗೌಡರ ಪಾರುಪತ್ಯ ಏನೂ ನಡೆಯದು. ಸಂದರ್ಭ ಸಾಧಕತೆಗೂ ಒಂದು ಮಿತಿಯಿರಬೇಕು. ಹಾಗೇ ಮುಂದುವರಿದರೆ ಪಕ್ಷ ಹೇಳಹೆಸರಿಲ್ಲದಂತಾದೀತು.

* * *

'ಆವರಣ', 'ಕವಲು' ನಂತರ ಈಗ ಭೈರಪ್ಪನವರ ಹೊಸ ಕಾದಂಬರಿ 'ಯಾನ' ಬಂದಿದೆ. ಕಾದಂಬರಿ ಆಗಲೇ ಸಾಕಷ್ಟು ಪ್ರಚಾರ ಗಿಟ್ಟಿಸಿಕೊಂಡಿದೆ. ಪ್ರಕಟಗೊಂಡು ಮಾರುಕಟ್ಟೆಗೆ ಬಂದ ದಿನದಂದೇ ಎರಡನೇ ಆವೃತ್ತಿ ಕಂಡಿತು 'ಯಾನ' ಎನ್ನುವುದು ಪ್ರಕಾಶಕರ ಅಂಬೋಣ. ಮತ್ತೆ ಒಂದೇ ದಿನದಲ್ಲಿ ಹತ್ತು ಸಾವಿರ ಪ್ರತಿ ಮಾರಾಟವಾಯಿತಂತೆ. ಈ ಅಂತೆಕಂತೆ ಒಂದು ಕಡೆ. ಆವರಣದ ಬಗ್ಗೆಯೂ ಇದೇ ಪ್ರಚಾರ ಇತ್ತು. ಭೈರಪ್ಪನವರು ತಮ್ಮ ಹೊಸ ಕಾದಂಬರಿ ಹೊರಬಂದ ಮೇಲೆ ಸಾರ್ವಜನಿಕ ಸಂಪರ್ಕಕ್ಕೆ ಹೊಸಹಾದಿ ಅನುಸರಿಸಿದ್ದಾರೆ. 'ಪ್ರಜಾವಾಣಿ' ದಿನಪತ್ರಿಕೆ ಕಛೇರಿಗೇ ಹೋಗಿ ಸಂವಾದ ನಡೆಸಿದರು. 'ಯಾನ'ದ ಬಗ್ಗೆಯಷ್ಟೇ ಅಲ್ಲದೆ, ದೇಶದ ರಾಜಕೀಯ ಬೆಳವಣಿಗೆಗಳ ಕುರಿತು ಮಾತನಾಡಿದ್ದೂ ವರದಿಯಾಯಿತು. ಇದಲ್ಲದೆ ಸುವರ್ಣ ಟಿವಿಯಲ್ಲಿ ಸುದೀರ್ಘವಾದ ಒಂದೊಂದು ಗಂಟೆಯ ಎರಡು ಸಂದರ್ಶನಗಳು ಪ್ರಸಾರವಾದುವು. ಅದೇನೂ ಹೊಸತಲ್ಲ. ಈ ಚಾನೆಲ್ ನಡೆಸುವವರು ಅವರ ಸಮಾನ ಮನಸ್ಕರೇ. ಎರಡೂ ಸಂದರ್ಶನಗಳಲ್ಲಿ 'ಯಾನ'ದ ಬಗ್ಗೆ ಮಾತಾಡಿದ್ದಲ್ಲದೆ ನೆಹರೂ, ಇಂದಿರಾ ಗಾಂಧಿ ಆರ್ಥಿಕ ನೀತಿ ಕುರಿತು ಸಾಕಷ್ಟು ಮಾತನಾಡಿದರು. ಅದು ಬೇರೆ ವಿಷಯ.

'ಆವರಣ' ಕಾದಂಬರಿಯಲ್ಲಿ ನೇರವಾಗಿ ಹಿಂದುತ್ವದ ಪ್ರಚಾರ, ಮುಸಲ್ಮಾನರ ಅತ್ಯಾಚಾರಗಳನ್ನು ಕೆದಕಿದರೆ, 'ಕವಲು' ವಿದ್ಯಾವಂತ ಸ್ತ್ರೀಯರ ಶೀಲ ಶಂಕಿಸುವುದಾಗಿದ್ದರೆ, 'ಯಾನ' ವಿಜ್ಞಾನಿಗಳ ಪ್ರಯೋಗ ಕುರಿತಾಗಿದೆ. ಅದೂ ಅಂತರಿಕ್ಷ ವಿಜ್ಞಾನ ಕ್ಷೇತ್ರವನ್ನು ಕಾದಂಬರಿಕಾರರು ಆಯ್ಕೆ ಮಾಡಿಕೊಂಡಿದ್ದಾರೆ. ಹಾಗೆಂದ ಮಾತ್ರಕ್ಕೆ ಇದನ್ನು ವೈಜ್ಞಾನಿಕ ಕಾದಂಬರಿ ಎಂದು ವರ್ಗೀಕರಣ ಮಾಡಲಾಗುವುದಿಲ್ಲ. ಅಂತರಿಕ್ಷ ವಿಜ್ಞಾನ ಕ್ಷೇತ್ರದ ಕೆಲವೊಂದು ಮಾಹಿತಿಗಳಿದ್ದಾಗ್ಯೂ ಲೇಖಕರ ಕಲ್ಪನೆಗೇ ಇಲ್ಲಿ ಪ್ರಾಶಸ್ತ್ಯ. ಮುಖ್ಯವಾಗಿ ಭೈರಪ್ಪನವರು ತಮ್ಮ ಎಲ್ಲ ಇತರ ಕಾದಂಬರಿಗಳಲ್ಲಿ ಮಾಡಿರುವಂತೆಯೇ ಸನಾತನ ಧರ್ಮದ ಶ್ರೇಷ್ಠತೆಯನ್ನು ಎತ್ತಿಹಿಡಿಯುವುದಾಗಿದೆ. ಕಾದಂಬರಿಯಲ್ಲಿ ವಿಜ್ಞಾನ, ಧರ್ಮ, ಅಧ್ಯಾತ್ಮದ ಕುರಿತು ಸಾಕಷ್ಟು ದೀರ್ಘವಾದ ಚರ್ಚೆ ಇದೆ. ಒಂದನ್ನು ಬಿಟ್ಟು ಇನ್ನೊಂದು ಅಸ್ತಿತ್ವದಲ್ಲಿ ಇರುವುದು ಸಾಧ್ಯವಿಲ್ಲ ಎನ್ನುವುದೇ ಕಾದಂಬರಿಕಾರರ ಅಭಿಮತ. ಧರ್ಮ ಕರ್ಮ ಸಿದ್ಧಾಂತವನ್ನು, ಅಧ್ಯಾತ್ಮವನ್ನು ಎತ್ತಿಹಿಡಿಯುವ ಲೇಖಕರು ವಿಜ್ಞಾನದ ಪ್ರಗತಿ ಅವುಗಳ ಸಮೀಕರಣದಿಂದ ಮಾತ್ರ ಸಾಧ್ಯ ಎನ್ನುತ್ತಾರೆ. ವಿಜ್ಞಾನಿಗಳು ತಮ್ಮ ಪ್ರಯೋಗಗಳನ್ನು ನಡೆಸಿಕೊಂಡು ಹೋಗಲು ರಹಸ್ಯ ಕಾಪಾಡಲು ಏನು ಬೇಕಾದರೂ ಮಾಡಲು ಸಿದ್ಧ. ಅವರ ಪ್ರಕಾರ ಕಾದಂಬರಿ ರಚನೆಯಲ್ಲಿ ಭೈರಪ್ಪನವರು ಅನುಸರಿಸಿರುವ ತಂತ್ರವೇನೇ ಇರಲಿ ಅವರ ಉದ್ದೇಶ ಮಾತ್ರ ಸನಾತನ ಧರ್ಮ ಎತ್ತಿಹಿಡಿಯುವುದು. ಇತರ ಎಲ್ಲ ಕಾದಂಬರಿಗಳಲ್ಲಿದ್ದಂತೆ 'ಯಾನ'ದಲ್ಲೂ ಲೈಂಗಿಕತೆಗೆ ಸಾಕಷ್ಟು ಪ್ರಾಧಾನ್ಯ ಇದೆ.




**ದೃಶ್ಯ ಮಾಧ್ಯಮಗಳೇ ! ಸ್ವಲ್ಪ ಪೆಟ್ರೋಲ್ ಬೇಕು; ಕೊಡ್ತೀರಾ...!! ?**

ಕೊಲ್ಲಿ ರಾಷ್ಟ್ರಗಳಲ್ಲಿ ಯುದ್ಧ ನಡೆಯುತ್ತಿರುವುದರಿಂದ, ಭಾರತದಲ್ಲಿ ಪೆಟ್ರೋಲ್ ಬೆಲೆ ವಿಪರೀತವಾಗಿ ಖರೀದಿಸಲು ಸಾಧ್ಯವಾಗುತ್ತಿಲ್ಲ; ಆದರೆ ದೃಶ್ಯ ಮಾಧ್ಯಮಗಳೇ ! ಸಮಾಜಕ್ಕೆ ಹೊತ್ತಿಕೊಂಡಿರುವ 'ಅತ್ಯಾಚಾರದ ಬೆಂಕಿ'ಗೆ ನೀವು ಸುರಿಯುತ್ತಿರುವ 'ಪೆಟ್ರೋಲ್' ಗಮನಿಸಿದರೆ ನಿಮ್ಮ ಬಳಿ ಅದು ಹೇರಳವಾಗಿದೆ ಎಂಬುದು ನನಗೆ ಗೊತ್ತು. ನನಗೂ ಸ್ವಲ್ಪ ಪೆಟ್ರೋಲ್ ಕೊಡುವಿರಾ ?

ಏಕೆ ಏನು ಎಂದು ಕೇಳಬೇಡಿ. ನೀವು ಇರುವುದು ಬರೀ ಪ್ರಶ್ನೆ ಕೇಳಲಿಕ್ಕಷ್ಟೇ ಹೊರತು ಯಾರಿಗೂ ಉತ್ತರ ನೀಡಲಿಕ್ಕಾಗಿ ಅಲ್ಲ ಅಲ್ಲವೆ? ನೀವು ಇರುವುದು ಇನ್ನೊಬ್ಬರನ್ನು ಹೆದರಿಸಲಿಕ್ಕಾಗಿಯೇ ಹೊರತು ಇಲ್ಲಿ ನಿಮ್ಮನ್ನು ಹೆದರಿಸುವವರು ಯಾರೂ ಇಲ್ಲ. ಅದೆಂಥದೋ 'ಸಾಮಾಜಿಕ ಪ್ರಜ್ಞೆ'ಯಂತೆ; ಅದರ ಮನೆ ಹಾಳಾಗಲಿ; ಆ ವಿಷಯ ಬಿಡಿ !

**'ಮಕ್ಕಳ ಮೇಲಿನ ಲೈಂಗಿಕ ಅಪರಾಧ ರಕ್ಷಣಾ ಕಾಯ್ದೆ-೨೦೧೨'** ಎಂಬುದೊಂದು ಇದೆಯಂತೆ. ಅದರ **ಕ್ಲಾಸ್ ೨೩ (೨)** ಪ್ರಕಾರ ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಬಾಲಕಿಗೆ ಸಂಬಂಧಿಸಿದಂತೆ ಯಾವುದೇ ಮೂಲಗಳಿಂದಲೂ ಆಕೆಯ ಗುರುತು ಪತ್ತೆಯಾಗ ಕೂಡದು ಎಂದು ಅದು ಹೇಳುತ್ತದೆಯಂತೆ. ಆದರೂ ಭೇಷ್ ! ಇತ್ತೀಚೆಗೆ ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಬಾಲಕಿಯ ಪೋಷಕರನ್ನು ನೀವುಗಳು ಮಾತನಾಡಿಸಿ ಇಂಚಿಂಚು ಮಾಹಿತಿಯನ್ನು ಈ ಲೋಕಕ್ಕೇ ಸಾರಾಸಗಟಾಗಿ ಹಂಚಿಕೊಟ್ಟಿರಿ; ನಿಮ್ಮ ಮುಂದೆ ಈ ಕಾಯ್ದೆ ಎಷ್ಟು ಮಹಾ ! ನಿಮ್ಮ ವಿರುದ್ಧ ಇರುವ ಈ ಕಾಯ್ದೆಗೆ ಅದೆಷ್ಟು ಧೈರ್ಯ ?

ಅದೇ ರೀತಿ **ಐ.ಪಿ.ಸಿ. ಸೆಕ್ಷನ್ ೨೨೮ಎ** ಪ್ರಕಾರ ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಮಹಿಳೆ ಅಥವಾ ಬಾಲಕಿಯ ಹೆಸರು ವಿಳಾಸ ಮತ್ತಿತರ ಮಾಹಿತಿ ಮುದ್ರಿಸುವ ಅಥವಾ ಪ್ರಸಾರ ಮಾಡುವವರಿಗೆ ಕನಿಷ್ಠ ೨ ವರ್ಷ ಸಜೆ ಅಥವಾ ದಂಡ ಅಥವಾ ಇವೆರಡನ್ನೂ ಒಟ್ಟಿಗೇ ವಿಧಿಸಬಹುದಂತೆ. ನೀವೇನೂ ಕೇರ್ ಮಾಡಬೇಡಿ; ಈ ನೆಲದ ಯಾವ ಕಾನೂನೂ ನಿಮ್ಮನ್ನು ಮುಟ್ಟಲಾರದು !!

ಈ ಜಗತ್ತು ನಡೆಯುತ್ತಿರುವುದೇ ನಿಮ್ಮಿಂದ; ನೀವೇ ಕಾನೂನು; ನೀವೇ ಕಾಯ್ದೆ; ನೀವೇ ಆಡಳಿತಗಾರರು; ನೀವೇ ಕಾರ್ಯಾಂಗ ಮತ್ತು ನ್ಯಾಯಾಂಗ. ಎಲ್ಲವೂ ನೀವೇ ಆಗಿರುವಾಗ ಹೆದರುವುದಾದರೂ ಯಾರಿಗೆ ? ಎದುರಿಗಿರುವ 'ಸಂದರ್ಶಕ'ನಿಗೆ ಮಾತನಾಡಲೂ ಬಿಡದೆ ಮೇಲೆ ಬೀಳುತ್ತಾ ಮೇಲಿಂದ ಮೇಲೆ ಪ್ರಶ್ನೆಗಳನ್ನು ಮಾತ್ರ ಹಾಕುವ ಅಧಿಕಾರ ನಿಮಗಲ್ಲದೆ ಇನ್ನಾರಿಗಿರಲು ಸಾಧ್ಯ ? ಎಲ್ಲ ವಿಷಯ, ವಿವಾದ, ಅತ್ಯಾಚಾರ, ಅಪರಾಧ ಇತ್ಯಾದಿ ಯಾವುದೇ ವಿಚಾರಗಳಿಗೆ ಸಂಬಂಧಿಸಿದಂತೆ ನೀವು ನೀಡುವ "ತೀರ್ಪು"ಗಳೇ ಅಂತಿಮ ! ಅಪರಾಧ ಸಂಹಿತೆ, ಆರೋಪ, ವಿಚಾರಣೆ, ನ್ಯಾಯಾಂಗದ ವಿಧಿ ವಿಧಾನಗಳು ಇವೆಲ್ಲಾ ನಿಮ್ಮ ಕಸದ ಬುಟ್ಟಿಯಲ್ಲಿ ಬಿದ್ದು ಒದ್ದಾಡುತ್ತಿರುವಾಗ ನೀವು ಮಾಡುವ ಅಟ್ಟಹಾಸ ಹಾಗೂ 'ಬ್ರೇಕಿಂಗ್ ನ್ಯೂಸ್'ಗಳೇ ಸಾಕು ಈ ನಾಡನ್ನು ಉದ್ಧರಿಸಲು; ನೀವೇ ಜಗದೋದ್ಧಾರಕರು; ಪ್ರಜಾಪ್ರಭುತ್ವದ ಆರಕ್ಷಕರು !!




ಸಾಹಿತ್ಯ, ಸಂಗೀತ, ಸಂಸ್ಕೃತಿ, ಅಧ್ಯಾತ್ಮ, ವಿಜ್ಞಾನ, ಮನೋವಿಜ್ಞಾನ, ಮಾನವಿಕ, ಸದಭಿರುಚಿ, ನವಿರು ಭಾವನೆ... ಆಯ್ತು ಆಯ್ತು ! ನಿಲ್ಲಿಸುತ್ತೇನೆ; ನೀವು ತಾಕೀತು ಮಾಡಿದ ಮೇಲೆ ಈ ಯಾವ ವಿಷಯವನ್ನೂ ಪ್ರಸ್ತಾಪಿಸುವುದಿಲ್ಲ ಬಿಡಿ. ಅವೆಲ್ಲಾ ನಿಮಗೆ ಬೊಬ್ಬೆ ಏಳಿಸುವಷ್ಟು ಅಲರ್ಜಿ ಎಂದು ನನಗೂ ಗೊತ್ತು. ಆದರೆ ಈ "ನವಿರು ಭಾವನೆ" ಜಾಗದಲ್ಲಿ "ನಿಮಿರು ಭಾವನೆ"ಗೆ ಪ್ರಚೋದನೆ ಎಂದು ಸೇರಿಸಿಕೊಳ್ಳಲೆ ? ಅದು ನಿಮಗೆಲ್ಲ ಸಖತ್ ಸೂಟ್ ಆಗುತ್ತೆ-ಆಯ್ತಾ !

ನೀವು ಹಾಕಿಕೊಂಡಿರುವ "ಕನ್ನಡಕ" ಯಾವುದೆಂದು ನನಗೆ ಗೊತ್ತು. ಆ ಕನ್ನಡಕದಲ್ಲಿ ಮೇಲ್ಕಂಡ ಯಾವುವೂ ನಿಮಗೆ ಕಾಣಿಸುವುದಿಲ್ಲ; ಈ "ವಿಶೇಷ ಕನ್ನಡಕ"ದ ಮೂಲಕ ಸಮಾಜದಲ್ಲಿ ನಿಮಗೆ ಕಾಣುವುದೆಲ್ಲ ಬರೀ ಕೊಲೆ, ಸುಲಿಗೆ, ಅತ್ಯಾಚಾರ, ಕಳ್ಳತನ, ದ್ರೋಹ, ವಂಚನೆ, ಸಾಹಿತ್ಯ – ಓ, ಸ್ಸಾರಿ. ಇವಲ್ಲದೆ ಸಿನಿಮಾ ಸಾಹಿತ್ಯ, ಸಿನಿಮಾ ಹಾಡು, ಸಿನಿಮಾ ಅಶ್ಲೀಲ ಕುಣಿತ... ಇತ್ಯಾದಿ ಇತ್ಯಾದಿ.

ಕೋಟ್ಯಾಂತರ ರೂ. ಬಂಡವಾಳ ಹಾಕಿಕೊಂಡು ನೀವು ಉದ್ಭವಿಸಿರುವುದೇ ಇವುಗಳಿಗಾಗಿ; ಉದಾರೀಕರಣ, ಜಾಗತೀಕರಣ ಬಂದ ಮೇಲಂತೂ ಬಹುರಾಷ್ಟ್ರೀಯ ಕಂಪನಿಗಳು ತಮ್ಮ ವ್ಯಾಪಾರದ ಕಾರ್ಯಸಾಧನೆಗಾಗಿ ನಿಮ್ಮನ್ನೇ ಅಲ್ಲವೇ ಬಳಸಿಕೊಳ್ಳುತ್ತಿರುವುದು ? ನೀವುಗಳು ಅವರಿಗೇ ಹುಟ್ಟಿದವರಲ್ಲವೆ ? ಅವರ ಅಗಾಧ ಬೆಂಬಲ ನಿಮಗಿರುವಾಗ ಸಮಾಜವನ್ನು ಕಟ್ಟಿಕೊಂಡು ನಿಮಗೇನು ?

ಕ್ಯಾಮೆರಾವೇ ನಿಮ್ಮ ಅಸ್ತ್ರ; ಮೈಕೇ ನಿಮ್ಮ ಗುರಾಣಿ; 'ಸಮಾಜೋದ್ಧಾರದ ಸೋಗಿನಲ್ಲಿ' ಯುವ ಜನಾಂಗವನ್ನು ರೋಚಕತೆ, ಸೆಕ್ಸ್ ಹಾಗೂ ಹಿಂಸೆಗೆ ಪ್ರಚೋದಿಸುವುದೇ ನಿಮ್ಮ ಬಂಡವಾಳ; ಟಿ.ಆರ್.ಪಿ. ಏರಿಸಿಕೊಳ್ಳುವುದೇ ನಿಮ್ಮ ಗುರಿ; ಅತ್ತ ನಿಮ್ಮ ಟಿ.ಆರ್.ಪಿ. ಏರುತ್ತಿದ್ದಾಗ; ಇತ್ತ ಸಮಾಜ ಅಧೋಗತಿಗೆ ಇಳಿಯುತ್ತಿರುತ್ತದೆ. ಈ "ಸಾಧನೆ"ಯನ್ನು ಕಂಡು ನೀವು ಗಹಗಹಿಸಬಹುದು !

ನಿಮ್ಮ ವರದಿಗೆ ಮೇಲ್ನೋಟದ ಸಂಗತಿಗಳು ಮುಖ್ಯವೇ ಹೊರತು; ಅದರ ಪ್ರಸಾರದಿಂದಾಗುವ ಮುಂದಿನ ಪರಿಣಾಮಗಳಲ್ಲವಲ್ಲಾ ! ಏನು ಮಹಾ; ನಿಮಗೆ ದಿನಕ್ಕೊಂದೇ ಒಂದು ಸುದ್ದಿ ಸಿಕ್ಕಿದರೂ ಸಾಕಪ್ಪಾ ; ದಿನದ ೨೪ ಗಂಟೆಯೂ ಅದನ್ನು ಶಂಖ, ಜಾಗಟೆ ಸಮೇತ ಭಜನೆ ಮಾಡಬಹುದು ಅಥವಾ ಬುಡುಬುಡಿಕೆ ಬಾರಿಸಬಹುದು. ಹೀಗಿರುವಾಗ ಯಾರ ಮನೆ ಹಾಳಾದರೆ ನಿಮಗೇನು ? ನಿಮ್ಮ ಪೆಟ್ರೋಲ್ ಸುರಿಯುವ ಕೆಲಸ ನೀವು ಧಾರಾಳವಾಗಿ ಮುಂದುವರಿಸಬಹುದು. ಅಂದ ಹಾಗೆ ನಾನು ನಿಮ್ಮನ್ನು ಪೆಟ್ರೋಲ್ ಕೇಳಿದೆ. ಏಕೆ ? ಎಂದೂ ನೀವು ಪ್ರಶ್ನಿಸಿದಿರಿ. ಆ ಪ್ರಶ್ನೆಗೆ ಈಗ ಉತ್ತರಿಸುತ್ತೇನೆ ಕೇಳಿ; ನೀವು ನೀಡುವ ಪೆಟ್ರೋಲ್‌ನಿಂದಲೇ ನಿಮ್ಮ 'ಮನೆಗಳಿಗೆ' ಬೆಂಕಿ ಹಚ್ಚಲಿಕ್ಕಾಗಿ. ಆಯ್ತಾ ? ಥೂ...!

ಹಾಸನ **ಎಚ್. ಎಸ್. ಪ್ರಭಾಕರ**

**ಶೇಷಶಾಸ್ತ್ರಿಗಳಿಗೆ ಮೆಕ್ಕಾದಿಂದ ನೀರು ತಂದ ಅನ್ವರ್‌ಸಾಬ್**

ಅಯೋಧ್ಯೆಯ ಬಾಬ್ರಿ ಮಸೀದಿಯನ್ನು ಗಾಂಧಿ ಹಂತಕರ ಪರಿವಾರಕ್ಕೆ ಸೇರಿದವರು ನೆಲಸಮಗೊಳಿಸಿದ ನಂತರ ವಿಭಿನ್ನ ಸಮುದಾಯಕ್ಕೆ ಸೇರಿದ ಜನರು ಪರಸ್ಪರ ಮಾತನಾಡುವುದೇ ಕಡಿಮೆಯಾಗಿದೆ. ಮಾತನಾಡಿದರೂ ನಡುವೆ ಸಂಶಯದ ಅಡ್ಡಗೋಡೆ ಎದ್ದು ನಿಂತಿರುತ್ತದೆ. ಇಂತಹ ವಿಘಟಿತ ಸಮಾಜದಲ್ಲಿ ಗುರು ಗೋವಿಂದ ಭಟ್ಟ ಮತ್ತು ಶಿಶುನಾಳ ಷರೀಫರಂತಹ ಗುರುಶಿಷ್ಯರನ್ನು ಕಾಣುವುದೇ ಅಪರೂಪ ಆಗಿದೆ. ಆದರೂ ಇಂತಹ ಸನ್ನಿವೇಶದಲ್ಲೂ ಕೆಲ ವಿರಳ ಮಾನವೀಯ ಸಂಬಂಧಗಳು ನಮ್ಮಲ್ಲಿ ಆಗಾಗ ಗೋಚರಿಸುತ್ತವೆ. ಇಂತಹ ಆತ್ಮೀಯ ಬಾಂಧವ್ಯಗಳು ಭರವಸೆಯ ಬೆಳಕನ್ನು ಚೆಲ್ಲುತ್ತವೆ.

ಇತ್ತೀಚೆಗೆ ಬಾಗೇಪಲ್ಲಿಯಲ್ಲಿ ನಡೆದ ಚಿಕ್ಕಬಳ್ಳಾಪುರ

ಜಿಲ್ಲಾ ೪ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಡಾ॥ ಆರ್. ಶೇಷಶಾಸ್ತ್ರಿ ಕನ್ನಡದ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರು. ಆಂಧ್ರ-ಕರ್ನಾಟಕ ಗಡಿಯ ಚಿಂತಾಮಣಿ ತಾಲ್ಲೂಕು ವ್ಯಾಪ್ತಿಯ ಸಂತೆಕಲ್ಲಹಳ್ಳಿಯವರಾದ ಅವರು ತಮ್ಮ ಸಮಾಜದ ಸೌಹಾರ್ದ ಸಂಬಂಧದ ಸೌಂದರ್ಯವನ್ನು ಬಾಲ್ಯದಿಂದ ಕಂಡವರು. ಎಲ್ಲ ಸಮುದಾಯದ ಜನರೊಂದಿಗೆ ಒಡನಾಡಿ ಬೆಳೆದವರು. ಇಂತಹ ಶೇಷಶಾಸ್ತ್ರಿಗೆ ಅನ್ವರ್‌ಸಾಬ್ ಎಂಬ ಸ್ನೇಹಿತರೊಬ್ಬರು ಇದ್ದಾರೆ. ಇವರಿಬ್ಬರದು ಒಂದು ಜೀವ, ಎರಡು ದೇಹ ಎಂಬಂತಹ ಸ್ನೇಹ.

ಶೇಷಶಾಸ್ತ್ರಿ ಮತ್ತು ಅನ್ವರ್‌ಸಾಬ್ ಅವರ ಸ್ನೇಹ ಎಂತಹದ್ದು ಅಂದ್ರೆ ಮೃತಪಟ್ಟ ನಂತರವೂ ಅಕ್ಕಪಕ್ಕದಲ್ಲೇ ತಮ್ಮ ಸಮಾಧಿಯನ್ನು ಕಟ್ಟಿಸಿಕೊಳ್ಳಲು ಮಾತಾಡಿ, ಅದಕ್ಕಾಗಿ ಒಂದು ಕಾಲದಲ್ಲಿ ಜಾಗವನ್ನು ಆಯ್ಕೆ ಮಾಡಿಕೊಂಡಿದ್ದರಂತೆ. ಅನ್ವರ್‌ಸಾಬ್ ಅವರ ತಾಯಿ ತನ್ನ ಮಗನಿಗಿಂತ ಶೇಷಶಾಸ್ತ್ರಿಯನ್ನೇ ಹೆಚ್ಚಾಗಿ ಪ್ರೀತಿಸುತ್ತಿದ್ದರು. ದಿನವೂ ಅವರಿಗಾಗಿ ಮಜ್ಜಿಗೆ ಕೊಟ್ಟು ಬರುತ್ತಿದ್ದರು. ಶಾಲಾ ವ್ಯಾಸಂಗ ಕಾಲದಿಂದಲೂ ಒಬ್ಬರನ್ನು ಬಿಟ್ಟು ಇನ್ನೊಬ್ಬರು ಇರುತ್ತಿರಲಿಲ್ಲ. ಅನ್ವರ ಸಾಬರು ಒಮ್ಮೆ ಮೆಕ್ಕಾಗೆ ಹೋಗಿದ್ದಾಗ, ಅಲ್ಲಿಂದ ಒಂದು ಬಕೆಟ್ ಪವಿತ್ರ ನೀರು ತಂದು ಗೆಳೆಯ ಶೇಷಶಾಸ್ತ್ರಿಗೆ ಕೊಟ್ಟಿದ್ದರು. ವಾರಣಾಸಿಗೆ ಹೋದಾಗಲೂ ಗಂಗಾ ನದಿಯ ನೀರನ್ನು ತಂದುಕೊಟ್ಟಿದ್ದರು ಎಂದು ಶೇಷಶಾಸ್ತ್ರಿಯವರು ಈಗಲೂ ಸ್ಮರಿಸಿಕೊಳ್ಳುತ್ತಾರೆ. ಬಾಗೇಪಲ್ಲಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಈಗ ಅನಂತಪುರದಲ್ಲಿ ನೆಲೆಸಿರುವ ಶೇಷಶಾಸ್ತ್ರಿಯವರು ಬರುತ್ತಾರೆಂದು ತಿಳಿದ ತಕ್ಷಣ ಅನ್ವರ್‌ಸಾಬ್ ಅಲ್ಲಿ ಧಾವಿಸಿ ಬಂದು ಅವರನ್ನು ಬಿಗಿದಪ್ಪಿಕೊಂಡರು.

ಇಂತಹ ಮಾನವೀಯ ಸಂಬಂಧಗಳನ್ನು ಮರಳುಗಾಡಿನಲ್ಲಿ ಓಯಸಿಸ್ ಎಂಬಂತೆ ನೋಡುವ ಕಾಲದಲ್ಲಿ ನಾವಿದ್ದೇವೆ. ಮತಾಂಧತೆಯಿಂದ ಕಣ್ಣನ್ನು ಮಾತ್ರವಲ್ಲ ಹೃದಯವನ್ನು ಕಳೆದುಕೊಂಡವರು ಹೆಚ್ಚಾಗುತ್ತಿರುವ ಈ ದಿನಗಳಲ್ಲಿ ಇಂತಹ ಓಯಸಿಸ್‌ಗಳ ಸಂಖ್ಯೆಯೂ ಹೆಚ್ಚಾಗಬೇಕಿದೆ.

ಬಾಗೇಪಲ್ಲಿ ಸಾಹಿತ್ಯ ಸಮ್ಮೇಳನದಲ್ಲಿ ಶೇಷಶಾಸ್ತ್ರಿಯವರು ಮಾಡಿದ ಭಾಷಣ ಅದ್ಭುತವಾಗಿತ್ತು. "ನಮ್ಮ ಮಕ್ಕಳು ಡಾಕ್ಟರ್, ಎಂಜಿನಿಯರ್ ಆಗಬೇಕೆಂದು ಬಯಸುತ್ತೇವೆ. ಆದರೆ ಉಳಿದು ಏನೇ ಆಗಲಿ, ಅವರು ಮೊದಲು ಮನುಷ್ಯರಾಗಬೇಕು. ಮನುಷ್ಯರಾಗಲು ಯಾರೂ ಹಾತೊರೆಯುತ್ತಿಲ್ಲ. ಏನೋ ಆಗಲು ಹೋಗಿ ಏನೇನೋ ಆಗುತ್ತಾರೆ. ಜಾತಿ-ಧರ್ಮದ ಗೆರೆ ದಾಟಿ, ಸೌಹಾರ್ದ ಸಂಬಂಧವನ್ನು ಬೆಳೆಸಿಕೊಳ್ಳಬೇಕಿದೆ" ಎಂದು ಅವರು ಹೇಳಿದರು.

ಈಗ ಅನಂತಪುರದಲ್ಲಿ ನೆಲೆಸಿದ್ದರೂ ತಮ್ಮ ಜಿಲ್ಲೆಯ ಸಮಸ್ಯೆಗಳ ಬಗ್ಗೆ ಅವರಿಗೆ ಚೆನ್ನಾಗಿ ಗೊತ್ತಿದೆ. ಚಿಕ್ಕಬಳ್ಳಾಪುರದಲ್ಲಿ ಇರುವ ನೀರಿನ ಸಮಸ್ಯೆ ಬಗ್ಗೆ ಪ್ರಸ್ತಾಪಿಸಿದ ಅವರು ಮನುಷ್ಯರಿಗೆ ಕಾಡುತ್ತಿರುವ ನೀರಿನ ಸಮಸ್ಯೆ ಬಗ್ಗೆ ಚಿಂತೆ ಮಾಡುತ್ತೇವೆಯೇ ಹೊರತು ಪ್ರಾಣಿಪಕ್ಷಿಗಳು ಪಡುತ್ತಿರುವ ಯಾತನೆ ಬಗ್ಗೆ ಗಮನಿಸುತ್ತಿಲ್ಲ. ಅವುಗಳ ಬಗ್ಗೆ ದನಿಯೆತ್ತುವುದಿಲ್ಲ. ಬರಗಾಲ ಎಂಬುದು ಬರೀ ಕುಡಿಯುವ ನೀರಿನ ಸಮಸ್ಯೆ ಹಾಗೂ ಕೃಷಿ ಸಮಸ್ಯೆ ಮಾತ್ರವಲ್ಲ, ಪಶುಪಕ್ಷಿಗಳಿಗೂ ನೀರಿಲ್ಲದಂತಾಗಿದೆ. ಇಂತಹ ಸ್ಥಿತಿಯಲ್ಲೂ ಸಾವಿರ ಅಡಿ ಕೊಳವೆಬಾವಿಗಳು ಕೊರೆಯುತ್ತವೆ. ಅವುಗಳಲ್ಲಿ ನಮ್ಮ ಪಾಲು ಎಷ್ಟು? ಪಶುಪಕ್ಷಿಗಳ ಪಾಲು ಎಷ್ಟು ಎಂಬುದು ಯೋಚಿಸುವುದಿಲ್ಲ.

ಶೇಷಶಾಸ್ತ್ರಿಯವರು ಹೇಳುವಂತೆ ಎಲ್ಲದಕ್ಕೂ ಮೊದಲು ನಾವು ಮಾನವರಾಗಬೇಕಿದೆ. ಹಿಂದೂ, ಮುಸ್ಲಿಂ, ಕ್ರೈಸ್ತ, ಬೌದ್ಧ ಏನೇ ಆಗಿರಲಿ ಅದಕ್ಕೂ ಮೊದಲು ಮಾನವರಾದ ನಂತರ ನಮ್ಮ ಜೀವನದ ಸಾಮಾಜಿಕ ಕ್ಷೋಭೆ ಸಂಘರ್ಷಗಳು ಕಡಿಮೆಯಾಗುತ್ತವೆ. ಆದರೆ ಈ ನೆಲ, ಜಲ, ಈ ಕಾಡು, ಈ ದೇಶದ ಎಲ್ಲಾ ಜನರಿಗೆ ಸೇರಿದ್ದು. ಯಾವುದೇ ಒಂದು ಜಾತಿ-ಧರ್ಮದ ಸ್ವತ್ತಲ್ಲ. ಆದರೆ ಅಂಬಾನಿ, ಮಿತ್ತಲ್‌ರಂತಹ ಕಾರ್ಪೊರೇಟ್ ತಿಮಿಂಗಿಲಗಳು ಈ ಕಾಡು, ನೀರು ಮತ್ತು ನೆಲವನ್ನು ನುಂಗಲು ಷಡ್ಯಂತ್ರ ರೂಪಿಸಿದ್ದಾರೆ. ನರೇಂದ್ರ ಮೋದಿಯವರು ಪ್ರಧಾನಿಯಾದ ನಂತರ ಈ ನೆಲ, ಜಲ, ಸಂಪತ್ತು ಸುರಕ್ಷಿತವಾಗಿರುವುದು ಗ್ಯಾರಂಟಿ ಇಲ್ಲ. ಇಂದಲ್ಲ, ನಾಳೆ ಈ ಸಂಪತ್ತು ಕಾರ್ಪೊರೇಟ್ ಬಲೆಗೆ ಬೀಳುವ ಸಾಧ್ಯತೆಯಿದೆ. ಈ ನೆಲ ಮತ್ತು ಕಾಡಿನ ಮೇಲಿನ ಸಮುದಾಯದ ಹಕ್ಕನ್ನು ಬಲಪಡಿಸುವ ಜೊತೆಗೆ ಮನುಷ್ಯರಿಗೆ ಮಾತ್ರವಲ್ಲ ಪ್ರಾಣಿಪಕ್ಷಿಗಳಿಗೆ ಸಹ್ಯವಾಗುವಂತಹ ಪರಿಸರವನ್ನು ರೂಪಿಸಬೇಕಾಗಿದೆ.

*ಬೆಂಗಳೂರು* **ಸನತ್‌ಕುಮಾರ ಬೆಳಗಲಿ**

### ಹೆಣ್ಣು-ಲೈಂಗಿಕ ಅತ್ಯಾಚಾರ ಮತ್ತು ಸುತ್ತೋಲೆ ಕಾಳಜಿ

✉ ಲೈಂಗಿಕ ಕಿರುಕುಳ ಅಥವಾ ಅತ್ಯಾಚಾರದ್ದೇ ಇತ್ತೀಚಿನ ದಿನಗಳ ವಿಶೇಷ ಸುದ್ದಿಗಳು.

"ಅರಿಯದ ಮಗುವಿನ ಮೇಲೆ ಅತ್ಯಾಚಾರ!" "ಕೈಲಾಗದ ಮುದುಕಿಯ ಮೇಲೆ ಲೈಂಗಿಕ ದೌರ್ಜನ್ಯ" "ದುಡಿಯುವ ಮಹಿಳೆಯ ಅಸಹಾಯಕತೆಯ ದುರುಪಯೋಗ!" "ಬಸ್ಸಿನಲ್ಲಿ ಕದೀಮ ಕಾಮಣ್ಣರುಗಳ ಲೈಂಗಿಕ ಕಿರುಕುಳ!" "ರಾತ್ರಿವೇಳೆ ಅಮಾಯಕ ಹೆಣ್ಣಿನ ಮೇಲೆ ಬರ್ಬರ ಕೃತ್ಯ!" – ಹೀಗೆ ಸುದ್ದಿಗಳ ಮೇಲೆ ಸುದ್ದಿಗಳು. ಬೇಟೆಗೆ ಒಳಗಾದ ನಿರ್ಬಲ ಸಾಧು ಪ್ರಾಣಿಗಳಂತೆ ಲೈಂಗಿಕ ಅತ್ಯಾಚಾರಗಳಿಗೆ ಒಳಗಾದ-ಆಗುತ್ತಿರುವ ನಮ್ಮ ಮಧ್ಯದ ಹೆಣ್ಣುಜೀವಗಳನ್ನು ಸುದ್ದಿವಾಹಿನಿಗಳು ತುಂಬಾ ಕಳಕಳಿಯಿಂದೆಂಬಂತೆ ದಿನಗಟ್ಟಲೆ ಚಿತ್ರಿಸುತ್ತಿವೆ, ಹೆಣ್ಣಿನ ಕುರಿತಾದ ಈ ಎಲ್ಲ ಜಾಗೃತ ಮನಸುಗಳಿಗೆ ಧನ್ಯವಾದ ಹೇಳೋಣ. ಆದರೆ ಹಾಗೆ ಚಿತ್ರಿಸುವಾಗ ಹೆಣ್ಣಿನ 'ನಾಳೆ'ಗಳೂ ನಿಮ್ಮ ಕಣ್ಮುಂದೆ ಇರಲಿ ಎಂದು ಕೇಳಿಕೊಳ್ಳೋಣ.

ದುಡಿಯುವ ಮಹಿಳೆಗೆ ಲೈಂಗಿಕ ರಕ್ಷಣೆ ಸಾಲದೆಂಬ ಕಳವಳದೊಂದಿಗೆ ೧೯೯೭ರಲ್ಲಿ ಭಾರತದ ವರಿಷ್ಠ ನ್ಯಾಯಾಲಯ ಆತಂಕ ವ್ಯಕ್ತಪಡಿಸಿದ್ದು ಈ ಸಂದರ್ಭದಲ್ಲಿ ನೆನಪಾಗುತ್ತದೆ. ಇದು ಮಾನವ ಹಕ್ಕಿನ ಸ್ಪಷ್ಟ ಉಲ್ಲಂಘನೆ ಎಂಬುದನ್ನು ನ್ಯಾಯಾಲಯ ತನ್ನ ಅಂದಿನ ತೀರ್ಪಿನಲ್ಲಿ ಅಭಿಪ್ರಾಯಪಟ್ಟಿತ್ತು. 'ವಿಶಾಕಾ ಜಡ್ಜಮೆಂಟ್' ಎಂದೇ ಅದು ಜನರ ಮನಸ್ಸಿನಲ್ಲಿದೆ. **ನೌಕರಿ ಮಾಡುವ ಸ್ಥಳಗಳಲ್ಲಿ, ಕಛೇರಿಗಳಲ್ಲಿ ಜರುಗುವ**



ನಾಡಿನ ಖ್ಯಾತ ಚಿಂತಕರು ಮತ್ತು ವಿಚಾರವಾದಿಗಳಾದ ಡಾ. ಜಿ. ರಾಮಕೃಷ್ಣರವರು, ನವಕರ್ನಾಟಕ ಪ್ರಕಾಶನ ಹೊರತಂದಿರುವ ಎಸ್. ಮಂಜುನಾಥರವರ 'ವೈಚಾರಿಕ ಕವನಗಳು' (ಪರಿಷ್ಕೃತ ಮೂರನೇ ಆವೃತ್ತಿ)ಯನ್ನು ಬಳ್ಳಾರಿಯಲ್ಲಿ ಕಳೆದ ಆಗಸ್ಟ್ ೦೩ರಂದು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಕೊಪ್ಪಳದ ಹಿರಿಯ ಬಂಡಾಯ ಸಾಹಿತಿ ಪ್ರೊ. ಅಲ್ಲಮಪ್ರಭು ಬೆಟ್ಟದೂರು, ಖ್ಯಾತ ವೈದ್ಯ ಸಾಹಿತಿ ಮತ್ತು ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ಡಾ. ವಸುಂಧರಾ ಭೂಪತಿ, ಹಿರಿಯ ವಿಚಾರವಾದಿ ಡಾ॥ ವೆಂಕಟಯ್ಯ ಅಪ್ಪಗೆರೆ, ಕೃತಿಯ ಲೇಖಕ ಎಸ್. ಮಂಜುನಾಥ, ಕ.ಸಾ.ಪ.ದ ಮಾಜಿ ಜಿಲ್ಲಾಧ್ಯಕ್ಷ ನಿಷ್ಠಿ ರುದ್ರಪ್ಪ ಮತ್ತಿತರರನ್ನು ಚಿತ್ರದಲ್ಲಿ ಕಾಣಬಹುದು.

**ಲೈಂಗಿಕ ಕಿರುಕುಳವು ಮಾನವ ಹಕ್ಕುಗಳ ಉಲ್ಲಂಘನೆ, ಹೌದು ಎಂದು ಸರ್ವೋಚ್ಚ ನ್ಯಾಯಾಲಯ ತಾನು ೧೯೯೭ರಲ್ಲಿ ನೀಡಿದ 'ವಿಶಾಕಾ ತೀರ್ಪಿ'ನಲ್ಲೇ ಸಾರಿ ಹೇಳಿದೆ...** ಎಂಬುದು ಕಾನೂನು ತಜ್ಞರ ವ್ಯಾಖ್ಯಾನ. ಇದಕ್ಕೂ ಪೂರ್ವದಲ್ಲಿ (೧೯೭೯) ವಿಶ್ವಸಂಸ್ಥೆಯ ಮಹಾಸಭೆಯಲ್ಲಿ ಇದೇ ಮಾದರಿಯ ಒಂದು ನಿರ್ಣಯ ಅಂಗೀಕರಿಸಲಾಗಿತ್ತು. ಆ ನಿರ್ಣಯ ಪಾಸಾಗುವುದಕ್ಕೆ ನಮ್ಮ ದೇಶವೂ ಆಗ್ರಹಿಸಿದ್ದಿದೆ. ಸಹಿ ಮಾಡಿದ್ದೂ ಇದೆ. ಇತ್ತೀಚೆಗೆ ದೆಹಲಿಯ ಬಸ್ಸಿನಲ್ಲಿ ನಡೆದ ಬರ್ಬರ ಕೃತ್ಯದಿಂದ ಇಡೀ ದೇಶವೇ ತಲ್ಲಣಗೊಂಡ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರವು ೨೦೧೨ರಲ್ಲಿ ಲೋಕಸಭೆಯಲ್ಲಿ ಮಂಡಿಸಿದ ಲೈಂಗಿಕ ದೌರ್ಜನ್ಯ ತಡೆ ಮಸೂದೆಯು ೨೦೧೩ರಲ್ಲಿ ಕಾನೂನಾಗಿ ಮಾರ್ಪಟ್ಟಿದೆ.

ಕೇಂದ್ರದ ಈ ಆದೇಶ ಎಲ್ಲ ರಾಜ್ಯ ಸರ್ಕಾರಗಳನ್ನು ಈಗ ತುದಿಗಾಲಲ್ಲಿ ನಿಲ್ಲಿಸಿದೆ. ರಾಜ್ಯ ಸರ್ಕಾರಗಳು ಎಲ್ಲ ವಿಭಾಗ ಮತ್ತು ಜಿಲ್ಲೆಯ ಅಧಿಕಾರಿಗಳನ್ನು ತುದಿಗಾಲಲ್ಲಿ ನಿಲ್ಲಿಸಿವೆ. ಜಿಲ್ಲಾಧಿಕಾರಿಗಳು ತಮ್ಮ ಅಡಿಯಲ್ಲಿ ಬರುವ ಎಲ್ಲ ಇಲಾಖೆಗಳ ಮುಖ್ಯಸ್ಥರನ್ನು ತುರ್ತುಕಾರ್ಯದ ಮೇಲೆ ತೊಡಗಿಸಿಕೊಳ್ಳುವಂತೆ ಮಾಡಿದ್ದಾರೆ. ಈ ಇಲಾಖೆಗಳ ಮುಖ್ಯಸ್ಥರು ಸುತ್ತೋಲೆ ಹೊರಡಿಸಿ ತಾಲೂಕು ಮಟ್ಟದಲ್ಲೂ, ಹೋಬಳಿ ಮಟ್ಟದಲ್ಲೂ ಜನಜಾಗೃತಿ ಅಭಿಯಾನಕ್ಕೆ ಪ್ರೇರಣೆ ಕೊಟ್ಟಿದ್ದಾರೆ.

ಹೀಗೆ ವಿಶ್ವಸಂಸ್ಥೆಯಿಂದ ತಾಲೂಕು–ಹೋಬಳಿ ಮಟ್ಟದವರೆಗೆ ಹರಿದುಬಂದ ಆದೇಶಗಳಿಂದಾಗಿ ಹೆಣ್ಣಿನ ಮಾನರಕ್ಷಣೆ ಕುರಿತ ಕಕ್ಕುಲಾತಿ ಈಗ ಎಲ್ಲೆಂದರಲ್ಲಿ ಹರಿಯತೊಡಗಿದೆ. ಭಾಷಣಕಾರರಿಗೆ, ಸಂಪಾದಕೀಯಗಳಿಗೆ, ಜಾಹಿರಾತುದಾರರಿಗೆ, ಶಾಲೆ–ಕಾಲೇಜುಗಳ ವೇದಿಕೆಗಳಿಗೆ ಇದು ಮುಖ್ಯ ಆಹಾರವಾಗಿದೆ. ಪ್ರಾಮಾಣಿಕವಾಗಿ ಈ ವಿಚಾರದಲ್ಲಿ ತೊಡಗಿಸಿಕೊಂಡವರಿಗೆ ಕೂಡ ಅಭಿನಂದನೆಗಳನ್ನೂ ವಂದನೆಗಳನ್ನೂ ತಿಳಿಸೋಣ.

ಈ ಸಂದರ್ಭದಲ್ಲಿ ನಾವೆಲ್ಲರೂ ನಮ್ಮೊಳಗಡೆಯೇ ಒಂದಷ್ಟು ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾದುದಿದೆ.

✴ ಉದ್ಯೋಗಸ್ಥ ಮಹಿಳೆಯರನ್ನು ಲೈಂಗಿಕ ಕಿರುಕುಳಗಳಿಂದ ರಕ್ಷಿಸುವುದು ನಮ್ಮ ಕರ್ತವ್ಯದ ಭಾಗವೆಂಬುದು ನಿಸ್ಸಂದೇಹವಾಗಿಯೂ ಸತ್ಯ; ಅದೇ ವೇಳೆಗೆ ಸರ್ಕಾರಿ/ಖಾಸಗಿ ವಿಭಾಗಗಳಲ್ಲಿ ಕೆಲಸ ಮಾಡದೇ ತಮ್ಮ ಪಾಡಿಗೆ ತಾವು ಮನೆಯಲ್ಲೋ–ಊರಲ್ಲೋ–ಹೊಲಗಳಲ್ಲೋ ದುಡಿಯುವ ಮಹಿಳೆಯರನ್ನು ಪುಂಡ–ಪೋಕರಿ ಮಂದಿಗಳಿಂದ ರಕ್ಷಿಸುವ ಹೊಣೆಯನ್ನು ನಾವು ಹೊತ್ತಿದ್ದೇವೆಯೇ ?... ಹೊರಲು ಸಾಧ್ಯವೇ ?...

✴ ಮಹಿಳೆಯರ ಮೇಲೆ ಲೈಂಗಿಕ ದೌರ್ಜನ್ಯ ಎಂದಿನಿಂದ ಆರಂಭವಾಯಿತು ?... ಕಾನೂನು ಬಂದುದು ಈಗ. ಆದರೆ ದೌರ್ಜನ್ಯದ ಇತಿಹಾಸಕ್ಕೆ ಎಷ್ಟು ವರ್ಷ ?... ಸಂಪ್ರದಾಯದ ಹೆಸರಿನಲ್ಲಿ ಹೆಣ್ಣಿನ ಮನಸ್ಸಿನ ವಿರುದ್ಧ – ಅವಳಿಗೆ ಒಂದೇ ಒಂದು ಮಾತು ಕೇಳದೇ – ಹಿರಿಯರ ಹಂತದಲ್ಲೇ ಮದುವೆ ನಿಶ್ಚಯಿಸಿ ಗಂಡಿನ ಕುತ್ತಿಗೆಗೆ ಕಟ್ಟುತ್ತಾ ಬಂದಿದ್ದೇವಲ್ಲ, ಅಂಥವಳನ್ನು – ತಾನು ಗಂಡನೆಂಬ ಹಕ್ಕಿನಿಂದ ಹಾಸಿಗೆ ಹಂಚಿಕೊಳ್ಳಲು ಕರೆಯುವ ಕ್ರಿಯೆ ಲೈಂಗಿಕ ದೌರ್ಜನ್ಯದೊಳಗೆ ಸೇರುತ್ತದೋ ಇಲ್ಲವೋ ?... ಇಂಥ ಏಕಪಕ್ಷೀಯ ಮದುವೆ ಪ್ರಕರಣಗಳಲ್ಲಿ ಹೆಣ್ಣು ಮುಂದೆ ಅವನಿಗೇ ಒಲಿದು ಅವನೊಂದಿಗೆ ಕೂಡಿದರೆ ಸರಿಯೇ. ಕೂಡದಿದ್ದರೆ ಅದು ಯಾವ ಮಾದರಿಯ ದಾಂಪತ್ಯವಾಗುತ್ತದೆ ?... ಅವಳ ಕಣ್ಣೀರಿಗೆ ಯಾರು ಹೊಣೆ ?...

✴ ಶತಶತಮಾನಗಳಿಂದ ಹೆಣ್ಣಿನಿಂದ ಅಕ್ಷರಗಳನ್ನು ಕಸಿದುಕೊಳ್ಳಲಾಗಿತ್ತು ! ಅವಳ ಕೃತುಶಕ್ತಿಯನ್ನು ಮನೆಯ ನಾಲ್ಕುಗೋಡೆಯ ಒಳಗೆ ಬಂಧಿಸಿಡಲಾಗಿತ್ತು. ಅವಳನ್ನು ಎರಡನೆಯ ದರ್ಜೆಯ ಪ್ರಜೆಯನ್ನಾಗಿ ಪರಿಗಣಿಸುತ್ತಲೇ ಬರಲಾಗಿತ್ತು ! ಇವೆಲ್ಲವೂ ಅವಳ ಮನಸ್ಸಿನ ಮೇಲೆ ಮಾಡಿದ ಗಾಯಗಳಲ್ಲವೇ ?... ಈಗಲೂ ಕೂಡ ಅವಳ ಓದು, ಮದುವೆ, ಮಕ್ಕಳನ್ನು ಪಡೆಯುವ ಸಂಖ್ಯೆ ಇತ್ಯಾದಿ ವಿಚಾರಗಳಲ್ಲಿ ನಾವು ಭಾಗಶಃವಾದರೂ ಅವಳ ಮೇಲೆ ನಮ್ಮ ತೀರ್ಮಾನವನ್ನು ಹೇರುತ್ತಿಲ್ಲವೇ ?... ಇವನ್ನೆಲ್ಲ ಯಾವ ಕೆಟಗರಿಯ ದೌರ್ಜನ್ಯಕ್ಕೆ ಸೇರಿಸೋಣ ?...

ಸರಕಾರಿ ಅಥವಾ ಖಾಸಗಿ ಉದ್ಯೋಗದಲ್ಲಿರಲಿ ಇಲ್ಲದೇ ಇರಲಿ, ಹೆಣ್ಣಿಗೆ ಅವಳದೇ ಆದ ಒಂದಷ್ಟು ನೈಸರ್ಗಿಕ ಮಿತಿಗಳಿವೆ. ನಿಸ್ಸಂದೇಹವಾಗಿಯೂ ಅವಳು ಸಾಹಸಿ, ಮಹಾತಾಯಿ; ಆದರೆ ಈ ನೈಸರ್ಗಿಕ ಮಿತಿಯಿಂದಾಗಿ ಗಂಡಿನ ನೆರವನ್ನು ಅವಳು ಕೆಲವು ಸಂದರ್ಭಗಳಲ್ಲಾದರೂ ನೆರೆನಂಬಿರಬೇಕಾಗುತ್ತದೆ. ಅದನ್ನು ಒದಗಿಸುವುದು ನಾವು ಮಾಡಬಹುದಾದ ಕರ್ತವ್ಯವೇ ಹೊರತು ಉಪಕಾರವಲ್ಲ. ಆ ಕಾರಣಕ್ಕಾಗಿ ಯಾರೂ ಯಾವ ಸರಕಾರಿ ಸುತ್ತೋಲೆಯವರೆಗೂ ಕಾಯಬೇಕಾದುದಿಲ್ಲ. ಪ್ರಥಮ ಆದ್ಯತೆಯಾಗಿ ಇಡೀ ಸಮಾಜವೇ ಹೆಣ್ಣನ್ನು ತನ್ನ ಕಣ್ಣಂತೆ ಕಾಪಾಡಬೇಕಾದುದಿದೆ. ಈಗ ಕಾನೂನಿನಲ್ಲಿ ಹೆಚ್ಚು ಹೆಚ್ಚು ರಕ್ಷಣಾತ್ಮಕ ನಿಯಮಗಳು ಬಂದಿವೆ, ಸ್ವಾಗತಿಸೋಣ; ಆದರೆ ನಿಜವಾದ ಬದಲಾವಣೆ ಆಗಬೇಕಾದುದು ನಮ್ಮ ನಮ್ಮ ಮನಸುಗಳಲ್ಲಿ.

ನಮ್ಮ ಕಣ್ಣಳತೆಗೆ ಒಂದು ಹೆಣ್ಣು ಸಿಕ್ಕಾಗ, –ಅದು ಕತ್ತಲಾಗಿರಲಿ ಹಗಲ್ಹೊತ್ತೇ ಆಗಿರಲಿ ನಮಗೆ ಅವಳನ್ನು ಕಂಡಾಗ ನೆನಪಾಗಬೇಕಾದುದು ಜನ್ಮಕೊಟ್ಟು, ಹಾಲುಣಿಸಿ ಬೆಳೆಸಿದ ನಮ್ಮ ತಾಯಿ. ಒಂದೇ ಮನೆಯಲ್ಲಿ ಬದುಕುವಾಗ ಕೈಯಳತೆಗೆ ಸಿಕ್ಕುವ ಆಟವಾಡುವ ಅಕ್ಕ–ತಂಗಿಯರು ನೆನಪಾಗಬೇಕು. ಜಗತ್ತನ್ನು 'ಜಗನ್ಮಾತೆ' ಎಂದು ಕರೆಯುವವರಿದ್ದಾರೆ. ಭರತಖಂಡವನ್ನು 'ಭಾರತಮಾತೆ' ಅಥವಾ 'ತಾಯಿ ಭಾರತಿ' ಎಂದು ಗೌರವಿಸುವವರುಂಟು. ನಮ್ಮ ರಾಜ್ಯವನ್ನು 'ಕರ್ನಾಟಕ ಮಾತೆ' ಎಂದೇ ಕರೆಯುತ್ತೇವೆ. ಈ ಜಗತ್ತಿಗೆ ನಮ್ಮನ್ನು ಕಳುಹಿಸಿದ ನಿಸರ್ಗವನ್ನು 'ನಿಸರ್ಗದೇವಿ' ಎಂದೇ ಆರಾಧಿಸುತ್ತೇವೆ. ಅವಳ ಒಳಗಡೆ ಹರಿಯುವ ಎಲ್ಲ ನದಿಗಳನ್ನು ಹೆಣ್ಣಿನ ಹೆಸರಿನಿಂದಲೇ ಗುರುತಿಸುತ್ತೇವೆ. ನಮ್ಮ ಅನ್ನ–ಆಹಾರವನ್ನು ಬೇಯಿಸಿ ತಿನ್ನಲು ಬಳಸುವ ಬೆಂಕಿಯನ್ನು ಸುಡುಬೆಂಕಿ ಎನ್ನದೇ 'ಅಗ್ನಿ ದೇವತೆ' ಎಂದು ಗೌರವಿಸುತ್ತೇವೆ. ಹೀಗೆ ನಮ್ಮ ಅಸ್ತಿತ್ವಕ್ಕೆ ಕಾರಣವಾದ ಶಕ್ತಿಗಳೆಲ್ಲವೂ ನಮಗೆ ಹೆಣ್ಣಾಗಿ–ತಾಯಂದಿರಾಗಿ ಕಾಣುವಾಗ ಈ ಭೂಮಂಡಲಕ್ಕೆ ಕ್ಷಮೆಯೆಂದೇ ಹೆಸರಿರುವಾಗ, ಸಹನೆಗೆ ರೂಪಕವೇ ಆಗಿರುವ ಹೆಣ್ಣು ಮಾತ್ರ ಕೇವಲ ಭೋಗದ ವಸ್ತುವಾಗಿ ಕಾಣಬೇಕು ಯಾಕೆ ? ಅವಳ ಕುರಿತು ಹೆತ್ತವಳ ಕಕ್ಕುಲಾತಿ, ಸೋದರಿಯ ವಾತ್ಸಲ್ಯ, ಗುರುಮಾತೆಯ ಗೌರವ ಜಾಗೃತವಾದಾಗ ಮಧ್ಯರಾತ್ರಿ ಅವಳು ಎದುರಾದರೂ ಸುರಕ್ಷಿತವಾಗಿ ಇರುತ್ತಾಳೆ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು.

ಹೆಣ್ಣಿನ ಸುರಕ್ಷಿತತೆಯ ಬಗೆಗಿನ ಕರ್ತವ್ಯ ಸರಕಾರ ತನ್ನ ಪಾಡಿಗೆ ಮಾಡಿಕೊಳ್ಳುತ್ತ ಇರಲಿ, ಆದರೆ ನಾಗರಿಕ ಸಮಾಜದ ಹೃದಯದಲ್ಲಿ ಅವಳ ಬಗ್ಗೆ ವಾತ್ಸಲ್ಯಭರಿತ ಭಾವ ಸ್ಫುರಿಸದೇ ಹೋದರೆ ಕಾನೂನು ಮಾತ್ರವೇ ಕೇಡುಗಳನ್ನೆಲ್ಲ ತಡೆಯಲಾರದು. ಆದ್ದರಿಂದ ನಮ್ಮ ಒತ್ತು ಮನುಷ್ಯ ಹೃದಯದ ಪರಿವರ್ತನೆಯ ಕಡೆಗೆ ಇರಬೇಕೇ ಹೊರತು ಕಾವಲು ಸಮಿತಿ – ತುರ್ತು ನಿಗಾ ಸಮಿತಿ – ಮಾಹಿತಿ ರವಾನೆ ಸಮಿತಿ – ಹೀಗೆ ಸಮಿತಿಗಳಿಂದ ಹೆಣ್ಣನ್ನು ಕಾಯುತ್ತೇನೆ ಎಂದರೆ ಅದು ತಾತ್ಕಾಲಿಕ ವೇಶವೋ–ಆವೇಶವೋ ಆಗಿಬಿಡುವ ಸಾಧ್ಯತೆಗಳು ಇಲ್ಲದಿಲ್ಲ. ಮನುಷ್ಯನ ವಿವೇಕ ಮೊದಲು ಜಾಗ್ರತಗೊಳ್ಳಬೇಕು. ಬುದ್ಧಿ ಪ್ರಜ್ಞೆಯಾಗಿ, ಪ್ರಜ್ಞೆ ವಿವೇಕವಾಗಿ, ವಿವೇಕ ಬೆಳಕಾಗಿ ಮೊದಲು ನಮ್ಮೊಳಗಿನ ಮಿತಿಯೆಂಬ ಕತ್ತಲನ್ನು ದೂರ ಮಾಡಬೇಕು. ಆಗ ಹೆಣ್ಣು ಸ್ವತಂತ್ರವಾಗಿ ಉಸಿರಾಡಬಹುದು. ಸರಕಾರ ತನ್ನ ಕರ್ತವ್ಯ ಮಾಡಲಿ, ನಾವು ಶೀಲವಂತ ಅಪ್ಪಟ ಮನುಷ್ಯರಾಗೋಣ.

ಅಂಕೋಲಾ **ವಿಷ್ಣು ನಾಯ್ಕ**

✉ ಆಗಸ್ಟ್ ತಿಂಗಳಿನ 'ಹೊಸತು' ಮುಖಪುಟ ಎಷ್ಟೊಂದು ಸೊಗಸಾಗಿದೆ ! ನಸುಗುಲಾಬಿ ಬಣ್ಣದ ಸುಂದರ ಹೂ ದಳಗಳಂತೆಯೇ ಮನಸ್ಸು ಕೂಡ ಅರಳಿಬಿಟ್ಟಿತು. 'ನೆಮ್ಮದಿಯ ನಾಳೆ ನಮ್ಮದು' ಅನ್ನುವ ಘೋಷವಾಕ್ಯ ಹುಸಿಹೋಗಿಲ್ಲ. ಯಾವುದೇ ಚಿತ್ರ, ಮಾತು, ಕತೆ, ಹಾಡು ಉಲ್ಲಾಸ ತುಂಬಬಲ್ಲುದು. ಉಲ್ಲಾಸವೇ ತಾನೇ ನಾಳಿನ ಭರವಸೆ ? ಇವೆಲ್ಲ ಸಂತೋಷಗಳನ್ನು 'ಹೊಸತು' ತನ್ನ ಓದುಗರಿಗೆ ಸಮರ್ಪಕವಾಗಿ ಕಟ್ಟಿಕೊಡುತ್ತಿದೆ. ಇದು ಅಭಿಮಾನದ ವಿಷಯ. ಜೊತೆಗೆ ಆಗಲೇ 'ಹೊಸತು' ಹದಿನಾರನೇ ವಯಸ್ಸಿಗೆ ಕಾಲಿಟ್ಟಾಯ್ತು ! ಈ ಹದಿನಾರು ನೂರು ಆಗಲಿ. ಸದಭಿರುಚಿ–ಸಜ್ಜನಿಕೆಗಳೇ ಆಧಾರವಾಗಿರುವ ಈ ಪತ್ರಿಕೆ ಓದುಗರ ಮನೆ–ಮನಗಳನ್ನು ಹೆಚ್ಚು ಹೆಚ್ಚು ತುಂಬಿಕೊಳ್ಳಲಿ.

ಬೆಂಗಳೂರು ***ಭಾರತೀ ಕಾಸರಗೋಡು***



# ಋಗ್ವೇದ ಪ್ರವೇಶಿಕೆ ಐತಿಹ್ಯ ಮತ್ತು ವಾಸ್ತವ



— ಜಿ. ರಾಮಕೃಷ್ಣ

ಪ್ರಪಂಚದಲ್ಲಿ ಮಾನವನಿಗೆ ವಿಸ್ಮಯಗಳು ಅಪಾರ. ಋಗ್ವೇದದ ಕಾಲದವರಿಗೆ ಈಗಿನದಕ್ಕಿಂತಲೂ ನೂರುಪಟ್ಟು ಜಾಸ್ತಿ ವಿಸ್ಮಯಗಳಿದ್ದವು. ಜಗತ್ತಿನ ಸಾಹಿತ್ಯ ಪರಂಪರೆ ಮತ್ತು ಸಾಹಿತ್ಯದ ಪ್ರಮುಖ ವಸ್ತುಗಳನ್ನು ಗಮನಿಸಿದರೆ ನಾಲ್ಕೈದು ಪ್ರಶ್ನೆಗಳು ಮಾನವನನ್ನು ಗಾಢವಾಗಿ ಕಾಡಿರುವುದು ತಿಳಿಯುತ್ತದೆ : ಪ್ರಕೃತಿಯ ನಿರಂತರ ನಿಯಮ ಮತ್ತು ಅದರ ಸೊಬಗು, ಗಂಡು–ಹೆಣ್ಣಿನ ನಡುವಣ ಪ್ರೇಮ, ಮಾನವನ ಹುಟ್ಟು–ಸಾವು, ಮಾನವನಲ್ಲಿ ಅಂತರ್ಗತವಾಗಿರುವ ಒಳಿತು ಮತ್ತು ಕೆಡಕು, ಅಧಿಕಾರದ ನೆಲೆಗಳು, ಇತ್ಯಾದಿ. ಪ್ರಕೃತಿ ನಿಯಮವನ್ನು ಕುರಿತಂತೆ ಋಗ್ವೇದವು ಋತದ ಪರಿಕಲ್ಪನೆಯನ್ನು ಬಹಳ ಅರ್ಥವತ್ತಾಗಿ ನಮ್ಮ ಮುಂದಿಟ್ಟಿದೆ. ಒಳಿತು–ಕೆಡಕುಗಳ ಬಗ್ಗೆ ಸಾಮುದಾಯಿಕ ಜೀವನದ ಹಿನ್ನೆಲೆಯಲ್ಲಿ ಮುಖ್ಯವಾಗಿ ವರುಣನ ವ್ರತ ಮತ್ತು ಪಾಶಗಳ ಪ್ರಸ್ತಾಪ ಋಗ್ವೇದದಲ್ಲಿ ಬಂದಿದೆ. ಮಾನವನು ಹುಟ್ಟುವುದು ಎಷ್ಟು ವಿಸ್ಮಯವೋ ಅದಕ್ಕಿಂತ ಬಹುಪಟ್ಟು ವಿಸ್ಮಯ ಅವನ ಸಾವಿನ ಬಗ್ಗೆ ಚಿತ್ರಿತವಾಗಿದೆ. ಸಾವು ಸಹಜ ಮತ್ತು ಅನಿವಾರ್ಯವೆಂದು ತಿಳಿದಿದ್ದರೂ ಮಾನವ ಅದನ್ನು ಒಪ್ಪಿಕೊಂಡು ತಳಮಳದಿಂದ ದೂರವಾಗಲಾರ. "ಜನ ಹುಟ್ಟುತ್ತಾರೆ, ಸಾಯುತ್ತಾರೆ; ನಾವದನ್ನು ನೋಡುತ್ತಲೇ ಇದ್ದೇವೆ. ಆದರೆ ಆಯುಸ್ಸು ಅಪರಿಮಿತವೇನೋ ಎಂಬಂತೆ ನಡೆದುಕೊಳ್ಳುತ್ತೇವೆ. ಅದಕ್ಕಿಂತಲೂ ಹೆಚ್ಚು ಆಶ್ಚರ್ಯಕರವಾದ್ದೇನು ?" ಎಂದು ಮಹಾಭಾರತದಲ್ಲಿ ಯಕ್ಷಪ್ರಶ್ನೆಗೆ ಯುಧಿಷ್ಠಿರ ಉತ್ತರ ಕೊಟ್ಟಿದ್ದಾನೆ (ಕಿಮಾಶ್ಚರ್ಯಂ ಅತಃಪರಂ). ಮಾನವನ ಈ ಕ್ಲೇಶವನ್ನು ಯೋಗಸೂತ್ರದಲ್ಲಿ 'ಅಭಿನಿವೇಶ' ಎಂದು ಕರೆಯಲಾಗಿದೆ; ಅಂದರೆ, ಗೂಟ ಹೊಡೆದುಕೊಂಡು ನಾವಿಲ್ಲೇ ಬಾಳುವವರು, ಬಾಳಬೇಕು, ಎಂಬ ಆಶಯ. ಋಗ್ವೇದವು ಸಾವನ್ನು ಕುರಿತು ತತ್ತ್ವಶಾಸ್ತ್ರೀಯ ಸಿದ್ಧಾಂತವನ್ನೇನೂ ಬೆಳೆಸಿಲ್ಲ; ಆದರೆ ಭಯ, ಅನುಮಾನ, ಆಕಾಂಕ್ಷೆ, ಭರವಸೆ, ಹಿಂದಿನ ಪೀಳಿಗೆ ಗಳವರು ನೀಡುವರೆಂದು ಆಶಿಸಲಾದ ಆಸರೆ, ದೇವತೆಗಳ ಪೂರ್ಣ ಸಹಕಾರ ಮತ್ತು ಸಾಂತ್ವನ, ಇವನ್ನು ಋಗ್ವೇದದ ಕವಿಗಳು ಮತ್ತೆ ಮತ್ತೆ ಅನುಭವಿಸಿದ್ದಾರೆ ಮತ್ತು ಕಾವ್ಯಾತ್ಮಕವಾಗಿ ಪ್ರಕಟಿಸಿದ್ದಾರೆ. ಪ್ರಸ್ತುತ ಹದಿನೈದನೆಯ ಕಂತಿನಲ್ಲಿ ಅದನ್ನು ಪರಿಚಯಿಸಿಕೊಳ್ಳೋಣ.

ಭಗವದ್ಗೀತೆಯಲ್ಲಿ ಭಗವಾನನು ಅನುಭವಸಿದ್ಧವಾದ ಒಂದು ವಿಚಾರವನ್ನು ಹೇಳಿ, ಅದೇ ಉಸಿರಿನಲ್ಲಿ ಅನುಭವವೇದ್ಯವೇ ಅಲ್ಲದ ಇನ್ನೊಂದು ವಿಚಾರವನ್ನು ತರ್ಕಬದ್ಧವೋ ಎಂಬಂತೆ ಅದಕ್ಕೆ ಜೋಡಿಸಿಬಿಟ್ಟಿದ್ದಾನೆ. ಸಾವು ಇರುವಂತೆ ಪುನರ್ಜನ್ಮವೂ ಶತಸ್ಸಿದ್ಧ ಎಂಬುದು ಆ ಮಾತು (೨.೨೭ : ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ). ಮೊದಲ ಭಾಗ ಮೃತ್ಯು; ಅದು ಋಗ್ವೇದದ ಕವಿಗೆ ಗೊತ್ತು ಮತ್ತು ಅದರಿಂದ ವಿಚಲಿತನಾಗುವುದಕ್ಕಿಂತಲೂ ಹೆಚ್ಚಾಗಿ ಅವನು ಅದರ ನಂತರ ಏನು ಎಂಬುದರ ಬಗ್ಗೆ ಕುತೂಹಲಿಯಾಗಿ ವಿಸ್ಮಿತನಾಗಿದ್ದಾನೆ. ಎರಡನೆಯದು ಪುನರ್ಜನ್ಮ : ಅದು ಋಗ್ವೇದದ ಕವಿಗೆ ಗೃಹೀತವಾದ ನಂಬಿಕೆಯಲ್ಲ. ಬಹಳವೆಂದರೆ ಅವನಿಗೆ ಅದೊಂದು ಅಸ್ಪಷ್ಟ ಭಾವನೆ ಅಥವಾ ಸಾಧ್ಯತೆ.

ಸಾವಿನ ಸಂಬಂಧದಲ್ಲಿ ಋಗ್ವೇದದ ಕಾಲದಲ್ಲಿ ಏನಾದರೂ ವಿಶಿಷ್ಟ ಆಚರಣೆಗಳು ಇದ್ದಿರಬಹುದೆ ? ಅದನ್ನು ಖಚಿತವಾಗಿ ಹೇಳಲು ಮತ್ತು ಇದ್ದಿದ್ದರೆ ಅವು ಎಂಥವು ಎಂದು ನಿರೂಪಿಸಲು ಬರುವುದಿಲ್ಲ. ನಂತರದ ಕಾಲದಲ್ಲಿ ವಿವಿಧ ಆಚರಣೆಗಳ ಸಂದರ್ಭದಲ್ಲಿ ಋಗ್ವೇದದ ಮಂತ್ರಗಳನ್ನು ಬಳಸಿಕೊಂಡಿರುವುದು ಉಂಟು. ಋಗ್ವೇದದ ಕಾಲಕ್ರಮದಲ್ಲಿ ಕೊನೆಯ ಹಂತಕ್ಕೆ ಸೇರಿದ ಭಾಗವಾದ ಹತ್ತನೆಯ ಮಂಡಲದ ಐದು ಸೂಕ್ತಗಳನ್ನು ವಿಶೇಷವಾಗಿ ನಾವು ಗಮನಿಸಬಹುದು (೧೦.೧೪–೧೮). ಆ ಐದು ಸೂಕ್ತಗಳೂ ಪೂರ್ವಜರಿಗೆ, ಅಂದರೆ ಪಿತೃಗಳಿಗೆ, ಮತ್ತು ದೇವತೆಗಳಿಗೆ ವಿಧವಿಧವಾಗಿ ಕೇಳಿಕೆಗಳನ್ನು ಮುಂದಿಟ್ಟಿವೆ. ಬಹುಶಃ ಇದು ಪ್ರಪಂಚದ ಎಲ್ಲ ಜನಾಂಗಗಳಲ್ಲೂ ಕಾಣಬರುವ ಸಂಗತಿ. ಅಂತೆಯೇ, ಈ





ಸಂಬಂಧದಲ್ಲಿ ವೈವಿಧ್ಯಮಯವಾದ ಆಚರಣೆಗಳು ರೂಢಿಯಲ್ಲಿವೆ. ವ್ಯಕ್ತಿಯಲ್ಲಿ ಆತ್ಮವೊಂದನ್ನು ಆರೋಪಿಸಿದಾಗಿನ ಆಚರಣೆಗಳು ಆತ್ಮದ ಕಲ್ಪನೆ ಇಲ್ಲದಿರದ ಸಂದರ್ಭದ ಆಚರಣೆಗಳಿಗಿಂತಲೂ ಭಿನ್ನವಾಗಿರುತ್ತವೆ. ಮಧ್ಯಕಾಲೀನ ಜರ್ಮನಿಯಲ್ಲಿ ಇದ್ದಿತೆಂದು ಹೇಳಲಾದ ಒಂದು ಆಚರಣೆಯನ್ನು ಜೆ. ಜಿ. ಫ್ರೇಸರ್ ತನ್ನ "ದ ಗೋಲ್ಡನ್ ಬೌ" ಎಂಬ ಪ್ರಸಿದ್ಧ ಗ್ರಂಥದಲ್ಲಿ ದಾಖಲಿಸಿದ್ದಾನೆ. ಸಾವನ್ನು ಊರಿನಿಂದ ಆಚೆಗೆ ಹೊತ್ತೊಯ್ಯುವುದು ಅದರ ಸಾರ. ಹಾಗೆ ಸಾವನ್ನು ಹೊರದೂಡುವುದೆಂದರೆ ವಸಂತವನ್ನು ಊರಿಗೆ ಆಹ್ವಾನಿಸಿ ಕರೆತಂದಂತೆ ಎಂಬುದು ಆ ಆಚರಣೆಯ ಆಶಯ. ಹುಲ್ಲಿನಲ್ಲಿ ಒಂದು ಮನುಷ್ಯಾಕೃತಿಯನ್ನು ಮಾಡಿ ಊರಿನ ಮಕ್ಕಳು ಅದನ್ನು ಊರ ಹೊರಕ್ಕೆ ಹೊತ್ತು ತೆಗೆದುಕೊಂಡು ಹೋಗುತ್ತಾರೆ ಮತ್ತು ಅಲ್ಲಿ ಅದಕ್ಕೆ ಬೆಂಕಿ ಕೊಡುತ್ತಾರೆ. ಆಗ ಅವರು ಹಾಡುವುದು ಹೀಗೆ: "ಊರಾಚೆಗೆ ಒಯ್ಯುತ್ತೇವೆ ಈ ಸುಡುಗಾಡು ಸಾವನ್ನು। ಹೊಸ ವಸಂತವನ್ನು ಊರೊಳಕ್ಕೆ ಬರಮಾಡಿಕೊಳ್ಳುವೆವು। ಆಹಾ ವಸಂತವೇ, ಬಾ, ನಿನಗಿದೋ ಸ್ವಾಗತ। ನೀನದೆಷ್ಟು ಹಸಿರು, ನಿನ್ನ ಧಾನ್ಯವದೆಷ್ಟು ಮೋಹಕ॥" ಋಗ್ವೇದದ ಕವಿಗಳು ಇಂತಹ ನೆಲೆಯೊಂದನ್ನು ಊಹಿಸಿಕೊಂಡಿಲ್ಲ. ನಾವು ಪರಿಚಯಿಸಿಕೊಳ್ಳಲಿರುವ ಸೂಕ್ತಗಳ ಅನೇಕ ಮಂತ್ರಗಳನ್ನು ಶವಸಂಸ್ಕಾರ ಮುಂತಾದ ಕ್ರಿಯೆಗಳಲ್ಲಿ ಈಗಲೂ ಬಳಸುವ ಒಂದು ಜನವಿಭಾಗ ನಮ್ಮಲ್ಲಿದೆ. ಆ ಸಂಪ್ರದಾಯಕ್ಕೆ ಒಗ್ಗಿಹೋಗಿರುವ ಕೆಲವು ಶ್ರದ್ಧಾಳುಗಳು ಈ ಐದು ಸೂಕ್ತಗಳನ್ನು ಓದಿಕೊಳ್ಳಲು ಮಾನಸಿಕವಾಗಿ ಸಿದ್ಧವಿರುವುದಿಲ್ಲ. ಋಗ್ವೇದವನ್ನು ಒಂದು ಪಠ್ಯವಾಗಿ ಅಭ್ಯಾಸ ಮಾಡುವವರಿಗೆ ವಿಶ್ವವಿದ್ಯಾನಿಲಯಗಳಲ್ಲಿ ಇವುಗಳನ್ನೇನಾದರೂ ಆಯ್ಕೆ ಮಾಡಿದರೆ, ಪಾಠ ಮಾಡುವ ಪಂಡಿತರು "ಅವನ್ನು ನೀವೇ ಓದಿಕೊಳ್ಳಿ, ಅವನ್ನು ಪಠ್ಯವನ್ನಾಗಿ ಇರಿಸಿದವರಿಗೆ ಬುದ್ಧಿಯಿಲ್ಲ" ಎಂದುಬಿಡುವ ಸಂಭವ ಸಹ ಉಂಟು. ನಿಜಕ್ಕೂ ಇವುಗಳಲ್ಲಿ ಓದಿ ಅರ್ಥ ಮಾಡಿಕೊಳ್ಳಬಾರದಂಥದೇನೂ ಇಲ್ಲವೆಂಬುದನ್ನು ನಾವು ತಿಳಿಯೋಣ. ಈ ಸೂಕ್ತಗಳಲ್ಲಿ ಕ್ರಮವಾಗಿ ಯಮ, ಪಿತೃಗಳು, ಅಗ್ನಿ, ಮತ್ತು ವಿಶ್ವೇದೇವತೆಗಳು ಸ್ತುತಿಸಲ್ಪಟ್ಟಿದ್ದಾರೆ. ಸಾವು ಮತ್ತು ಸಾವಿನ ನಂತರದ ಸ್ಥಿತಿಯನ್ನು ವಿಶ್ವಸಾಹಿತ್ಯದ ನೂರಾರು ಕೃತಿಗಳು ತಮ್ಮದೇ ರೀತಿಯಲ್ಲಿ ಊಹಿಸಿಕೊಂಡಿವೆ, ಅರ್ಥೈಸಿವೆ. ಪ್ರತಿಯೊಂದು ಮತಧರ್ಮದಲ್ಲೂ ಅದರ ಪ್ರಸ್ತಾಪವು ಇದ್ದೇ ತೀರುತ್ತದೆ. ಜಾನ್ ಡನ್ ಎಂಬೊಬ್ಬ ೧೬ನೆಯ ಶತಮಾನದ ಕವಿ "ಬೀಗಬೇಡ ಸಾವೇ" ಎಂಬ ಕವನವನ್ನು ಬರೆದಿದ್ದಾನೆ. "ನೀನೇನೂ ಅಪ್ರತಿಮ ಶಕ್ತಿಯೂ ಅಲ್ಲ, ವಿಧಿಯೂ ಅಲ್ಲ, ತಿಳಿದುಕೋ; ಬೇಕೆಂದರೆ ಸ್ವ–ಇಚ್ಛೆಯಿಂದ ವಿಷ ಕುಡಿದು ನಾನು ಸಾಯಬಲ್ಲೆ, ಅದಕ್ಕೆ ನಿನ್ನದೇನೂ ಒಪ್ಪಿಗೆ ಬೇಕಿಲ್ಲ. ಸಾವಿನ ನಂತರ (ಕ್ರೈಸ್ತಧರ್ಮದ ನೆಲೆಯಲ್ಲಿ) ಅಂತಿಮ ತೀರ್ಪು ನನ್ನ ಪರವಾಗಿ ಬಂದಾಗ, ನೀನೇ ಸಾಯುತ್ತೀಯೆ, ಸಾವೇ, ವೃಥಾ ಬೀಗಬೇಡ" ಎಂದು ಬರೆದಿದ್ದಾನೆ. ಅವನು ಸಾವನ್ನು ಎದುರಿಸಿ ನಿಗ್ರಹಿಸಿದ್ದಾನೋ ಅಥವಾ ಸಾವಿಗೆ ಅಂಜಿ ಪುಕ್ಕಲುತನವನ್ನು ಮರೆಮಾಚಲು ತನ್ನಲ್ಲಿಲ್ಲದ ಪೌರುಷವನ್ನು ಮೆರೆಯಲು ಯತ್ನಿಸಿದ್ದಾನೋ ಎಂಬುದು ತೆರೆದ ಪ್ರಶ್ನೆ. ಋಗ್ವೇದದ ಕವಿಯು ಒಣಧೈರ್ಯವನ್ನು ಪ್ರಕಟಿಸಲು ಹೋಗುವುದಿಲ್ಲ, ಬದಲಾಗಿ ದೈನ್ಯದಿಂದಲೇ ಸಾವಿನ ಪ್ರಕರಣದಲ್ಲಿನ ವಿಸ್ಮಯವನ್ನು ಅನುಭವಿಸುತ್ತಾನೆ, ಪಿತೃಗಳಲ್ಲಿ ಹಾಗೂ ದೇವತೆಗಳಲ್ಲಿ ಮೊರೆಯಿಡುತ್ತಾನೆ. ಶವವನ್ನು ಹೂಳುವುದಕ್ಕಿಂತಲೂ ಹೆಚ್ಚಾಗಿ ಸುಡುವುದೇ ಋಗ್ವೇದ ಕಾಲದ ಪದ್ಧತಿಯಾಗಿದ್ದಿತೆಂಬುದು ಈ ಸೂಕ್ತಗಳಿಂದ ತಿಳಿಯುತ್ತದೆ.

ಋಗ್ವೇದ ಕಾಲಕ್ಕಾಗಲೇ ಯಮನು ಮೃತ್ಯುದೇವತೆಯಾಗಿ ಕಂಡುಬರುತ್ತಾನೆ. ಅವನು ವಿವಸ್ವಾನನ ಮಗ. ಅಂದರೆ, "ಸೂರ್ಯ ಪುತ್ರ" ಎಂದು ಸಾಯಣ ವ್ಯಾಖ್ಯಾನಿಸಿದ್ದಾನೆ. ಅವನು ಕಡಿದಾದ ಪ್ರದೇಶಗಳಿಗೆ ಸಲೀಸಾಗಿ ಹೋಗುತ್ತಾನೆ, ಆ ದಾರಿಯಲ್ಲಿ ಹೋಗಬೇಕಾದ ಇತರರಿಗೆಲ್ಲಾ ಹಾದಿ ತೋರುತ್ತಾನೆ. ಜನರನ್ನು ಆ ಹಾದಿಯಲ್ಲಿ ಕೊಂಡು ಹೋಗುವವನು ಅವನೇ. ಅಂತಹ ಯಮರಾಜನಿಗೆ ಹವಿಸ್ಸು ಕೊಟ್ಟು ತುಷ್ಟೀಕರಿಸಬೇಕು (೧೦.೧೪.೧: ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಂ ಅನುಪಸ್ಪಶಾನಂ। ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ॥). ಮರಣಿಸಿದವರು ಹೋಗುವ ಹಾದಿಯನ್ನು ಮೊದಲು ಕಂಡುಹಿಡಿದವನು ಯಮ, ಆ ಹಾದಿಯಿಂದ ಯಾರನ್ನೂ ತಪ್ಪಿಸಲಾಗುವುದಿಲ್ಲ. ಒಬ್ಬೊಬ್ಬರದೂ ಅವರದೇ ಮಾರ್ಗ, ಆದರೆ ಎಲ್ಲರೂ ಹೋಗುವುದು ನಮ್ಮ ಹಿಂದಿನ ಪಿತೃಗಳು ಕ್ರಮಿಸಿರುವ ಮಾರ್ಗದಲ್ಲೇ (೨: ಯಮೋ ನೋ ಗಾತುಂ ಪ್ರಥಮೋ ವಿವೇದ ನೈಷಾ ಗವ್ಯೂತಿಃ ಅಪಭರ್ತವಾ ಉ। ಯತ್ರಾನಃ ಪೂರ್ವೇ ಪಿತರಃ ಪರೇಯುಃ ಏನಾ ಜಜ್ಞಾನಾಃ ಪಥ್ಯಾಃ ಅನು ಸ್ವಾಃ॥). ಗೋವುಗಳು ಮೇಯುವ ಹುಲ್ಲುಗಾವಲಿಗೆ 'ಗವ್ಯೂತಿ' ಎನ್ನುತ್ತಾರೆ. ಮಾನವರಿಗೆಲ್ಲಾ ಒಂದು ಅಂತಿಮ 'ಹುಲ್ಲುಗಾವಲು' ಸಜ್ಜಾಗಿದೆ, ಅದನ್ನು ಯಮನು ಕಂಡುಕೊಂಡಿದ್ದಾನೆ. ಗತಿಸಿದ ಪಿತೃಗಳು ಹೋಗಿರುವುದು ಅಲ್ಲಿಗೇ ಮತ್ತು ಬೇರೆ ಮಾನವರ ಗಂತವ್ಯವೂ ಅದೇ. ಆ ಯಮನನ್ನು ಯಜ್ಞಶಾಲೆಗೆ ಆಹ್ವಾನಿಸಿ ಆದರದಿಂದ ಬರಮಾಡಿಕೊಳ್ಳಬೇಕು, ಪಿತೃಗಳಾದ ಅಂಗಿರಸರೊಡನೆ ಕುಳ್ಳಿರಿಸಬೇಕು. ಕವಿಯ ಗಾನವು ಅವನನ್ನು ಅಲ್ಲಿಗೆ ಕರೆತರುತ್ತದೆ (೪: ... ಆ ತ್ವಾ ಮಂತ್ರಾಃ ಕವಿ ಶಸ್ತಾಃ ವಹಂತು). ಅಂಗಿರಸರು, ಅವರ ಸಂಬಂಧಿಗಳಾದ ವೈರೂಪರು (ವಿರೂಪನ ಮಕ್ಕಳು), ಯಮ ಮತ್ತು ಅವನ ತಂದೆ ವಿವಸ್ವಾನ್, ಎಲ್ಲರೂ ಒಟ್ಟಾಗಿಯೇ ಯಜ್ಞಶಾಲೆಯಲ್ಲಿ ಹಾಸಿರುವ ಹುಲ್ಲಿನ ಮೇಲೆ ಕೂಡುತ್ತಾರೆ (೫: ... ಅಸ್ಮಿನ್ ಯಜ್ಞೇ ಬರ್ಹಿಷಿ ಆ ನಿಷದ್ಯ). ಋಗ್ವೇದದ ಕವಿಯ ಕಾಲದ ಮಾನವರ ಪಿತೃಗಳೆಂದರೆ ಅಂಗಿರಸರು, ನವಗ್ವರು, ಅಥರ್ವಣರು ಮತ್ತು ಭೃಗುಗಳು. ವೇದಕಾಲೀನ ಕವಿಗಳ ಕೆಲವು ಕುಟುಂಬಗಳ ಹೆಸರುಗಳು ಇವು (೬: ಅಂಗಿರಸೋ ನಃ ಪಿತರಃ ನವಗ್ವಾಃ ಅಥರ್ವಾಣಃ ಭೃಗವಃ ಸೋಮ್ಯಾಸಃ).

ಮುಂದಿನ ಎರಡು ಮಂತ್ರಗಳು ಸಾವನ್ನಪ್ಪಿ ನಿರ್ಗಮಿಸುತ್ತಿರುವ ವ್ಯಕ್ತಿಯನ್ನು ಉದ್ದೇಶಿಸಿ ಹೇಳುವಂಥವು; ಶವಸಂಸ್ಕಾರದ ಸಂದರ್ಭದಲ್ಲಿ ಇವುಗಳ ಪ್ರಯೋಗವಿದೆ: "ಹೋಗು, ಹೋಗು, ಹಿಂದಿನ ನಮ್ಮ ಪಿತೃಗಳು ಹೋಗಿರುವ ಹಾದಿಯಲ್ಲಿ ನೀನು ಹೋಗು; ಅವರಿಗೆ ಅರ್ಪಿಸಲಾಗಿರುವುದನ್ನು ವರುಣ ಮತ್ತು ಯಮ ಸೇವಿಸುತ್ತಿರುತ್ತಾರೆ, ಅದನ್ನು ನೀನು ಕಾಣು" (೭:ಪ್ರೇಹಿ ಪ್ರೇಹಿ ಪಥಿಭಿಃ ಪೂರ್ವ್ಯೇಭಿಃ ನಃ ಪೂರ್ವೇ ಪಿತರಃ ಪರೇಯುಃ। ಉಭಾ ರಾಜಾನಾ ಸ್ವಧಯಾ ಮದಂತಾ ಯಮಂ ಪಶ್ಯಾಸಿ ವರುಣಂ ಚ ದೇವಂ॥). ವರುಣ ಮತ್ತು ಯಮ ಇಬ್ಬರೂ ರಾಜರು, ಮಾನವರ ಸ್ಥಿತಿ ಮತ್ತು ಗತಿಗಳನ್ನು ವೀಕ್ಷಿಸುವವರು, ನಿಯಂತ್ರಿಸುವವರು. ವೈಯ್ಯಕ್ತಿಕ ಮತ್ತು ಸಾಮಾಜಿಕ ನೈತಿಕತೆಯ ಒಡೆಯನಾದ ವರುಣನನ್ನು ಇಲ್ಲಿ ಸ್ಮರಿಸಿರುವುದು ಗಮನಾರ್ಹವಾಗಿದೆ; ಗತಿಸಿರುವವನ ಜೀವನದ ನೈತಿಕತೆಯನ್ನು ಅವನು ಯಮನೊಡನೆ ಕೂತು ತೂಗಿ ನೋಡುತ್ತಾನೆಂಬ ಸೂಚನೆ ಇಲ್ಲಿದೆ. ಮುಂದಿನ ಮಂತ್ರದಲ್ಲಿ ಇದನ್ನು ಮುಂದುವರಿಸಿ "ನಿನ್ನ ಹೊಲ್ಲತನ್ನು (ಅವದ್ಯ) ಇಲ್ಲೇ ಬಿಟ್ಟು ಹೊಸ ತಾಣಕ್ಕೆ ಹೋಗು, ಹೊಸದೊಂದು ರೂಪವನ್ನು ಧರಿಸು; ಅಲ್ಲಿ ಪಿತೃಗಳನ್ನೂ ಯಮನನ್ನೂ ಕೂಡಿಕೊಂಡು ನಿನ್ನ ಒಳಿತಿನ ಫಲವನ್ನು ಸವಿ, ಅದೇ ಪರಮಸ್ವರ್ಗ" ಎಂದು ಹೇಳಲಾಗಿದೆ

(೮ : ಸಂ ಗಚ್ಛಸ್ವ ಪಿತೃಭಿಃ ಸಂ ಯಮೇನ ಇಷ್ಟಾಪೂರ್ತೇನ ಪರಮೇ ವ್ಯೋಮನ್। ಹಿತ್ವಾಯ ಅವದ್ಯಂ ಪುನರಸ್ತಮೇಹಿ ಸಂ ಗಚ್ಛಸ್ವ ತನ್ವಾ ಸುವರ್ಚಾಃ॥). ನೈತಿಕ ಜೀವನದ ಮಹತ್ವವನ್ನು ವ್ಯಂಜಿಸಿರುವುದು ಇಲ್ಲಿ ಸ್ಪಷ್ಟವಾಗಿದೆ. "ಇಷ್ಟಾಪೂರ್ತ" ಎಂದರೆ ಎರಡು ರೀತಿಯ ಕ್ರಿಯೆಗಳು ಸೇರಿವೆ; ಒಂದು ಅಗ್ನಿಹೋತ್ರ ಮುಂತಾದ ಆಚರಣೆಗಳು, ಇನ್ನೊಂದು ಲೋಕೋಪಕಾರದ ಕೆಲಸಗಳು. ಎರಡರಲ್ಲೂ ಮಗ್ನನಾಗಿರುವುದು ನೈತಿಕತೆಯ ಲಕ್ಷಣವೆಂಬುದು ಮಂತ್ರದ ಇಂಗಿತ. ಅಂತೂ ಪಿತೃಗಳು ಸಾವನ್ನಪ್ಪಿದವನಿಗೆ ಸ್ಥಾನ ಸಿದ್ಧಗೊಳಿಸಿದ್ದಾರೆ ಮತ್ತು ಅಲ್ಲಿ ಯಮ ಇವರ ನೀರು-ನಿಡಿ ಮುಂತಾದ ಅಗತ್ಯಗಳನ್ನೆಲ್ಲಾ ಪೂರೈಸಿದ್ದಾನೆ (೯ : ... ಅಹೋಭಿಃ ಅದ್ಭಿಃ ಅಕ್ತುಭಿಃ ವ್ಯಕ್ತಂ). ಸಾಯಣನ ಪ್ರಕಾರ ಈ ಮಂತ್ರವು ಸ್ಮಶಾನದಲ್ಲಿ ಸುಳಿದಾಡುವ ಪಿಶಾಚಿಗಳಿಗೆ ಹೇಳಲಾಗಿದೆ (ಶ್ಮಶಾನೇ ಪೂರ್ವಂ ಸ್ಥಿತಾ ಹೇ ಪಿಶಾಚಾದಯಃ), ಆದರೆ ಅದಕ್ಕೆ ಮಂತ್ರದಲ್ಲಿ ಯಾವ ಸಮರ್ಥನೆಯೂ ಇಲ್ಲ; ಬದಲಾಗಿ, ಮುಂದಿನ ಮಂತ್ರದಲ್ಲಿ ಸಾವಿಗೀಡಾಗಿರುವವನನ್ನು ಉದ್ದೇಶಿಸಿ ಹೇಳಿರುವ ಮಾತುಗಳಿವೆ ("ಸಾವಿಗೀಡಾಗಿರುವವಳನ್ನು" ಎಂದೂ ಭಾವಿಸಿಕೊಳ್ಳಬೇಕು) : "ಸರಮೆಯ ಎರಡು ನಾಯಿಮರಿಗಳು ನಿನ್ನ ಸುಖದ ಹಾದಿಯಲ್ಲಿ ಬರುತ್ತವೆ. ಪಟ್ಟೆ ಮತ್ತು ಚುಕ್ಕೆಗಳು ಅವುಗಳ ಮೈಮೇಲೆಲ್ಲಾ ಇವೆ. ಒಂದೊಂದಕ್ಕೂ ನಾಲ್ಕು ಕಣ್ಣುಗಳು. ಅವುಗಳನ್ನು ದಾಟಿ ವೇಗವಾಗಿ ಹೋಗು. ಹೋಗಿ ಯಮನೊಡನೆ ಸುಖಿಸುತ್ತಿರುವ ಉದಾರಿ ಪಿತೃಗಳ ಬಳಿಗೆ ಸಾರು" (೧೦: ಅತಿ ದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ। ಅಥಾ ಪಿತೄನ್ ಸುವಿದತ್ರಾನ್ ಉಪೇಹಿ ಯಮೇನ ಯೇ ಸಧಮಾದಂ ಮದಂತಿ॥). ನಮಗೀಗಾಗಲೆ ತಿಳಿದಿರುವಂತೆ ಸರಮೆಯು ಇಂದ್ರನ ಹೆಣ್ಣು ನಾಯಿ. ಅವೇಕೆ ಯಮನ ಸ್ಥಾನದ ಹಾದಿಯಲ್ಲಿವೆಯೋ ತಿಳಿಯದು. ಅವಕ್ಕೆ ನಾಲ್ಕು ಕಣ್ಣಿರುವುದು ಬಹುಶಃ ಚೆನ್ನಾಗಿ ನಿಗಾ ಇಡುವ ಸಲುವಾಗಿರಬಹುದು. ಋಗ್ವೇದಕ್ಕೆ ಬಹಳವಾಗಿ ಹೊಂದುವ ಪ್ರಾಚೀನ ಪರ್ಷಿಯಾದ ಝೆಂಡ್ ಅವೆಸ್ತಾ ಗ್ರಂಥದಲ್ಲಿಯೂ ನಾಲ್ಕು ಕಣ್ಣುಗಳ ನಾಯಿಯ ಪ್ರಸ್ತಾಪವಿದೆ. ಮರಣಾನಂತರ ಬೇರೊಂದು ಪ್ರಪಂಚಕ್ಕೆ ತೆರಳುವವರು ದಾಟಿಹೋಗಬೇಕಾದ ಸೇತುವೆಯ ಬಳಿ ಕಾವಲು ಕಾಯುವ ಈ ನಾಯಿಗೆ ವಿಪರೀತ ಬುದ್ಧಿ : ಯಾರು ಪಿಶಾಚಿಗಳು ಮತ್ತು ಯಾರು ಪವಿತ್ರರು ಎಂಬುದನ್ನು ಕಂಡುಕೊಂಡು ಪವಿತ್ರರನ್ನು ಮಾತ್ರವೇ ಸೇತುವೆ ದಾಟಲು ಬಿಡುತ್ತದೆ ಅದು. ಸರಮೆಯ ಮರಿಗಳನ್ನು ದಾಟಿ ವೇಗವಾಗಿ ಹೋಗಬೇಕಾದ್ದು ಅವುಗಳು ತಡೆಯದಿರಲಿ ಎಂದಿರಬೇಕು. ಸಾಯಣನು ಇಡೀ ಸೂಕ್ತವನ್ನು ಸ್ಮಶಾನದಲ್ಲಿ ಶವಸಂಸ್ಕಾರದ ಕ್ರಿಯೆಯ ವಿಧಿ-ವಿಧಾನಗಳ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುತ್ತಾ "ಮಾವಿನ ಹಣ್ಣಿನ ಆಕಾರವಿರುವ ಎರಡು ಹೃದಯಗಳನ್ನು ಅನುಸ್ತರಣಿಯಿಂದ ಎತ್ತಿಕೊಂಡು ಪ್ರೇತದ ಕೈಗಳಲ್ಲಿಡುವಾಗ ಈ ಮಂತ್ರವನ್ನು ಹೇಳಬೇಕು" ಎಂದಿದ್ದಾನೆ. ವೈತರಣೀ ನದಿಯನ್ನು ದಾಟಿಸುವ ಹಸುವಿಗೂ 'ಅನುಸ್ತರಣಿ' ಎಂಬ ಹೆಸರಿದೆ. ಮುಂದಿನ ಮಂತ್ರದಲ್ಲಿ ಯಮನಿಗೊಂದು ವಿನಂತಿ ಇದೆ: "ಹಾದಿಯಲ್ಲಿ ರಕ್ಷಣೆಗೆಂದಿರುವ ನಾಲ್ಕು ಕಣ್ಣಿನ ಆ ನಿನ್ನ ನಾಯಿಗಳಿವೆಯಲ್ಲ, ಅವಕ್ಕೆ ಈ ಮೃತ ವ್ಯಕ್ತಿಯನ್ನು ಒಪ್ಪಿಸು ಮತ್ತು ಅವನಿಗೆ ಸುಖ ಸಂಪತ್ತನ್ನು ನೀಡು" (೧೧ : ... ತಾಭ್ಯಾಮೇನಂ ಪರಿ ದೇಹಿ ರಾಜನ್ ಸ್ವಸ್ತಿ ಚ ಅಸ್ಮೈ ಅನಮೀವಂ ಚ ಧೇಹಿ). ಯಮನು ಮೃತ ವ್ಯಕ್ತಿಯನ್ನು ಸರಮೆಯ ಮರಿಗಳಿಗೆ ಒಪ್ಪಿಸಿದರೆ ಪರವಾಗಿಲ್ಲ, ಆದರೆ ವ್ಯಕ್ತಿಯು ನೇರವಾಗಿ ಅವಕ್ಕೆ ಸಿಕ್ಕಿಹಾಕಿಕೊಳ್ಳಬಾರದು ಎಂಬುದು ಯಮನ್ಯಾಯ ವಿರಬೇಕು! ಕೈದಿಯನ್ನು "ನ್ಯಾಯಾಂಗದ ಹತೋಟಿಗೆ ಕೊಡುವುದು" ಎನ್ನುತ್ತೇವಲ್ಲ ಆ ಮಾದರಿಯದು ಇದೆಂದು ತೋರುತ್ತದೆ. ಯಮದೂತರು ಸದಾ ನಮ್ಮ ನಡುವೆ ಗಸ್ತು ತಿರುಗುತ್ತಿರುತ್ತಾರೆ, ಸೂಕ್ತ ಕ್ಷಣ ಬಂದಾಗ ಯಾವ ದಾಕ್ಷಿಣ್ಯವೂ ಇಲ್ಲದೆ ಯಾರನ್ನು ಹಿಡಿಯಬೇಕೋ ಅವರನ್ನು ಹಿಡಿದುಕೊಂಡು ಹೋಗಿಬಿಡುತ್ತಾರೆಂಬ ಐತಿಹ್ಯವೊಂದು ಪ್ರಚಲಿತವಾಗಿದೆ. "ಜವರಾಯ ಬಂದರೆ ಬರಿಗೈಲಿ ಬರಲಿಲ್ಲ, ಕುಡುಗೋಲು ಕೊಡಲಿಯನ್ನು" ಹೆಗಲೇರಿಸಿಕೊಂಡೇ ಬರುತ್ತಾನೆಂಬ ಹಾಡನ್ನು



ಕರೀಂ ಖಾನರು ಹಾಡುತ್ತಿದ್ದರು. ಋಗ್ವೇದದಲ್ಲಿ ಯಮನ ಆಣತಿಯನ್ನು ಜಾರಿಗೊಳಿಸುವವರು ಸರಮೆಯ ಈ ಶ್ವಾನಮರಿಗಳು. ಅವು ಕರಿಯ ಬಣ್ಣದವು ಮತ್ತು ಅವಕ್ಕೆ ಎಷ್ಟು ಸಿಕ್ಕಿದರೂ ಅತೃಪ್ತಿಯೇ. ಅವುಗಳ ಮೂಗಿನ ಹೊಳ್ಳೆಗಳು ಲಂಬವಾದುವು. ಯಮನ ಸಂದೇಶವಾಹಕರಾಗಿ ಅವು ಸದಾ ಜನಗಳ ಮಧ್ಯೆ ಓಡಾಡಿಕೊಂಡಿರುತ್ತವೆ. ಅವಕ್ಕೆ ಕವಿಯು ವಿನಂತಿಸಿಕೊಳ್ಳುತ್ತಾನೆ : ಇಲ್ಲಿ ಮತ್ತು ಇಂದು ಅವು ನಮಗೆ ಸುಭದ್ರವಾದ ಜೀವನವನ್ನು ಕರುಣಿಸಲಿ, ಮತ್ತೆ ನಾವು ಸೂರ್ಯನನ್ನು ನೋಡುತ್ತಿರುವಂತೆ ಆಗಲಿ, ಎಂದು (೧೨ : ಉರೂಣಸೌ ಅಸುತೃಪೌ ಉದುಂಬಲೌ ಯಮಸ್ಯ ದೂತೌ ಚರತೋ ಜನಾನ್ ಅನು। ತಾವಸ್ಮಭ್ಯಂ ದೃಶಯೇ ಸೂರ್ಯಾಯ ಪುನರ್ದಾತಾಂ ಅಸುಂ ಅದ್ಯೇಹ ಭದ್ರಂ॥). ಜೀವ ತೊರೆದು ಹೋಗಲು ಎಂದೂ ಸಿದ್ಧವಿರದ ಮಾನವ ಮನಸ್ಸಿನ ಛಾಯೆ ಈ ಮಂತ್ರದಲ್ಲಿ ಚೆನ್ನಾಗಿ ಮೂಡಿಬಂದಿದೆ. ಸಾವಿನ ಭಯ ಎಷ್ಟರಮಟ್ಟಿನದೆಂದರೆ ಕಡೆಗೆ ಯಮನ ನಾಯಿಗಳ ಕರುಣಾಭಿಕ್ಷವನ್ನು ಯಾಚಿಸುವಂತಾಗಿದ್ದಾನೆ ಕವಿ. ಅವುಗಳ ಕರಾಳ ರೂಪವು ಕರಾಳ ಕೃತ್ಯಕ್ಕೆ ಹೇಳಿ ಮಾಡಿಸಿದಂತಿದೆ; ಕರಾಳತೆಯೆದುರು ಕರುಣೆಯ ಭರವಸೆಗಾಗಿ ಕಾಯುತ್ತಾನೆ ಮಾನವ. ಮೃತ್ಯುವೆಂಬ ವಿಸ್ಮಯ ಮತ್ತು ಜೀವನವೆಂಬ ಸೊಗಸು, ಇವೆರಡೂ ಮುಖಾಮುಖಿಯಾಗಿರುವಂತಹ ಕವನ ಈ ಸೂಕ್ತ. ಸೂಕ್ತದ ಕಡೆಯ ನಾಲ್ಕು ಮಂತ್ರಗಳಲ್ಲಿ ನೇರವಾಗಿ ಯಮನನ್ನೇ ಸುಪ್ರೀತನನ್ನಾಗಿಸುವಂತಹ ಪ್ರಕ್ರಿಯೆ ಇದೆ : "ಯಮನಿಗೆ ಸೋಮರಸವನ್ನು ಸುರಿಯಿರಿ, ಯಮನಿಗೆ ಹವಿಸ್ಸು ನೀಡಿ, ಅಗ್ನಿಮುಖೇನ ಯಮನಿಗೆ ಯಜ್ಞವನ್ನು ಅರ್ಪಿಸಿ; ಬೇಕಾದಷ್ಟು ತುಪ್ಪವಿರುವಂತಹ ಶ್ರೇಷ್ಠ ಉಡುಗೊರೆ ನೀಡಿ ಮತ್ತು ಅವನ ಮುಂದೆ ಮಂಡಿಯೂರಿ ಕೇಳಿಕೊಳ್ಳಿ, ದೀರ್ಘಾಯುಗಳಾಗಿ ದೇವತೆಗಳನ್ನು ಸೇರಿಕೊಳ್ಳೋಣ, ಎಂದು. ಜೇನುತುಪ್ಪ ಸುರಿದು ಯಮನಿಗೆ ಹವಿಸ್ಸು ನೀಡಿ; ಪ್ರಾಚೀನ ಋಷಿಗಳಿಗೆ, ಪಿತೃಗಳಿಗೆ, ತಲೆಬಾಗಿಸಿ. ಅವರು ನಮಗೆ ಹಾದಿ ನಿರ್ಮಿಸಿಕೊಟ್ಟಿದ್ದಾರೆ. ಹೀಗೆ ಹೇರಳವಾಗಿ ಸೋಮರಸವನ್ನು ಪಡೆದ ಯಮನು ಸರ್ವವ್ಯಾಪಿ. ಆರು ಭೂಮಿಗಳು, ಒಂದು ಬೃಹತ್ ವಿಶ್ವ, ತ್ರಿಷ್ಟುಭ್-ಗಾಯತ್ರಿ ಮುಂತಾದ ಛಂದೋರೂಪಗಳು, ಎಲ್ಲವೂ ಆ ಯಮನಲ್ಲೇ ನಿಹಿತವಾಗಿವೆ" (೧೩-೧೬ : ... ಸಃ ನಃ ದೇವೇಷು ಆ ಯಮತ್ ದೀರ್ಘಮಾಯುಃ ಪ್ರ ಜೀವಸೇ ... ಇದಂ ನಮ ಋಷಿಭ್ಯಃ ಪೂರ್ವಜೇಭ್ಯಃ ಪೂರ್ವೇಭ್ಯಃ ಪಥಿಕೃದ್ಭ್ಯಃ ... ತ್ರಿಷ್ಟುಭ್ ಗಾಯತ್ರೀ ಛಂದಾಂಸಿ ಸರ್ವಾತಾ ಯಮೇ ಆಹಿತಾ॥). ಅಂದರೆ, ಪರಿಪರಿಯಾಗಿ ಯಮನನ್ನು ಬೇಡಿಕೊಳ್ಳೋಣ, ನಾವು ದೀರ್ಘಾಯುಗಳಾಗಿರೋಣ, ಎಂದು. ಸೂಕ್ತವನ್ನು ಪೂರ್ತಿಯಾಗಿ ತಿಳಿದನಂತರ ನಮಗೆ ತಿಳಿಯದೆ ಉಳಿಯುವ ಅಂಶವೆಂದರೆ ಇದಕ್ಕೂ ಸ್ಮಶಾನದಲ್ಲಿ ನಡೆಯುವ ಶವಸಂಸ್ಕಾರಕ್ಕೂ ಎತ್ತಣಿಂದೆತ್ತ ಸಂಬಂಧವಯ್ಯಾ, ಎಂದು. ಆದರೆ ಆಚರಣೆಯಲ್ಲಿ ಸೂಕ್ತದ ಮಂತ್ರಗಳನ್ನು ಹಾಗೆ ಪ್ರಯೋಗಿಸುತ್ತಾ ಬರಲಾಗಿದೆ. ಸಾವಿನೊಡನೆ ಸೆಣಸುವ ಮನಸ್ಸಿನ ತೊಯ್ದಾಟವನ್ನು ಸ್ಮಶಾನದ ಯಾವುದೋ ಸಂಸ್ಕಾರ ಕ್ರಿಯೆಯೊಡನೆ ಜೋಡಿಸಿಡುವುದು ಬುದ್ಧನ ಸುಪ್ರಸಿದ್ಧ ಸಂದೇಶವೊಂದನ್ನು ಶವವನ್ನು ಸುಡುವಾಗ ಉಚ್ಚರಿಸಿದಂತಾಗುತ್ತದೆ. ಬುದ್ಧನ ಮಾತೊಂದಿದೆ : ಅಣಿಚ್ಚಾ ಸಂಖಾರಾ ಅಪ್ಪಮಾದೇನ ಸಂಪಾದೇಥಾ, ಎಂದು. ನಮ್ಮ ಜೀವನ ಸಂಸ್ಕಾರಗಳೆಲ್ಲಾ ಅನಿತ್ಯ, ಆದ್ದರಿಂದ ಪ್ರಮಾದವೆಸಗದೆ ಅವನ್ನು ಹಸನುಗೊಳಿಸಿಕೊಳ್ಳೋಣ, ಎಂಬುದು ಅದರರ್ಥ. ಈ ಋಗ್ವೇದ ಸೂಕ್ತದ (೧೦.೧೪) ಸಂದೇಶವೂ ಅದೇ ಆಗಿದೆ.

ಪಿತೃಸೂಕ್ತವೆಂದು ಪ್ರಸಿದ್ಧವಾಗಿರುವುದು ಮುಂದಿನ ಸೂಕ್ತ (೧೦.೧೫). ಇದರ ಕೆಲವು ಮಂತ್ರಗಳನ್ನು ಒಂದು ವರ್ಣದವರು ಶ್ರಾದ್ಧಕರ್ಮದಲ್ಲಿ ಪ್ರಯೋಗಿಸುವುದುಂಟು. ಅದರಿಂದಾಗಿ ಈ ಸೂಕ್ತವೂ 'ಮಲಿನ'ವೆಂದು ಸಂಪ್ರದಾಯಸ್ಥರು ಕೆಲವರು ಭಾವಿಸಿಕೊಳ್ಳುತ್ತಾರೆ. ಆದರೆ ಸೂಕ್ತವನ್ನು ಪರಿಚಯಿಸಿಕೊಂಡರೆ ಅದು ಶುದ್ಧವಾಗಿ 'ಶುದ್ಧ'ವೇ ಆಗಿದೆಯೆಂದು ತಿಳಿಯುತ್ತದೆ. ಪಿತೃಗಳನ್ನು ಆಹ್ವಾನಿಸಿ ಅವರನ್ನು ತೃಪ್ತಿಗೊಳಿಸಬೇಕೆಂಬ ಆಶಯವು ಇಡೀ ಸೂಕ್ತದಲ್ಲಿ ವ್ಯಕ್ತವಾಗಿದೆ ಮತ್ತು ಯಮನ ಪ್ರಸ್ತಾಪವು ಒಂದು ಬಾರಿ ಮಾತ್ರ ಬಂದಿದೆ. ಬೇರೆಯಂತೆ ಇಂದ್ರ, ಅಗ್ನಿ,

ಸೋಮ, ಮುಂತಾದ ದೇವತೆಗಳ ಪ್ರಸ್ತಾಪವೇ ಅಧಿಕ. ಗತಿಸಿರುವ ಪಿತೃಗಳಿಗೆ ಗೌರವ ಅರ್ಪಿಸುವುದು, ಅವರ ಹಿತವನ್ನು ಬಯಸುವುದು, ಅವರಿಗೆ ಹವಿಸ್ಸು ನೀಡುವುದು ಮತ್ತು ಸಂಪತ್ತನ್ನು ಕರುಣಿಸುವಂತೆ ಅವರಲ್ಲಿ ವಿನಂತಿಸಿಕೊಳ್ಳುವುದು, ಇವೇ ಸೂಕ್ತದ ಮುಖ್ಯವಸ್ತು. ಸಾವೆಂಬ ಸಂಗತಿಯು ನೇರವಾಗಿಯಲ್ಲದಿದ್ದರೂ ನೇಪಥ್ಯದಲ್ಲಿ ದಟ್ಟವಾಗಿಯೇ ಸೂಕ್ತವನ್ನಾವರಿಸಿದೆ. ಕವಿತ್ವದ ದೃಷ್ಟಿಯಿಂದ ನೋಡಿದರೆ ಈ ಸೂಕ್ತವು ಅಷ್ಟೇನೂ ಆಪ್ತವಾಗದಿರುವುದು ಮೇಲ್ನೋಟಕ್ಕೇ ಗೊತ್ತಾಗಿಬಿಡುತ್ತದೆ. ಪಿತೃಗಳನ್ನು ಸಹ ಕಾಲಾನುಕ್ರಮದಲ್ಲಿ ವಿಭಜಿಸಲು ಸಾಧ್ಯ: ಬಹಳ ಹಿಂದೆ ಗತಿಸಿದವರು, ನಂತರ ಗತಿಸಿದವರು, ಈಚೆಗೆ ಗತಿಸಿದವರು, ನಮ್ಮ ಕಣ್ಣಮುಂದೆ ಗತಿಸಿದವರು, ಮುಂತಾಗಿ. ಅತಿ ಪ್ರಾಚೀನ ಕಾಲದಲ್ಲಿ ಗತಿಸಿದವರು ಮೂರನೆಯ ಅತ್ಯುಚ್ಚ ಸ್ವರ್ಗದಲ್ಲಿರುತ್ತಾರೆ; ಅದು ವಿಷ್ಣುಪದ. ನಂತರ ಗತಿಸಿದವರು ಅವರ ಹಾದಿಯಲ್ಲಿ ನಡೆದು ಅವರನ್ನು ಸೇರಿಕೊಳ್ಳಬೇಕು. ಪ್ರಾಚೀನರಲ್ಲಿ ಈಗಾಗಲೆ ನಾವು ಗಮನಿಸಿರುವ ಅಂಗಿರಸರು, ಅಥರ್ವಣರು, ಭೃಗುಗಳು, ವಸಿಷ್ಠರು, ಎಲ್ಲಾ ಇದ್ದಾರೆ. ಇವೆಲ್ಲಾ ವಿವಿಧ ಪ್ರಾಚೀನ ಬುಡಕಟ್ಟುಗಳು, ಶ್ರೇಷ್ಠ ಪದವಿಯನ್ನು ಗಳಿಸಿಕೊಂಡ ಪಂಗಡಗಳು. ಅವುಗಳ ಅನುಕರಣವು ಋಗ್ವೇದದ ಕವಿಗಳ ಮೂಲ ಆದರ್ಶ. ಅವರ ಜೀವನಕ್ರಮವು 'ಋತ'ದಿಂದ ಬದ್ಧವಾಗಿದ್ದಿತೆಂಬುದು ಅನುಕರಣೆಗೆ ಅವರನ್ನು ಅರ್ಹರನ್ನಾಗಿಸುತ್ತದೆ. ವಸಿಷ್ಠ, ಭೃಗು, ಮುಂತಾದ ಹೆಸರುಗಳು ನಂತರದ ರಾಮಾಯಣ–ಮಹಾಭಾರತಗಳಲ್ಲಿ ಪ್ರಸಿದ್ಧವಾಗಿವೆ. ಋಗ್ವೇದದ ಕವಿಗಳು ನೆನಪಿಸಿಕೊಳ್ಳುವ ಭೃಗು ಮತ್ತು ವಸಿಷ್ಠಾದಿಗಳು ಬೇರೆ; ಪ್ರಾಚೀನ ಬುಡಕಟ್ಟುಗಳ ನಂತರದ ಬಣಗಳಿಗೆ ಸೇರಿದವರು ಇವರು, ಅಷ್ಟೆ.

ಸೂಕ್ತದ ಮೊದಲ ಮಂತ್ರದಲ್ಲಿ ಪಿತೃಗಳನ್ನು ಮೇಲಿನವರು, ಮಧ್ಯದವರು, ಮತ್ತು ಈಚಿನವರು ಎಂದು ವಿಂಗಡಿಸಲಾಗಿದೆ. ಆದರೆ ಅವರೆಲ್ಲರೂ 'ಋತ'ವನ್ನು ತಿಳಿದವರೇ, ಸೋಮರಸದಿಂದ ಆಹ್ಲಾದ ಪಡೆದವರೇ, ಸ್ನೇಹಪರರೇ ಆಗಿದ್ದಾರೆ. ಅವರೆಲ್ಲಾ ಅಮೃತತ್ವವನ್ನು ಪಡೆದು ದ್ಯುಲೋಕದಲ್ಲಿದ್ದಾರೆ. ಋಗ್ವೇದದ ಕವಿಯು ಆಹ್ವಾನಿಸಿದಾಗ ಅವರು ರಕ್ಷಣೆಗೆ ಧಾವಿಸುತ್ತಾರೆ (೧೦.೧೫.೧ : ಉದೀರತಾಂ ಅವರೇ ಉತ್ಪರಾಸಃ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ । ಅಸುಂ ಯೇ ಈಯುಃ ಅವೃಕಾಃ ಋತಜ್ಞಾಃ ತೇ ನಃ ಅವಂತು ಪಿತರೋ ಹವೇಷು ॥). ದ್ಯುಲೋಕವು ಉಚ್ಚ, ಮಧ್ಯಮ ಮತ್ತು ಅವರ (ಅತಿ ಕೆಳಗಿನದು) ಎಂಬ ವಿಭಜನೆಯನ್ನು ಸಾಯಣನು ಪಿತೃಗಳಿಗೆ ಆರೋಪಿಸಿ ಅವರು ಉತ್ತಮರು, ಮಧ್ಯಮರು ಮತ್ತು ಅಧಮರು ಎಂದು ಅನರ್ಥವನ್ನು ಮೆರೆದಿದ್ದಾನೆ. ಅಥರ್ವವೇದದಲ್ಲಿ ಸಹ ಪಿತೃಗಳನ್ನು 'ಅಮೃತತ್ವ ಭಾಜನರು' ಎಂದು ಪದೇ ಪದೇ ಗೌರವಿಸಲಾಗಿದೆ. "ಮರ್ತ್ಯರಾದ ನಮಗೆ ಅಮರ್ತ್ಯರಾದ ಪಿತೃಗಳು ಆಯುಸ್ಸನ್ನು ನೀಡಿ ಹಿತವನ್ನು ಬಯಸಲಿ" ಎಂಬುದು ಆಗಾಗ್ಗೆ ಉಚ್ಚರಿಸಲಾಗಿರುವ ಆಶಯವಾಗಿದೆ (ಅ.ವೇ. ೬.೪೧.೩ : ... ಅಮರ್ತ್ಯಾ ಮರ್ತ್ಯಾನ್ ಅಭಿ ನಃ ಸಚಧ್ವಂ ಆಯುರ್ಧತ್ತ ಪ್ರತರಂ ಜೀವಸೇ ನಃ). ವಿಶೇಷವೆಂದರೆ ಅಥರ್ವವೇದದ ಒಂದು ಸೂಕ್ತವು "ಪತಿಲೋಕವನ್ನು ಹುಡುಕಿಕೊಂಡು ಹೊರಟಿರುವ" ಮೃತ ನಾರಿಯನ್ನು ಕುರಿತಾಗಿದೆ. ಅದರಲ್ಲಿ ೭೩ ಮಂತ್ರಗಳಿವೆ ಮತ್ತು ಅಭ್ಯಾಸ ಯೋಗ್ಯವಾಗಿವೆ.

ಪಿತೃಗಳು 'ಉಚ್ಚ', 'ಮಧ್ಯಮ' ಮತ್ತು 'ಅವರ' ಎಂಬುದು ಕಾಲಾನುಕ್ರಮದ ಸೂಚನೆಯೆಂಬುದು ಸೂಕ್ತದ ಎರಡನೆಯ ಸೂಕ್ತದಲ್ಲಿ ಸ್ಪಷ್ಟವಾಗಿದೆ (೨ : ... ಯೇ ಪೂರ್ವಾಸಃ ಯೇ ಉಪರಾಸಃ ಈಯುಃ). ಭಿನ್ನತೆ ಇರುವುದು ಮೊದಲು ಗತಿಸಿದವರು ಮತ್ತು ನಂತರ ಗತಿಸಿದವರು ಎಂಬುದರಲ್ಲಿ, ಅಷ್ಟೆ. ಅವರ

## ಸಾದರ ಸ್ವೀಕಾರ

**ಉರಿನಾಲಿಗೆ – ಪ್ರೊ॥ ಎಚ್. ಟಿ. ಪೋತೆ ವಾಚಿಕೆ**
*ಸಂ : ಡಾ॥ ಶ್ರೀಶೈಲ ನಾಗರಾಳ*
***ಪುಟ : xvi + ೩೧೦ = ೩೨೬ ಬೆಲೆ : ರೂ. ೨೨೦***
***ಉತ್ತಮ ಪ್ರತಿ ಬೆಲೆ : ರೂ. ೩೨೦***
**ಸಿರಿಗಿರಿ ಪ್ರಕಾಶನ,** ಮನೆ ನಂ. ೩–೯೭೮, ಗಾಜಿಪುರ, ಗುಲಬರ್ಗಾ – ೫೮೫ ೧೦೧

**ಕವಿತೆ ಅಚ್ಚಾಗುವದಿಲ್ಲ** (ಕವನ ಸಂಕಲನ)
*ಶಿ. ಕಾ. ಬಡಿಗೇರ*
***ಪುಟ : xvi + ೫೬ = ೭೨ ಬೆಲೆ : ರೂ. ೬೦***
**ಬೆರಗು ಪ್ರಕಾಶನ,** ಶರಧಿ, ಮರಿಯಮ್ಮನ ಗುಡಿ ಹತ್ತಿರ, ಅಂಚೆ ಭಾಗ್ಯನಗರ, ತಾ॥ ಜಿ॥ ಕೊಪ್ಪಳ – ೫೮೩ ೨೩೮

**ಲೋಕದಂತೆ ಬಾರರು** (ವ್ಯಕ್ತಿಚಿತ್ರಗಳು)
ಮೃತ್ಯುಂಜಯ ರುಮಾಲೆ
***ಪುಟ : xvi + ೨ + ೧೫೨ ಬೆಲೆ ರೂ. ೧೪೦***

**ಹಂಪೆಯ ಸುತ್ತ ಶೋಧ** ಮೃತ್ಯುಂಜಯ ರುಮಾಲೆ
***ಪುಟ : xii + ೧೫೬ ಬೆಲೆ ರೂ. ೧೨೦***
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪ್ರಣವ ಪ್ರಕಾಶನ,** ಬಸವೇಶ್ವರ ಬಡಾವಣೆ, ಹೊಸಪೇಟೆ – ೫೮೩ ೨೦೧

**ಅನುಸಂಧಾನ** (ಸಂಶೋಧನಾ ಲೇಖನಗಳು)
ಗುರುಮೂರ್ತಿ ಪೆಂಡಕೂರು
***ಪುಟ : ೧೨ + ೧೯೬ = ೨೦೮ ಬೆಲೆ ರೂ. ೧೦೦***

**ಪಟಚಿತ್ರ** (ಲಲಿತ ಪ್ರಬಂಧಗಳು)
ಗುರುಮೂರ್ತಿ ಪೆಂಡಕೂರು
***ಪುಟ : ೮ + ೯೬ = ೧೦೪ ಬೆಲೆ ರೂ. ೬೦***
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಯುವಕರ ಸಂಘ (ರಿ),** ರಾಮನಗರ, ಹಗರಿಬೊಮ್ಮನಹಳ್ಳಿ – ೫೮೩ ೨೧೨, ಬಳ್ಳಾರಿ ಜಿಲ್ಲೆ

**ಶಿಕ್ಷಣ ಶಿಲ್ಪಿ – ಸರ್ ಸಿ. ಆರ್. ರೆಡ್ಡಿ** (ಒಂದು ಕ್ರಾಂತಿಯ ಕಥನ) ಮೊ. ಮು. ಆಂಜನಪ್ಪ ರೆಡ್ಡಿ
***ಪುಟ : ೧೪೩ ಬೆಲೆ ರೂ. ೯೦***
**ವೇಮನ ಪ್ರಕಾಶನ,** ನಂ. ೧೩೩, ೩ನೇ 'ಇ' ಅಡ್ಡರಸ್ತೆ, 'ಜಿ' ಮುಖ್ಯರಸ್ತೆ, ಕಸ್ತೂರಿನಗರ, ಬೆಂಗಳೂರು – ೪೩

**ಅಂಬೇಡ್ಕರ್ ಎಂಬ ಕರಗದ ಬಂಡೆ**
ರಘೋತ್ತಮ ಹೊ. ಬ.
***ಪುಟ : ೧೫೨ ಬೆಲೆ ರೂ. ೧೨೦***
**ಸಾಂಚಿ ಪುಸ್ತಕ,** ೧೩/೧೮೪, ೩ನೇ ಕ್ರಾಸ್, ಅಂಬೇಡ್ಕರ್ ಬಡಾವಣೆ, ಚಾಮರಾಜನಗರ – ೫೭೧ ೩೧೩

**ಕಲ್ಲ ತಿನ್ನುವ ಪ್ರಾಣಿಗಳು ಬಂದಾವ ನೋಡಾ...** (ಅಧ್ಯಕ್ಷ ಭಾಷಣ – ಬಳ್ಳಾರಿಯಲ್ಲಿ ನಡೆದ ೧೭ನೆಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ – ೨೦೧೪ ) ಷ. ಶೆಟ್ಟರ್
***ಪುಟ : ೩೨***
**ಕನ್ನಡ ಸಾಹಿತ್ಯ ಪರಿಷತ್ತು,** ಬಳ್ಳಾರಿ ಜಿಲ್ಲಾ ಘಟಕ, ಕಂಪಿಲಿ

**ನಾಗವಂಶ : ದಲಿತ ಅಸ್ಮಿತೆ**
*ಮರಾಠಿ ಮೂಲ : ಶ್ರೀನಿವಾಸ ಭಾಲೇರಾವ್*
*ಕನ್ನಡಕ್ಕೆ : ಡಾ॥ ಸಿದ್ರಾಮ ಕಾರಣಿಕ*
***ಪುಟ : ೫೪ + ೪ ಬೆಲೆ ರೂ. ೪೦***

**ಮರಗುದುರೆ ನಗ್ನಮುನಿ ಮಾತು–ಕವಿತೆ**
*ಅನು : ಡಾ॥ ಎಚ್. ಎಸ್. ಅನುಪಮಾ*
***ಪುಟ : ೬೨ + ೪ ಬೆಲೆ ರೂ. ೪೦***

**ಹಿಂಸಾಕಾರಣ** (ಲೇಖನಗಳು) ಡಾ॥ ಐ. ಜೆ. ಮ್ಯಾಗೇರಿ
***ಪುಟ : xviii + ೭೪ = ೯೨ ಬೆಲೆ ರೂ. ೬೦***
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ತುಟಿಯಂಚಲಿ ಉಳಿದ ಕವಿತೆಗಳು** ಸ್ಮಿತಾ ಅಮೃತರಾಜ್
***ಪುಟ : ೧೨ + ೧೦೦ = ೧೧೨ ಬೆಲೆ ರೂ. ೯೦***
**ಕನ್ನಡ ಸಾಹಿತ್ಯ ಪರಿಷತ್ತು,** ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೧೮

**ಯಕ್ಷಗಾನ ಸ್ಥಿತ್ಯಂತರ** (ಸಂಶೋಧನ ಲೇಖನಗಳು)
*ಡಾ॥ ಮೋಹನ ಕುಂಟಾರ್*
***ಪುಟ : ೧೮ + ೨೫೪ ಬೆಲೆ ರೂ. ೨೦೦***
**ಯಾಜಿ ಪ್ರಕಾಶನ,** 'ಭೂಮಿ' ನಹರ್ ಕಾಲೋನಿ, ಎಂ. ಪಿ. ಪ್ರಕಾಶನಗರ, ಹೊಸಪೇಟೆ – ೫೮೩ ೨೦೧

**ಕೂಸಪ್ಪನ ಸಂದೇಹಗಳು ಮತ್ತು ಸಂದೇಶಗಳು**
(ನಗೆಬರಹಗಳ ಸಂಕಲನ) ರಾಘವೇಂದ್ರ ಉಡುಪಿ
***ಪುಟ : ೧೫೨ + iv ಬೆಲೆ ರೂ. ೮೦***
**ಕೌಸ್ತುಭ ಪ್ರಕಾಶನ,** ೧೮೯, ೩ನೇ ಮಹಡಿ, ಈ ಎ. ಟಿ. ಸ್ಟ್ರೀಟ್, ಬಸವನಗುಡಿ, ಬೆಂಗಳೂರು – ೫೬೦ ೦೦೪

**೭೦೦ ಭತ್ತ, ೧೨೦ ಮಾವಿನ ತಳಿಗಳ ಸಂರಕ್ಷಕ ಸೈಯದ್ ಘನಿ ಖಾನ್** (ಮಂಡ್ಯ ಜಿಲ್ಲೆಯ ಯುವ ರೈತ ವಿಜ್ಞಾನಿಯ ಯಶೋಗಾಥೆ) ಆನಂದತೀರ್ಥ ಪ್ಯಾಟಿ
***ಪುಟ : iv + ೩೬ ಬೆಲೆ ರೂ. ೩೦***
**ಕೃಷಿ ಮಾಧ್ಯಮ ಕೇಂದ್ರ,** ೩೨೭, ೧ನೇ ಮಹಡಿ, ರಾಯಚೂರು ಪ್ಲಾಟ್ಸ್, ನಾರಾಯಣಪುರ, ಧಾರವಾಡ – ೫೮೦ ೦೦೮

**ಡಿಜಿಟಲ್ ಕ್ಯಾಮೆರಾ ಮೋಡಿ ಕ್ಲಿಕ್ ಮಾಡಿ ನೋಡಿ !**
*ಟಿ. ಜಿ. ಶ್ರೀನಿಧಿ*
***ಪುಟ : ೪೮ + ೪ ಬೆಲೆ ರೂ. ೧೭೫***
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ವಾಸಸ್ಥಾನದಲ್ಲಿ ಭಿನ್ನತೆ ಇರುವುದು ಭೂಮಿಗೆ ಹತ್ತಿರದಲ್ಲಿರುವುದು ಇಲ್ಲವೇ ಮೇಲಿನ ಸಮೃದ್ಧ ಲೋಕದಲ್ಲಿರುವುದು ಎಂಬುದರಲ್ಲಿ. ಪಿತೃಗಳನ್ನು ತಿಳಿದು ಗೆದ್ದುಕೊಂಡಿದ್ದರಿಂದ ವಿಷ್ಣುವಿನ ಮೂಲಕ ಸಂತತಿಯ ಅಭಿವೃದ್ಧಿಯು ಸಾಧ್ಯವಾಗಿದ್ದು ಕವಿಗೆ ಉಲ್ಲಾಸ ನೀಡಿದೆ (೩ : ... ನಪಾತಂ ಚ ವಿಕ್ರಮಣಂ ಚ ವಿಷ್ಣೋಃ) ಮತ್ತು ಪಿತೃಗಳು ಆಗಿಂದಾಗ್ಗೆ ಅವನ ಬಳಿಗೆ ಬರುತ್ತಿರುತ್ತಾರೆ. ಮುಂದಿನ ಮಂತ್ರಗಳಲ್ಲಿ ಮತ್ತೆ ಮತ್ತೆ ವ್ಯಕ್ತವಾಗಿರುವುದು ಒಂದೇ ಆಶಯ: ನಮ್ಮ ಆಹ್ವಾನವನ್ನು ಮನ್ನಿಸಿ ಬಂದಿರುವ ಪಿತೃಗಳು ಹುಲ್ಲಿನ ಹಾಸಿನ ಮೇಲೆ ಆಸೀನರಾಗಿದ್ದಾರೆ, ಅವರಿಗೆ ನಾವು ಉಪಚಾರ ಮಾಡುತ್ತೇವೆ, ಅವರು ನಮಗೆ ಆರೋಗ್ಯ ಮತ್ತು ಶಕ್ತಿ ನೀಡಲಿ (೪ : ... ತೇ ಆ ಗತ ಅವಸಾ ಶಂತಮೇನ ಅಥ ನಃ ಶಂ ಯೋಃ ಅರಪಃ ದಧಾತ). ನಮ್ಮನ್ನವರು ಆಶೀರ್ವದಿಸಲಿ (೫ : ... ಅಧಿ ಬ್ರುವಂತು ತೇ ಅವಂತು ಅಸ್ಮಾನ್). ಪಿತೃಗಳು ನಮ್ಮ ಅಕೃತ್ಯಗಳಿಗಾಗಿ ನಮ್ಮನ್ನು ಶಿಕ್ಷಿಸದಿರಲಿ; ನಾವು ಸಾಮಾನ್ಯ ಮನುಷ್ಯರಂತೆ ತಪ್ಪೆಸಗಿರಬಹುದು, ಕ್ಷಮಿಸಿ (೬ : ... ಮಾ ಹಿಂಸಿಷ್ಟ ಪಿತರಃ ಕೇನ ಚಿತ್ ನಃ ಯತ್ ವಃ ಆಗಃ ಪುರುಷತಾ ಕರಾಮ). "ನಾವು ಸಾಮಾನ್ಯ ಜನ, ತಿಳಿಯದೆ ಏನೋ ತಪ್ಪು ಮಾಡಿರುತ್ತೇವೆ, ಅದರಿಂದ ಕೋಪಿಷ್ಠ ರಾಗಬೇಡಿ" ಎಂದು ದೇವತೆಗಳನ್ನು ಕೇಳಿಕೊಳ್ಳುವುದು ಋಗ್ವೇದದಲ್ಲಿ ಆಗಾಗ್ಗೆ ಬರುವ ವಿನಂತಿ. ವರುಣನಿಗಂತೂ ಈ ಬೇಡಿಕೆ ಸರ್ವೇಸಾಮಾನ್ಯವೆಂಬುದನ್ನು ಹಿಂದೆಯೇ ನಾವು ನೋಡಿದ್ದೇವೆ (ಯಚ್ಚಿದ್ಧಿ ತೇ ವಿಶೋ ಯಥಾ ಪ್ರ ದೇವ ವರುಣ ವ್ರತಂ ಮಿನೀಮಸಿ ದ್ಯವಿ ದ್ಯವಿ... ಮನುಷ್ಯಾಃ ಚರಾಮಸಿ). "ಪ್ರಾತಃಕಾಲವು ಶೋಭಿಸುತ್ತಿರುವಾಗ ಬಂದು ಆಸೀನರಾಗಿರುವ ನೀವು (ಪಿತೃಗಳು) ಹವಿಸ್ಸು ನೀಡುವವನಿಗೆ (ನನಗೆ) ಸಂಪತ್ತು ನೀಡಿ. ಪಿತೃಗಳೇ, ನಿಮ್ಮ ಮಗನಿಗೆ (ಅಂದರೆ, ನನಗೆ) ನಿಮ್ಮ ಸಂಪತ್ತಿನ ಒಂದು ಭಾಗವನ್ನು ಕರುಣಿಸಿ, ಮಕ್ಕಳಿಗೆ ಪೌರುಷವನ್ನು ನೀಡಿ" (೭ : ... ರಯಿಂ ಧತ್ತ ದಾಶುಷೇ ಮರ್ತ್ಯಾಯ... ವಸ್ವಃ ಪ್ರ ಯಚ್ಛತ ತೇ ಇಹ ಊರ್ಜಂ ದಧಾತ). ಸೋಮಪಾನ ಮಾಡಲು ಬಂದಿರುವ ಪಿತೃಗಳೊಡನೆ ಯಮನು ಸಹ ಹವಿಸ್ಸನ್ನು ಸಂತೋಷವಾಗಿ ಸ್ವೀಕರಿಸಲಿ (೮ : ... ತೇಭಿರ್ಯಮಃ ... ಹವೀಂಷಿ ಉಶನ್ ... ಪ್ರತಿಕಾಮಂ ಅತ್ತು). "ಅಗ್ನಿಯೇ, ಅಸಂಖ್ಯ ಪ್ರಾಚೀನ ಪಿತೃಗಳೊಡನೆ ಬಾ; ಅವರಾದರೋ ದೇವತ್ವವನ್ನು ಪಡೆದಿರುವವರು, ಇಂದ್ರನೊಡನೆ ಒಡನಾಟವಿರುವವರು" (೧೦ : ... ಅಗ್ನೇ ಯಾಹಿ ಸಹಸ್ರಂ ದೇವವಂದ್ಯೈಃ ಪರೈಃ ಪೂರ್ವೈಃ ಪಿತೃಭಿಃ ಘರ್ಮಸದ್ಭಿಃ). ಪಿತೃಗಳು ಅಗ್ನಿಯ ಜ್ವಾಲೆಯನ್ನು ಅನುಭವಿಸಿರುವವರು (ಅಂದರೆ, ಮರಣದ ನಂತರ ದಹಿಸಲ್ಪಟ್ಟವರು); ಅವರು ಬಂದು ತಮ್ಮ ಸ್ಥಾನಗಳಲ್ಲಿ ಕೂಡಬೇಕು, ನೀಡಲಾಗುವ ಹವಿಸ್ಸನ್ನು ಭಕ್ಷಿಸಬೇಕು, ವೀರರಾದ ಅನೇಕ ಮಕ್ಕಳನ್ನು ಮತ್ತು ಸಂಪತ್ತನ್ನು ಕರುಣಿಸಬೇಕು (೧೧ : ಅಗ್ನಿಷ್ವಾತ್ತಾಃ ಪಿತರಃ ಏಹ ಗಚ್ಛತ ಸದಃಸದಃ ಸದತ ಸುಪ್ರಣೀತಯಃ। ಅತ್ತಾ ಹವೀಂಷಿ ಪ್ರಯತಾನಿ ಬರ್ಹಿಷ್ಯಥಾ ರಯಿಂ ಸರ್ವವೀರಂ ದಧಾತನ॥). "ಓ ಜಾತವೇದಸ್ (ಅಗ್ನಿ), ಪಿತೃಗಳ ಪೈಕಿ ಯಾರು ಇಲ್ಲಿದ್ದಾರೆ ಮತ್ತು ಯಾರು ಇಲ್ಲ ಎಂಬುದು ನಿನಗೆ ತಿಳಿದಿದೆ; ಅವರುಗಳ ಪೈಕಿ ನಮಗೆ ಗೊತ್ತಿರುವವರು ಯಾರು ಮತ್ತು ಗೊತ್ತಿಲ್ಲದವರು ಯಾರೆಂಬುದೂ ನಿನಗೆ ತಿಳಿದಿದೆ. ದಯಮಾಡಿ ನಾವು ನೀಡುವ ಒಳ್ಳೆಯ ಹವಿಸ್ಸು ರೂಪದ ಅನ್ನವನ್ನು ಸ್ವೀಕರಿಸು" (೧೩ : ಯೇ ಚೇಹ ಪಿತರೋ ಯೇ ಚ ನೇಹ ಯಾಂಶ್ಚ ವಿದ್ಮ ಯಾನ್ ಉ ಚ ನ ಪ್ರವಿದ್ಮ। ತ್ವಂ ವೇತ್ಥ ಯತಿ ತೇ ಜಾತವೇದಃ ಸ್ವಧಾಭಿರ್ಯಜ್ಞಂ ಸುಕೃತಂ ಜುಷಸ್ವ॥). "ಯಾರು ಅಗ್ನಿಯಲ್ಲಿ ದಹಿಸಲ್ಪಟ್ಟರು, ಹಾಗೆ ಯಾರು ದಹಿಸಲ್ಪಡಲಿಲ್ಲ (ಅಂದರೆ, ಅಂಥವರ ಶವಗಳನ್ನು ಸುಡುವ ಬದಲು ಹೂಳಲಾಗಿದ್ದಿತು ಎಂದರ್ಥ), ಅವರೆಲ್ಲರೂ ದ್ಯುಲೋಕದಲ್ಲಿ ನಾವು ನೀಡಿದ ಹವಿಸ್ಸನ್ನು ಆನಂದದಿಂದ ಸ್ವೀಕರಿಸುತ್ತಿದ್ದಾರೆ; ಸಾರ್ವಭೌಮನಾದ ನೀನು (ದೇವತೆಯು) ನಿನಗೆ ಪ್ರಿಯವಾದಂತೆ ಅವರಿಗೆ ಅಲ್ಲಿ ಸಲ್ಲುವ ದೇಹವನ್ನು




ಅನುಗ್ರಹಿಸು (೧೪ : ಯೇ ಅಗ್ನಿದಗ್ಧಾ ಯೇ ಅನಗ್ನಿದಗ್ಧಾ ಮಧ್ಯೇ ದಿವಃ ಸ್ವಧಯಾ ಮಾದಯಂತೇ। ತೇಭಿಃ ಸ್ವರಾಟ್ ಅಸುನೀತಿಂ ಏತಾಂ ಯಥಾವಶಂ ತನ್ವಂ ಕಲ್ಪಯಸ್ವ॥). ಇಲ್ಲಿ 'ಅನಗ್ನಿದಗ್ಧಾಃ' ಎಂದರೆ ಹೂಳಲ್ಪಟ್ಟವರು ಮಾತ್ರವೇ ಅಲ್ಲ, ಎಲ್ಲೋ ಕಳೆದುಹೋಗಿ ಶವಸಂಸ್ಕಾರಕ್ಕೆ ಭಾಜನರಾಗದಿದ್ದವರೂ ಸೇರುತ್ತಾರೆ. ಸಾಮಾನ್ಯವಾಗಿ ಈ ಸೂಕ್ತದ ಎಲ್ಲ ಮಂತ್ರಗಳನ್ನೂ ಬ್ರಾಹ್ಮಣವರ್ಣದವರು ಶ್ರಾದ್ಧಕರ್ಮದಲ್ಲಿ ಬಳಸುತ್ತಾರೆ. ಅವರ ಪರವಾಗಿ ಪುರೋಹಿತರು ಅವನ್ನು ಪಠಿಸುತ್ತಾರೆ, (ಕೆಲವೇಳೆ ತಪ್ಪುತಪ್ಪಾಗಿ) ಎಂಬುದು ಹೆಚ್ಚು ಸತ್ಯ. ಬೇರೆ ವರ್ಣದವರು ಸಹ ಈ ಮಂತ್ರಗಳನ್ನು ಶ್ರಾದ್ಧಕರ್ಮದಲ್ಲಿ ಬಳಸುತ್ತಾರೋ ಇಲ್ಲವೋ ಎಂಬುದು ಪ್ರಸ್ತುತ ಲೇಖಕನಿಗೆ ತಿಳಿಯದು. ವಿಶೇಷತಃ ಕಡೆಯ ಎರಡು ಮಂತ್ರಗಳು ಪ್ರಧಾನವಾಗಿ ಶ್ರಾದ್ಧಕರ್ಮದಲ್ಲಿ ಬಳಕೆಗೆ ಬರುತ್ತವೆ.

ಈವರೆಗೆ ನಾವು ನೋಡಿದಂತೆ ಈ ಸೂಕ್ತದಲ್ಲಿ (೧೦.೧೫) ಅವಾಚ್ಯವಾದದ್ದೇನನ್ನೂ ಹೇಳಿಲ್ಲ, ಮನಸ್ಸಿಗೆ ಕಸಿವಿಸಿ ಅಥವಾ ಆಘಾತ ಉಂಟುಮಾಡುವಂಥದೇನನ್ನೂ ಹೇಳಿಲ್ಲ. ಮರಣಾನಂತರ ಏನಾಗುತ್ತದೆ, ಪ್ರಯಾಣ ಎಲ್ಲಿಗೆ, ಪಿತೃಗಳು ಸೇರಿಕೊಳ್ಳುವ ಹೊಸ ಪ್ರಪಂಚ ಎಂಥದು, ಅಲ್ಲಿ ಅವರಿಗೆ ಬೇರೊಂದು ದೇಹವನ್ನು ಕೊಡಲಾಗುತ್ತದೆಯೆ, ಅಲ್ಲಿ ಅವರಿಗೆ ಊಟೋಪಚಾರಗಳು ವ್ಯವಸ್ಥಿತವಾಗಿ ನಡೆಯುತ್ತದೆಯೆ, ಹೀಗೆ ಹತ್ತಾರು ಪ್ರಶ್ನೆಗಳನ್ನು ಪಿತೃಸೂಕ್ತವು ಎತ್ತಿದೆ. ಅಂದು ಅವರಿಗೆ ಅವಕ್ಕೆ ಉತ್ತರ ತಿಳಿದಿರಲಿಲ್ಲ, ಇಂದು ನಮಗೂ ತಿಳಿದಿಲ್ಲ. ಋಗ್ವೇದದ ಕವಿಯು ಈ ವಿಸ್ಮಯಕ್ಕೆ ಒಂದು ಉತ್ತರ ಊಹಿಸಿಕೊಂಡಿದ್ದಾನೆ: ಅದರಂತೆ, ಆ ಮೇಲಿನ ಪ್ರಪಂಚಕ್ಕೆ ಹಾದಿಯಿದೆ, ಅಲ್ಲಿ ಬೇರೆ ಪಿತೃಗಳೂ ಇರುತ್ತಾರೆ, ಅವರಿಗೆ ವಿಶಿಷ್ಟವಾದ ಶರೀರಗಳಿರುತ್ತವೆ, ಅಲ್ಲಿ ದೇವತೆಗಳೊಡನೆ ಅವರು ರಮಿಸುತ್ತಾರೆ. ಇದನ್ನೆಲ್ಲಾ ಅವರೇನೂ ಕಂಡುಬಂದಿಲ್ಲ, ಅವರೇ ಕೇಳಿಕೊಂಡಿರುವಂತೆ ದೇವತೆಗಳು ಇವನ್ನು ಕಲ್ಪಿಸಿಕೊಡಬೇಕು. ಮರಣಾನಂತರ ಏನಾಗುತ್ತದೆಂಬುದನ್ನು ನಿಷ್ಕೃಷ್ಟವಾಗಿ ತಿಳಿಯಲು ಸಾಧ್ಯವಿದ್ದರೆ, ಹಾಗೆ ತಿಳಿದ ನಂತರ ಋಗ್ವೇದದ ಕವಿಯ ಊಹಾ ಪ್ರಪಂಚವು ಕರಗಿಹೋದೀತು. ಅದಿನ್ನೂ ತಿಳಿಯದಿರುವುದರಿಂದ ನಾವು ಹೇಗೆ ಬೇಕಾದರೂ ಊಹಿಸಿಕೊಳ್ಳಲು ಸ್ವತಂತ್ರರು. ಬೇರೆ ಬೇರೆ ಮತಧರ್ಮಗಳಿಗೆ ಸೇರಿದವರು ತಮಗೆ ರುಚಿಸಿದಂತೆ ಬೇರೆ ಊಹೆಗಳನ್ನು ಕಟ್ಟಿಕೊಂಡು ಅವಕ್ಕೆ ಜೋತುಬಿದ್ದಿದ್ದಾರೆ. ಅಜ್ಞಾತ ವಿಷಯದ ಬಗ್ಗೆ ಯಾವ ಊಹೆಯಾದರೇನಂತೆ, ಎಲ್ಲವೂ ನಾವಿಷ್ಟಪಟ್ಟರೆ ಮಾನ್ಯ ಮತ್ತು ಇಷ್ಟಪಡದಿದ್ದರೆ ಅಮಾನ್ಯ.

ಮುಖ್ಯವಾಗಿ ನಾವು ಗುರುತಿಸಬೇಕಾದ್ದು ಋಗ್ವೇದದ ಕವಿಯ ಅಂದಿನ ಮನಃಸ್ಥಿತಿ ಮತ್ತು ಕಲ್ಪನೆಗಳನ್ನು. ಉತ್ತರೋತ್ತರ ಈ ಸೂಕ್ತದ ಮಂತ್ರಗಳು ಶ್ರಾದ್ಧಕರ್ಮದಲ್ಲಿ ಪ್ರಯೋಗಕ್ಕೆ ಬಂದಿದ್ದರಿಂದ, ಪಾಪ, ಈ ಅದ್ಭುತ ಊಹಾಸಾಮರ್ಥ್ಯಕ್ಕೆ ಸೂತಕ ಬಡಿದಿದೆ; ಆದ್ದರಿಂದ ಸೂಕ್ತವನ್ನು ಅಧ್ಯಯನ ಮಾಡಬಾರದು, ಯಾವಾಗೆಂದರೆ ಆವಾಗ ಮತ್ತು ಎಲ್ಲೆಂದರಲ್ಲಿ ಅದನ್ನು ಪಠಿಸಬಾರದು ಎಂಬ ನಿಷೇಧ ಹೇರಲಾಗಿದೆ. ಅದು ಕಟ್ಟಾ ಸಂಪ್ರದಾಯಸ್ಥರ ನಿಲುವು. ನಾವೀಗ ಆ ಸೂಕ್ತವನ್ನು ಪರಿಚಯಿಸಿಕೊಂಡಿದ್ದೇವೆ, ಅದರಲ್ಲಿ ಅಮಂಗಲವಾದದ್ದೇನೂ ಇಲ್ಲ. ಇರುವುದೆಲ್ಲಾ ಕವಿಯ ಸ್ತಂಭೀಭೂತ ಮನಸ್ಸು, ಕಲ್ಪನೆಗಳನ್ನು ಕಟ್ಟಿಕೊಳ್ಳುವ ಮನಸ್ಸು. ಋಗ್ವೇದ ಕಾಲದ ಜೀವನದ ಪ್ರಭೆಯನ್ನು ಗ್ರಹಿಸುವಂತೆ ಆ ಕಾಲದ ಅಂತ್ಯಸಂಸ್ಕಾರ ವಿಧಿಯನ್ನು ಸ್ವಲ್ಪ ಪರಿಚಯಿಸಿಕೊಂಡರೆ ಆಘಾತಕ್ಕೇನೂ ಆಸ್ಪದವಿಲ್ಲ. ಆದ್ದರಿಂದ ಇನ್ನುಳಿದ ಮೂರು ಸೂಕ್ತಗಳನ್ನು ಸಹ ಸ್ಥೂಲವಾಗಿ ಪರಿಚಯಿಸಿಕೊಳ್ಳೋಣ.


**ಜಿ. ರಾಮಕೃಷ್ಣ**

೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಕ್ಷ - ಕಿರಣ

- ಪ್ರಕಾಶ್ ಎಸ್.



ನಾನು ಪುರುಷನೇ ಅಲ್ಲ
ನನ್ನ ಮೇಲಿನ ಕೇಸ್ ವಜಾ ಮಾಡಿ
- ನಿತ್ಯಾನಂದ






## ಸ್ವಾತಂತ್ರ್ಯಾನಂತರದ ಭಾರತ - ೬

# ಪ್ರಧಾನಿಯ ಜನಪ್ರಿಯತೆ ಕುಸಿತ - ತುರ್ತುಪರಿಸ್ಥಿತಿಯ ಕಪ್ಪು ಚುಕ್ಕೆ



ಹದಿಮೂರು ದಿನಗಳ ಯುದ್ಧ ೧೯೭೧ ಡಿಸೆಂಬರ್ ೩ರಿಂದ ೧೬ರವರೆಗೆ. ೯೦,೦೦೦ ಪಾಕ್ ಸೈನಿಕರ ಶರಣಾಗತಿ, ಢಾಕಾದಲ್ಲಿ ಹೊಸ ಸರಕಾರದ ಸ್ಥಾಪನೆಯೊಂದಿಗೆ ಬಂಗ್ಲಾ ದೇಶದ ಉದಯ, ಭಾರತ ಸೇನೆಯಿಂದ ೯೦೦೦ ಚ. ಕಿ. ಮೀ. ಪಾಕಿಸ್ತಾನ ಪ್ರದೇಶದ ವಶ. ಇದು ಭಾರತ-ಪಾಕ್ ಯುದ್ಧದ ಫಲಶ್ರುತಿ. ಪ್ರಧಾನಿ ಇಂದಿರಾ ಗಾಂಧಿಯವರ ಜನಪ್ರಿಯತೆ ಮುಗಿಲು ಮುಟ್ಟಿತ್ತು. ಏಕಪಕ್ಷೀಯವಾಗಿ ಹಠಾತ್ತನೆ ಘೋಷಿಸಿದ ಯುದ್ಧಸ್ತಂಭನವು ಸೇನಾ ವಲಯದಲ್ಲಿ ಅಸಮಾಧಾನ ಉಂಟುಮಾಡಿತ್ತು. ಇಪ್ಪತ್ತನಾಲ್ಕು ಘಂಟೆಗಳ ಅವಕಾಶ ಇದ್ದಿದ್ದರೆ ಪಾಕ್ ಸೇನಾಶಕ್ತಿಯನ್ನು ಪುಡಿಗುಟ್ಟುವುದು ಸೇನೆಯ ಉದ್ದೇಶವಾಗಿತ್ತು. ಹಾಗಾಗಿದ್ದರೆ ಪಾಕ್ ಸೇನೆ ಮತ್ತೆ ತಲೆ ಎತ್ತಲು ದಶಕಗಳೇ ಬೇಕಾಗುತ್ತಿತ್ತು. ಇದು ಭಾರತೀಯ ಸೇನೆಯ ಲೆಕ್ಕಾಚಾರ. ಅಮೆರಿಕದ ಹಸ್ತಕ್ಷೇಪದ ಭೀತಿ ಇದ್ದು, ಯುದ್ಧ ಬೇರೇ ತಿರುವು ಪಡೆದುಕೊಳ್ಳುವ ಸಾಧ್ಯತೆ ಇದ್ದುದರಿಂದ ಯುದ್ಧಸ್ತಂಭನ ಘೋಷಣೆ ಅನಿವಾರ್ಯವಾಗಿತ್ತು. ಇಡೀ ಬೆಳವಣಿಗೆ ಯಲ್ಲಿ ಅಮೆರಿಕ ಪಾಕಿಸ್ತಾನದ ಪಕ್ಷ ವಹಿಸಿತ್ತು, ಹಾಗೂ ಆ ದೇಶ ಅಮೆರಿಕದ ನಿಕಟವರ್ತಿ. ಆಗಷ್ಟೇ ಅಮೆರಿಕ-ಚೀಣ ಸಂಬಂಧಗಳನ್ನು ಕುದುರಿಸಲು ಪಾಕಿಸ್ತಾನ ಮಧ್ಯಸ್ಥಿಕೆ ವಹಿಸಿತ್ತು. ಭಾರತ-ಪಾಕ್ ಮೂರನೇ ಯುದ್ಧ ಮುಕ್ತಾಯವಾದ್ದು ಹೀಗೆ. ಬಂಗ್ಲಾ ದೇಶದಿಂದ ಸ್ವಾತಂತ್ರ್ಯ ಸಮರದ ಕಾಲದಲ್ಲಿ ಬಂದಿದ್ದ ಹತ್ತು ಲಕ್ಷ ಮಂದಿ ನಿರಾಶ್ರಿತರು, ಶರಣಾಗಿದ್ದ ಪಾಕ್ ಸೈನಿಕರು ಭಾರತದ ಆರ್ಥಿಕಕ್ಕೆ ದೊಡ್ಡ ಹೊರೆಯಾಗಿದ್ದರು. ಪಾಕಿಸ್ತಾನ ದೊಂದಿಗೆ ಮಾತುಕತೆ ನಡೆಸುವುದು ಅಗತ್ಯವಾಗಿತ್ತು. ಪಾಕಿಸ್ತಾನದಲ್ಲಿ ಜುಲ್ಫಿಕರ್ ಆಲಿ ಭುಟ್ಟೋ ಪ್ರಧಾನಿಯಾದ ಮೇಲೆ ಜೂನ್ ೧೯೭೨ರಲ್ಲಿ ಸಿಮ್ಲಾದಲ್ಲಿ ಭಾರತ-ಪಾಕ್ ಶೃಂಗಸಭೆ ಜರುಗಿತ್ತು. ಈ ಒಪ್ಪಂದದಿಂದ ಭಾರತ ಕಳೆದುಕೊಳ್ಳುವುದೇ ಹೆಚ್ಚಾಗಿದ್ದುದರಿಂದ ಅದಕ್ಕೆ ಒಮ್ಮತ ಇರಲಿಲ್ಲ. ಸೇನಾವಲಯದಲ್ಲೂ ಈ ಬಗ್ಗೆ ಅತೃಪ್ತಿ ಇತ್ತು. ಆಕ್ರಮಿತ ಪ್ರದೇಶಗಳನ್ನು, ಪಾಕ್ ಸೈನಿಕರನ್ನು ಪಾಕ್‌ಗೆ ಬಿಟ್ಟುಕೊಡಬೇಕಾಗಿತ್ತು. ಪಾಕಿಸ್ತಾನದೊಂದಿಗೆ ಒಪ್ಪಂದ ಅಂದಿನ ಪರಿಸ್ಥಿತಿಯಲ್ಲಿ ಅಗತ್ಯವಾಗಿತ್ತು. ಈಗಲೂ ಮಾತುಕತೆಗಳಲ್ಲಿ ಸಿಮ್ಲಾ ಒಪ್ಪಂದದ ಪ್ರಸ್ತಾಪ ಬರುತ್ತದೆ. ಈ ಒಪ್ಪಂದ ಮೂರನೆಯವರು, ಮುಖ್ಯವಾಗಿ ಪಾಕ್ ಪಕ್ಷಪಾತಿ ಅಮೆರಿಕ ಮೂಗುತೂರಿಸುವುದನ್ನು ತಡೆಗಟ್ಟಿದೆ. ನೇರವಾದ ಸಂಧಾನಗಳಿಂದ ವಿವಾದಗಳನ್ನು ಬಗೆಹರಿಸಿಕೊಳ್ಳಲು ಎರಡೂ ದೇಶಗಳು ಈವರೆಗೆ ಬದ್ಧವಾಗಿವೆ. ಯುದ್ಧದ ಪರಿಣಾಮವಾಗಿ ಭಾರತದ ಸೇನೆಯಲ್ಲಿ ಮೊದಲ ಬಾರಿಗೆ ಫೀಲ್ಡ್ ಮಾರ್ಷಲ್ ಹುದ್ದೆ ನಿರ್ಮಾಣಗೊಂಡಿತು. ಈ ಗೌರವಕ್ಕೆ ಪಾತ್ರ ರಾದವರು ಅಂದಿನ ಜನರಲ್ ಆಗಿದ್ದ ಮಾಣಿಕ್ ಷಾ.

ಯುದ್ಧ ಮುಗಿದ ಮರು ವರ್ಷವೇ ಭಾರತ ಸ್ವಾತಂತ್ರ್ಯದ ರಜತ ಮಹೋತ್ಸವ. ಇಪ್ಪತ್ತೈದು ವರ್ಷಗಳು ಒಂದು ರಾಷ್ಟ್ರದ ಇತಿಹಾಸದಲ್ಲಿ ಬಹು ದೊಡ್ಡ ಕಾಲ ವೇನಲ್ಲ. ಆದರೂ ಈ ಅವಧಿಯಲ್ಲಿ ಭಾರತದ ಪ್ರಗತಿ ದೇಶದ ಜನತೆ ನಿರೀಕ್ಷಿಸಿದ್ದ ಪ್ರಮಾಣದಲ್ಲೇನಾಗಿರಲಿಲ್ಲ. ಭೂಸುಧಾರಣೆಗಳು ಸಮರ್ಪಕವಾಗಿ ಜಾರಿಯಾಗ ದಿದ್ದರಿಂದ ಬಡರೈತರ ಸ್ಥಿತಿ ಕಿಂಚಿತ್ತೂ ಸುಧಾರಿಸಲಿಲ್ಲ. ಸರಕಾರದ ಯೋಜನೆಗಳ ಫಲಾನುಭವಿಗಳು ಶ್ರೀಮಂತ ರೈತರು, ಜಮೀನುದಾರರು, ಬಂಡವಾಳಗಾರರಾಗಿದ್ದರು. ನಿರುದ್ಯೋಗ ಮತ್ತು ಬಡತನ ಜನಸಾಮಾನ್ಯರ ಪಾಲಾಗಿತ್ತು. ಬೃಹತ್ ಕೈಗಾರಿಕೆಗಳು ಹಾಗೂ ಸಣ್ಣ, ಮಧ್ಯಮ ಉದ್ಯಮಗಳಿಂದಾಗಿ ಹೊಸ ಮಧ್ಯಮ ವರ್ಗ ತಲೆ ಎತ್ತುತ್ತಿತ್ತು. ಉದ್ಯೋಗಾಕಾಂಕ್ಷಿಗಳಿಂದಾಗಿ ನಗರಗಳು ಬೆಳೆಯತೊಡಗಿದುವು. ನಗರೀಕರಣ ಬಿರುಸುಗೊಂಡದ್ದು ಎರಡು ದಶಕಗಳು ಕಳೆದ ಮೇಲೆ.

ದೇಶದ ಆರ್ಥಿಕ ಪರಿಸ್ಥಿತಿ ತೀರ ಹದಗೆಟ್ಟಿತ್ತು. ಅಗತ್ಯ ವಸ್ತುಗಳ ಕೊರತೆಯ ಜೊತೆಗೆ ಬೆಲೆ ದುಬಾರಿ. ಸತತವಾಗಿ ಎರಡು ವರ್ಷ ಸರಿಯಾಗಿ ಮಳೆಯಾಗದೆ ದೇಶದ ಹಲವು ಭಾಗಗಳಲ್ಲಿ ಅಭಾವ ಪರಿಸ್ಥಿತಿ ಉಂಟಾಗಿತ್ತು. ಸರಕಾರ ಕೈಗೊಂಡ ಕ್ರಮಗಳು ಅಸಮರ್ಪಕವಾಗಿದ್ದುವು. ಮಿಶ್ರ ಆರ್ಥಿಕ ವ್ಯವಸ್ಥೆಗೆ ಬದ್ಧರಾಗಿದ್ದ ಪ್ರಧಾನಿ ಇಂದಿರಾ ಗಾಂಧಿಯವರ ಜನಪ್ರಿಯತೆ ಕುಗ್ಗುತ್ತಿತ್ತು. ೧೯೭೨ರ ಆಗಸ್ಟ್ ತಿಂಗಳಲ್ಲಿ ಸಾಮಾನ್ಯ ವಿಮೆ ಕಂಪೆನಿಗಳನ್ನು ರಾಷ್ಟ್ರೀಕರಣ ಮಾಡಲಾಯಿತು. ಇದಕ್ಕೆ ಮೊದಲೇ ಜೀವವಿಮೆ ರಾಷ್ಟ್ರೀಕರಣಗೊಂಡಿತ್ತು. ದೇಶದಲ್ಲಿ ಇದರಿಂದಾಗಿ ಎಲ್ಲ ವಿಮಾ ವ್ಯವಹಾರಗಳೂ ಸರಕಾರದ ಆಧಿಪತ್ಯಕ್ಕೆ ಬಂದಿತು. ಉದಾರೀಕರಣ, ಜಾಗತೀಕರಣ, ಮುಕ್ತ ಮಾರುಕಟ್ಟೆ ನೀತಿ ಅನುಸರಿಸುವುದಕ್ಕೆ ಪ್ರಾರಂಭವಾದ ಮೇಲೆ ವಿಮಾ ಕ್ಷೇತ್ರದಲ್ಲಿ ಖಾಸಗಿ ಕಂಪೆನಿಗಳು ಹಾಗೂ ವಿದೇಶೀ ಕಂಪೆನಿಗಳು ಪ್ರವೇಶಿಸಿದುವು. ಈಗ ಸರಕಾರದ ಸ್ವಾಮ್ಯದಲ್ಲಿರುವ ಜೀವವಿಮಾ ಕ್ಷೇತ್ರದಲ್ಲೂ ಶೇ. ೪೯ರಷ್ಟು ವಿದೇಶೀ ಬಂಡವಾಳ ಪ್ರವೇಶಕ್ಕೆ

**ಸಿ. ಆರ್. ಕೃಷ್ಣರಾವ್**




ಫೀಲ್ಡ್ ಮಾರ್ಷಲ್ ಮಾಣಿಕ್ ಷಾ



ಅನುವು ಮಾಡಿಕೊಡಲು ಪ್ರಯತ್ನ ನಡೆದಿದೆ. ೧೯೬೯ರಲ್ಲೇ ಉದ್ಯಮ ಕ್ಷೇತ್ರದಲ್ಲಿ ಗುತ್ತೇದಾರಿ ವ್ಯವಸ್ಥೆ ಬೆಳವಣಿಗೆಯನ್ನು ತಡೆಯಲು ಕಾಯಿದೆಯನ್ನು ಅಂಗೀಕರಿಸಲಾಗಿತ್ತು. ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳ ಬೆಳವಣಿಗೆಗೆ ಉತ್ತೇಜನ ನೀಡುವುದು ಉದ್ದೇಶವಾಗಿತ್ತು. ಈ ಕಾಯಿದೆಯನ್ನು ಜಾರಿಗೆ ತರಲು ಆಯೋಗವೊಂದನ್ನು ರಚಿಸಲಾಯಿತು. ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಸರಕಾರ ಕೈಗೊಂಡ ಕ್ರಮಗಳೆಲ್ಲ ಅರೆ ಮನಸ್ಸಿನಿಂದ ಕೂಡಿದ್ದು ಇತ್ತ ಎಡವೂ ಅಲ್ಲ, ಅತ್ತ ಬಲವೂ ಅಲ್ಲ ಆಗಿದ್ದುದರಿಂದ ಪರಿಣಾಮ ನೆಟ್ಟಗಾಗಲಿಲ್ಲ. ಬಿಕ್ಕಟ್ಟು ಉಲ್ಬಣಿಸುತ್ತಾ ಹೋಯಿತು. ಲೋಕಸಭೆಯಲ್ಲೂ ಸಾಕಷ್ಟು ಬಹುಮತವಿದ್ದಾಗ್ಯೂ ದಿಟ್ಟವಾದ ಕ್ರಮ ಕೈಗೊಳ್ಳದ ಸರಕಾರದ ವೈಫಲ್ಯ ಎದ್ದುಕಾಣುತ್ತಿತ್ತು. ಆರ್ಥಿಕ ಹಿಂಜರಿತ, ಹೆಚ್ಚುತ್ತಿದ್ದ ನಿರುದ್ಯೋಗ, ತೀವ್ರವಾದ ಹಣದುಬ್ಬರ, ಆಹಾರಧಾನ್ಯಗಳ ಕೊರತೆ ಎಲ್ಲ ಸೇರಿ ಪರಿಸ್ಥಿತಿ ಹದಗೆಟ್ಟಿತ್ತು. ೧೯೭೨ ಮತ್ತು ೧೯೭೩ರಲ್ಲಿ ದೇಶದ ಬಹುತೇಕ ಕೈಗಾರಿಕಾ ಪ್ರದೇಶಗಳಲ್ಲಿ ಅಸ್ಥಿರತೆ ಇತ್ತು. ಬೆಲೆ ಏರಿಕೆ ವಿರೋಧಿಸಿ ಕಾರ್ಮಿಕರು ಮುಷ್ಕರ, ಹೋರಾಟದಲ್ಲಿ ನಿರತರಾಗಿದ್ದರು. ೧೯೭೪ರ ಮೇ ತಿಂಗಳಲ್ಲಿ ರೈಲ್ವೆ ಕೆಲಸಗಾರರು ಮುಷ್ಕರ ಹೂಡಿದರು. ಇಪ್ಪತ್ತೆರಡು ದಿನಗಳು ನಡೆದ ಈ ಮುಷ್ಕರ ಸರಕಾರದ ದಬ್ಬಾಳಿಕೆಯಿಂದಾಗಿ ವಿಫಲಗೊಂಡಿತು. ಸರಕಾರ ಹೆಚ್ಚು ಹೆಚ್ಚಾಗಿ ಕಾರ್ಮಿಕ ವಿರೋಧಿ ನೀತಿ ಅನುಸರಿಸತೊಡಗಿದ್ದರಿಂದ ಅದರ ಜನಪ್ರಿಯತೆ ಮತ್ತಷ್ಟು ಕುಸಿಯಿತು. ಭ್ರಷ್ಟಾಚಾರ ತಾಂಡವವಾಡತೊಡಗಿತು. ಕಪ್ಪು ಹಣದ ದಂಧೆ ವಿಪರೀತವಾಗಿ ಬೆಳೆಯಿತು. ಶ್ರೀಮತಿ ಇಂದಿರಾ ಗಾಂಧಿ ಕೈಗಾರಿಕೋದ್ಯಮಿಯಾಗಿ ಏನೂ ಅನುಭವವಿಲ್ಲದ ತಮ್ಮ ಮಗ ಸಂಜಯ ಗಾಂಧಿ ಸ್ಥಾಪಿಸಿದ ಮಾರುತಿ ಉದ್ಯೋಗ ಸಂಸ್ಥೆಗೆ ವರ್ಷಕ್ಕೆ ೫೦,೦೦೦ ಕಾರುಗಳನ್ನು ನಿರ್ಮಿಸಲು ಪರವಾನಗಿ ನೀಡಿದ್ದು ಸ್ವಾರ್ಥ ಹಾಗೂ ಸ್ವಜನ ಪಕ್ಷಪಾತದ ಪರಮಾವಧಿಯಾಗಿತ್ತು. ಕೈಗಾರಿಕಾವಲಯದಲ್ಲಿ ಇದು ಹುಬ್ಬೇರಿಸುವಂತೆ ಆಯಿತು. ನೆಹರೂ ಭ್ರಷ್ಟಾಚಾರವನ್ನು ಸಹಿಸಿಕೊಂಡರಾದರೆ, ಇಂದಿರಾ ಗಾಂಧಿ ಅದನ್ನು ಸಕ್ರಮಗೊಳಿಸಿ, ಬೆಳೆಸಿದರು ಎಂದು ಆ ದಿನಗಳಲ್ಲಿ ಹೇಳುವುದು ವಾಡಿಕೆಯಾಗಿತ್ತು. ಒಟ್ಟಿನಲ್ಲಿ ದೇಶದಲ್ಲಿ ಪರಿಸ್ಥಿತಿ ಗಂಭೀರವಾಗಿದ್ದು, ಕಾಂಗ್ರೆಸ್ ಮತ್ತು ಸರಕಾರಕ್ಕೆ ಜನ ಬೆಂಬಲ ಕುಸಿದಿತ್ತು.

ಇವೆಲ್ಲದರ ಮೇಲೆ ಉತ್ತರ ಪ್ರದೇಶ ಮತ್ತು ಬಿಹಾರ ರಾಜ್ಯಗಳಲ್ಲಿ ಕಾನೂನು ವ್ಯವಸ್ಥೆ ತೀವ್ರವಾಗಿ ಹದಗೆಟ್ಟಿತ್ತು. ೧೯೭೩ರಲ್ಲಿ ಉತ್ತರ ಪ್ರದೇಶದ ಸಶಸ್ತ್ರ ಪೊಲೀಸು ಪಡೆಯಲ್ಲಿ ಸಿಡಿದೆದ್ದ ಬಂಡಾಯ, ಅದನ್ನು ಅಡಗಿಸಲು ನಡೆದ ಸೇನಾ ಕಾರ್ಯಾಚರಣೆಯಲ್ಲಿ ಮೂವತ್ತೈದಕ್ಕೂ ಹೆಚ್ಚು ಮಂದಿ ಪೊಲೀಸರು ಮತ್ತು ಸೈನಿಕರ ಸಾವು ಈ ಪ್ರಾಂತದಲ್ಲಿ ಕಾಂಗ್ರೆಸ್ಸಿಗೆ ಮುಳುವಾಯಿತು. ಇದು ಸಂಭವಿಸಿದ್ದು ೧೯೭೩ರಲ್ಲಿ. ಮರುವರ್ಷದಲ್ಲಿ ವಿದ್ಯಾರ್ಥಿಗಳ ಚಳವಳಿ ಪ್ರಾರಂಭವಾಯಿತು. ಗುಂಪುಗಾರಿಕೆಯಿಂದ ಬಳಲುತ್ತಿದ್ದ ಕಾಂಗ್ರೆಸ್ ಸಂಘಟನೆಯಿಂದಾಗಿ ಉತ್ತರ ಪ್ರದೇಶ, ಬಿಹಾರ ಮತ್ತು ಗುಜರಾತ್ ಪ್ರಾಂತಗಳಲ್ಲಿ ಸರಕಾರದ ಆಡಳಿತೆ ಶಿಥಿಲಗೊಂಡಿತ್ತು. ಬಿಹಾರ ಪ್ರಾಂತದಲ್ಲಿ ಸಮಾಜವಾದಿ ನಾಯಕ ಜಯಪ್ರಕಾಶ ನಾರಾಯಣ್ ಸರಕಾರದ ಜನವಿರೋಧಿ ನೀತಿಯ ವಿರುದ್ಧ ಪ್ರಾರಂಭಿಸಿದ್ದ ಆಂದೋಳನ ಇತರ ಕಡೆಗಳಿಗೂ ಹಬ್ಬತೊಡಗಿತು. ಗುಜರಾತ್ ರಾಜ್ಯದಲ್ಲಿ ೧೯೭೪ರ ಜನವರಿಯಲ್ಲಿ ಬೆಲೆ ಏರಿಕೆ, ಅಗತ್ಯವಸ್ತುಗಳ ಕೊರತೆ, ನಿರುದ್ಯೋಗದ ವಿರುದ್ಧವಾಗಿ ಪ್ರತಿಪಕ್ಷಗಳು ಪ್ರಾರಂಭಿಸಿದ ಚಳವಳಿ ಪ್ರಾಂತಾದ್ಯಂತ ವೇಗವಾಗಿ ಹರಡಿತು. ಒಂದು ಬಗೆಯಲ್ಲಿ ಗುಜರಾತಿನಲ್ಲಿ ಅರಾಜಕತೆ ಉಂಟಾಗಿತ್ತು. ಜನಾಂದೋಳನವನ್ನು ಹತ್ತಿಕ್ಕಲು ಸರಕಾರ ದಬ್ಬಾಳಿಕೆ ನಡೆಸತೊಡಗಿತು. ಕಾನೂನು ವ್ಯವಸ್ಥೆ ಸಂಪೂರ್ಣವಾಗಿ ಮುರಿದುಬಿದ್ದಿತ್ತು. ಈ ಪರಿಸ್ಥಿತಿಯಲ್ಲಿ ಕೇಂದ್ರ ಸರಕಾರ ಮಧ್ಯ ಪ್ರವೇಶಿಸಿ ರಾಜ್ಯದಲ್ಲಿ ಶಾಸನಸಭೆಯನ್ನು ಅಮಾನತಿನಲ್ಲಿರಿಸಿ ಅಧ್ಯಕ್ಷರ ಆಳ್ವಿಕೆ ಹೇರಿತು. ಇದನ್ನು ವಿರೋಧಿಸಿ ೧೯೭೫ರ ಮಾರ್ಚ್ ತಿಂಗಳಲ್ಲಿ ಹಿರಿಯ ರಾಜಕಾರಣಿ ಮೊರಾರ್ಜಿ ದೇಸಾಯಿಯವರು ಆಮರಣಾಂತ ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದ್ದು ಪರಿಸ್ಥಿತಿಯನ್ನು ಮತ್ತಷ್ಟು ಉಲ್ಬಣಗೊಳಿಸಿತು. ಈ ಬೆಳವಣಿಗೆಗಳಿಂದ ಕಂಗೆಟ್ಟ ಪ್ರಧಾನಿ ಗುಜರಾತ್ ವಿಧಾನಸಭೆಯನ್ನು ವಿಸರ್ಜನೆ ಮಾಡಿ ಅದೇ ವರ್ಷ ಜೂನ್ ತಿಂಗಳಲ್ಲಿ ಚುನಾವಣೆ ನಡೆಸುವುದಾಗಿ ಪ್ರಕಟಿಸಿದರು. ಗುಜರಾತ್ ಹೋರಾಟದ ಯಶಸ್ಸಿನಿಂದ ಉತ್ತೇಜಿತಗೊಂಡು ಬಿಹಾರದಲ್ಲಿ ಚಳವಳಿ ಬಿರುಸುಗೊಂಡಿತು. ರಾಜ್ಯದಲ್ಲಿ ಅದಾಗಲೇ ನಡೆಯುತ್ತಿದ್ದ ವಿದ್ಯಾರ್ಥಿಗಳ ಮುಷ್ಕರದ ಜೊತೆಗೆ ವಿರೋಧ ಪಕ್ಷಗಳೂ ಸರಕಾರದ ವಿರುದ್ಧ ಹೋರಾಟ ಪ್ರಾರಂಭಿಸಿದುವು. ಇದಕ್ಕೆ ಜಯಪ್ರಕಾಶ ನಾರಾಯಣ್ ಅವರು ನೇತೃತ್ವ ವಹಿಸಿದ್ದರು. ಬಿಹಾರ ಸರಕಾರವನ್ನು ವಜಾ ಮಾಡಿ, ಶಾಸನಸಭೆಯನ್ನು ವಿಸರ್ಜಿಸಿ ಚುನಾವಣೆ ನಡೆಸಬೇಕೆನ್ನುವುದು ಬೇಡಿಕೆಯಾಗಿತ್ತು. ಕೇಂದ್ರ ಸರಕಾರ ಅದನ್ನು ತಿರಸ್ಕರಿಸಿತು ದೃಢವಾಗಿ. ಜಯಪ್ರಕಾಶ ನಾರಾಯಣ್ 'ಸಂಪೂರ್ಣ ಕ್ರಾಂತಿ'ಯ ಘೋಷಣೆ ಮಾಡಿದ್ದು ಆ ಸಂದರ್ಭದಲ್ಲಿಯೇ. ಆಡಳಿತ ವ್ಯವಸ್ಥೆಯಲ್ಲಿ ಬೇರೂರಿದ್ದ ಭ್ರಷ್ಟಾಚಾರದ ವಿರುದ್ಧವಾಗಿ ನಡೆದ ಈ ಹೋರಾಟವನ್ನು ಜಯಪ್ರಕಾಶ ನಾರಾಯಣ್ ಬಿಹಾರದಾಚೆಗೂ ವಿಸ್ತರಿಸಿದರು. ಉತ್ತರ ಭಾರತದಲ್ಲಿ, ಪ್ರಭಾವವನ್ನು ಬೆಳೆಸಿಕೊಳ್ಳುತ್ತಿದ್ದ ಜಾತೀಯವಾದಿ ಪಕ್ಷ ಜನ ಸಂಘ, ಸೋಷಲಿಸ್ಟ್ ಪಾರ್ಟಿ ಹಾಗೂ ಇತರರ ಬೆಂಬಲದಿಂದ ಅವರು ಮೊದಲು ಉತ್ತರ ಭಾರತದಲ್ಲಿ ನಂತರ ಇತರ ಕಡೆಗಳಲ್ಲೂ ಬದಲಾವಣೆಗಾಗಿ ಚಳವಳಿ ಹೂಡಿದರು. ದೇಶಾದ್ಯಂತ ಪ್ರವಾಸ ಮಾಡಿ ಜನಸಾಮಾನ್ಯರು ಹೋರಾಟಕ್ಕಿಳಿಯುವಂತೆ ಪ್ರೇರೇಪಿಸಿದರು. ಚುನಾವಣೆಗಳನ್ನು ಎದುರಿಸುವಂತೆ ಪ್ರಧಾನಿ ಇಂದಿರಾ ಗಾಂಧಿ ಜಯಪ್ರಕಾಶ ನಾರಾಯಣ್‌ಗೆ ಪಂಥಾಹ್ವಾನ ನೀಡಿದರು. ೧೯೭೬ರ ಫೆಬ್ರವರಿ–ಮಾರ್ಚ್ ತಿಂಗಳಲ್ಲಿ ಚುನಾವಣೆ ನಡೆಯಬೇಕಿತ್ತು. ಅಂತೂ 'ಜೆಪಿ ಚಳವಳಿ' ಎಂದೇ ಹೆಸರಾದ ಈ ಚಳವಳಿ ಕಾಂಗ್ರೆಸ್ ದುರಾಡಳಿತದಿಂದ ಬೇಸತ್ತ ಜನಸಾಮಾನ್ಯರಿಗೆ ತಮ್ಮ ಅತೃಪ್ತಿಯನ್ನು ಹೊರಗೆಡಹಲು ಅವಕಾಶ ಕಲ್ಪಿಸಿತು.

ಈ ಮಧ್ಯೆ ಪ್ರಧಾನಿ ಇಂದಿರಾ ಗಾಂಧಿಯವರ ವರ್ಚಸ್ಸಿಗೆ ಧಕ್ಕೆ ತರುವಂಥ ಇನ್ನೊಂದು ಘಟನೆ ಜರುಗಿತು. ಚುನಾವಣೆಯಲ್ಲಿ ಅಕ್ರಮ ಎಸಗಿದ ಆಪಾದನೆಯ ಮೇಲೆ ಅಲಹಾಬಾದ್ ಹೈಕೋರ್ಟು ಇಂದಿರಾ ಗಾಂಧಿಯವರ ಚುನಾವಣೆಯನ್ನು ರದ್ದುಗೊಳಿಸಿತು. ಸಮಾಜವಾದಿ ಪಕ್ಷದ ನಾಯಕ ರಾಜನಾರಾಯಣ್, ಇಂದಿರಾ ಗಾಂಧಿ ವಿರುದ್ಧ ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ಚುನಾವಣೆಯಲ್ಲಿ ಕಾಂಗ್ರೆಸ್ ನಾಯಕಿ ಭ್ರಷ್ಟಾಚಾರ ಎಸಗಿದ್ದಾರೆಂದು ಆಪಾದನೆ ಮಾಡಿ ಅಲಹಾಬಾದ್ ಹೈಕೋರ್ಟಿನಲ್ಲಿ ಅರ್ಜಿ ಸಲ್ಲಿಸಿದ್ದರು. ೧೯೭೫ರ ಜೂನ್ ೧೨ರಂದು ತೀರ್ಪು ಪ್ರಕಟಿಸಿದ ನ್ಯಾಯಾಧೀಶರು ಆರೋಪವನ್ನು ಎತ್ತಿಹಿಡಿದು ಚುನಾವಣೆಯನ್ನು ರದ್ದುಗೊಳಿಸಿ, ಆರು ವರ್ಷಗಳು ಚುನಾವಣೆಗಳಲ್ಲಿ ಸ್ಪರ್ಧಿಸದಂತೆ ನಿಷೇಧಿಸಿದ್ದಲ್ಲದೆ, ಪ್ರಧಾನಿಯಾಗಿ ಮುಂದುವರಿಯುವಂತಿಲ್ಲ ಎಂದು ಘೋಷಿಸಿದರು.


ಜಯಪ್ರಕಾಶ ನಾರಾಯಣ್

ಶ್ರೀಮತಿ ಇಂದಿರಾ ಗಾಂಧಿ ಪ್ರಧಾನಿ ಸ್ಥಾನಕ್ಕೆ ರಾಜೀನಾಮೆ ನೀಡಲು ನಿರಾಕರಿಸಿ, ಸುಪ್ರೀಮ್ ಕೋರ್ಟಿನ ಮೊರೆಹೊಕ್ಕರು. ಜೂನ್ ೨೪ರಂದು ತೀರ್ಪು

ಪ್ರಕಟಿಸಿದ ಸುಪ್ರೀಮ್ ಕೋರ್ಟಿನ ನ್ಯಾಯಮೂರ್ತಿಗಳು ಮತ್ತಷ್ಟು ಗೊಂದಲ ಉಂಟುಮಾಡಿದರು. ಜುಲೈ ೧೪ರಂದು ನ್ಯಾಯಪೀಠ ಮೇಲ್ಮನವಿ ಅರ್ಜಿಯನ್ನು ಕುರಿತು ಅಂತಿಮವಾಗಿ ವಿಚಾರಣೆ ನಡೆಸುವುದು, ಅದು ತನ್ನ ತೀರ್ಪು ನೀಡುವವರೆಗೆ ಪ್ರಧಾನಿಯಾಗಿ ಶ್ರೀಮತಿ ಗಾಂಧಿ ಮುಂದುವರಿಯಲು ಅಡ್ಡಿಯಿಲ್ಲ, ಆಕೆ ಪಾರ್ಲಿಮೆಂಟ್ ಚರ್ಚೆಯಲ್ಲಿ ಭಾಗವಹಿಸಬಹುದು ಆದರೆ ಮತ ನೀಡುವಂತಿಲ್ಲ ಎಂಬುದು ಆ ತೀರ್ಪಿನ ಸಾರಾಂಶ. ಅಡ್ಡಗೋಡೆಯ ಮೇಲೆ ದೀಪ ಇಟ್ಟಂಥ ಈ ಮಧ್ಯಂತರ ತೀರ್ಪಿನಿಂದ ಪ್ರಧಾನಿಯ ರಾಜೀನಾಮೆಗೆ ಒತ್ತಾಯ ಮತ್ತಷ್ಟು ಅಧಿಕಗೊಂಡಿತು. ಜೂನ್ ತಿಂಗಳು ಪ್ರಾಯಶಃ ಶ್ರೀಮತಿ ಗಾಂಧಿಯವರ ರಾಜಕೀಯ ಜೀವನದಲ್ಲಿ ಅತ್ಯಂತ ಕರಾಳವಾದ್ದು ಎಂದು ತೋರುತ್ತದೆ. ಜೂನ್ ೧೨ರಂದು ಗುಜರಾತ್ ವಿಧಾನಸಭೆಗೆ ನಡೆದ ಚುನಾವಣೆ ಫಲಿತಾಂಶ ಪ್ರಕಟಗೊಂಡು ಕಾಂಗ್ರೆಸ್ಸಿಗೆ ಆಘಾತವನ್ನುಂಟುಮಾಡಿತು. ಜನಸಂಘದೊಂದಿಗೆ ಕೈಜೋಡಿಸಿ ಸಂಸ್ಥಾ ಕಾಂಗ್ರೆಸ್ ಮತ್ತು ಇತರ ಪ್ರತಿಪಕ್ಷಗಳು ಸ್ಥಾಪಿಸಿಕೊಂಡಿದ್ದ ಜನತಾರಂಗ ಸದನದ ೧೮೨ ಸ್ಥಾನಗಳ ಪೈಕಿ ೮೭ ಸ್ಥಾನಗಳನ್ನು ಪಡೆದು ಅಧಿಕಾರಕ್ಕೇರಿದರೆ ಕಾಂಗ್ರೆಸ್ ೭೫ ಸ್ಥಾನಗಳಲ್ಲಿ ಮಾತ್ರ ಜಯ ಗಳಿಸಿತ್ತು. ಈ ಪ್ರಾಂತದಲ್ಲಿ ಕಾಂಗ್ರೆಸ್‌ಗೆ ಮತ್ತೆ ಈವರೆಗೆ ಅಧಿಕಾರ ಪಡೆದುಕೊಳ್ಳಲಾಗಿಲ್ಲ. ಮುಂದೆ ಈ ಜನತಾ ಪ್ರಯೋಗ ದೆಹಲಿ ಅಧಿಕಾರ ಗ್ರಹಣ ಮಾಡಿದ್ದು ಬೇರೆ ವಿಷಯ. ಈ ಎಲ್ಲ ಹಿನ್ನಡೆಗಳಿಂದಾಗಿ ಇಂದಿರಾ ಗಾಂಧಿ ರಾಜೀನಾಮೆಗೆ ದೇಶಾದ್ಯಂತ ಒತ್ತಾಯ ಪ್ರಬಲಗೊಂಡಿತು. ಪ್ರತಿಪಕ್ಷಗಳು ಜಯಪ್ರಕಾಶ ನಾರಾಯಣ್ ನೇತೃತ್ವದಲ್ಲಿ ದೇಶದಲ್ಲಿ ಅಸಹಕಾರ ಚಳವಳಿಯನ್ನು ನಡೆಸುವುದಾಗಿ ಪ್ರಕಟಿಸಿದುವು. ಜೂನ್ ೨೯ರಿಂದ ಚಳವಳಿ ಪ್ರಾರಂಭಿಸಲು ನಿರ್ಧರಿಸಿ ಜೂನ್ ೨೫ರಂದು ದೆಹಲಿಯಲ್ಲಿ ನಡೆದ ಬೃಹತ್ ಸಭೆಯಲ್ಲಿ ಈ ತೀರ್ಮಾನವನ್ನು ಪ್ರಕಟಿಸಲಾಯಿತು. ಪ್ರತಿಪಕ್ಷಗಳು ಸುಪ್ರೀಮ್ ಕೋರ್ಟಿನ ತೀರ್ಪಿಗಾಗಿ ಮುಂಬರಲಿದ್ದ ಚುನಾವಣೆಗಳಿಗಾಗಿ ಕಾಯಲು ಸಿದ್ಧವಿರಲಿಲ್ಲ.

ಪಾರ್ಲಿಮೆಂಟಿನಲ್ಲಿ ಮೂರನೇ ಎರಡರಷ್ಟು ಬಹುಮತ ಪಡೆದುಕೊಂಡಿದ್ದಾಗ್ಯೂ ಕಾಂಗ್ರೆಸ್ಸಿಗೆ ಆಯ್ಕೆ


ಸಂಜಯ್ ಗಾಂಧಿ

ಇದ್ದುದು ಬಹಳ ಕಡಿಮೆ. ಇಂದಿರಾ ಗಾಂಧಿ ಪ್ರಧಾನಿ ಪಟ್ಟಕ್ಕೆ ರಾಜೀನಾಮೆ ನೀಡಿ, ಬೇರೆ ಯಾರಾದರೂ ನಿಷ್ಠಾವಂತರಿಗೆ ಅಧಿಕಾರ ವಹಿಸಿಕೊಡಬಹುದಾಗಿತ್ತು. ತೀರ್ಪು ಪ್ರಕಟಗೊಂಡ ಮೇಲೆ ಮತ್ತೆ ಅಧಿಕಾರ ವಹಿಸಿಕೊಳ್ಳಬಹುದಾಗಿತ್ತು. ರಾಜಕೀಯ ಬೆಳವಣಿಗೆಗಳಿಂದ ಕಂಗೆಟ್ಟಿದ್ದ ಶ್ರೀಮತಿ ಗಾಂಧಿ ಪ್ರಜಾಪ್ರಭುತ್ವ ಮಾರ್ಗ ಅನುಸರಿಸುವುದಕ್ಕೆ ಪ್ರತಿಯಾಗಿ ೧೯೭೫ರ ಜೂನ್ ೨೬ರಂದು ತುರ್ತು ಪರಿಸ್ಥಿತಿ ಘೋಷಿಸಿದರು. ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಜಯಪ್ರಕಾಶ ನಾರಾಯಣ್‌ರವರನ್ನೂ ಒಳಗೊಂಡಂತೆ ಪ್ರತಿಪಕ್ಷಗಳ ಎಲ್ಲ ನಾಯಕರುಗಳನ್ನು ಆಂತರಿಕ ಭದ್ರತೆಯ ಕಾಯಿದೆ ಅಡಿಯಲ್ಲಿ ಬಂಧನಕ್ಕೆ ಒಳಪಡಿಸಲಾಯಿತು. ಸಂವಿಧಾನದತ್ತವಾದ ಎಲ್ಲ ಮೂಲಭೂತ ಹಕ್ಕುಗಳನ್ನು ಸರಕಾರ ಕಸಿದುಕೊಂಡಿತು. ಪತ್ರಿಕೆಗಳನ್ನು ಸೆನ್ಸಾರ್‌ಗೆ ಗುರಿಪಡಿಸಲಾಯಿತು. ಈ ನಿರ್ಬಂಧಗಳನ್ನು ವಿರೋಧಿಸಿದ ಪತ್ರಿಕೆಗಳು ಪ್ರತಿಭಟನಾರ್ಥವಾಗಿ ಸಂಪಾದಕೀಯ ಅಂಕಣವನ್ನು ಖಾಲಿಬಿಟ್ಟು ಪ್ರಕಟಿಸಿದುವು. ದೇಶಾದ್ಯಂತ ಸಹಸ್ರಾರು ಮಂದಿ ಬಂಧನಕ್ಕೊಳಗಾದರು. ಪ್ರತಿಪಕ್ಷಗಳ ಪೈಕಿ ಭಾರತ ಕಮ್ಯುನಿಸ್ಟ್ ಪಾರ್ಟಿ ಮತ್ತು ಕೆಲ ಪ್ರಾದೇಶಿಕ ಪಕ್ಷಗಳು ಪ್ರಾರಂಭದಲ್ಲಿ ತುರ್ತುಪರಿಸ್ಥಿತಿಗೆ ಬೆಂಬಲ ನೀಡಿದ್ದುವು. ಸರ್ವಾಧಿಕಾರಿ ಧೋರಣೆ ಹೆಚ್ಚಾದಂತೆ ಈ ಪಕ್ಷಗಳೂ ವಿರೋಧ ವ್ಯಕ್ತಪಡಿಸಿದುವು. ಕಾಂಗ್ರೆಸ್ ಪಕ್ಷ ಏಕಾಂಗಿಯಾಯಿತು. ತುರ್ತುಪರಿಸ್ಥಿತಿ ಘೋಷಿಸಿದ ನಂತರ ಆಡಳಿತ ಪ್ರಾರಂಭದಲ್ಲಿ ಚುರುಕುಗೊಂಡಿತು. ಪ್ರಧಾನಿಯವರು ಜುಲೈ ೧ರಂದು ಇಪ್ಪತ್ತು ಅಂಶಗಳ ಕಾರ್ಯಕ್ರಮವನ್ನು ಪ್ರಕಟಿಸಿದರು. ಸಾಮಾಜಿಕ, ಆರ್ಥಿಕ ಉನ್ನತಿಗಾಗಿ ಪ್ರಕಟಿಸಿದ ಈ ಜನಪರ ಕ್ರಮಗಳು ಸಮಾಜದ ಕೆಳಸ್ತರದ ಜನರ ಉದ್ಧಾರವನ್ನು ಗಮನದಲ್ಲಿರಿಸಿಕೊಂಡಿದ್ದುವು. ಮಧ್ಯಮ ವರ್ಗದ ಜನರನ್ನು ಒಲಿಸಿಕೊಳ್ಳಲು ಆದಾಯ ತೆರಿಗೆ ಕನಿಷ್ಠ ಮೊತ್ತವನ್ನು ಹೆಚ್ಚಿಸಿತು. ಸಣ್ಣ ಹಿಡುವಳಿದಾರರು ಮತ್ತು ಕೃಷಿಕರ ಸಾಲವನ್ನು ಮನ್ನಾ ಮಾಡಲಾಯಿತು. ಭೂಸುಧಾರಣೆಗಳನ್ನೂ ಜಾರಿಗೊಳಿಸಲು ಕ್ರಮ ಪ್ರಕಟಿಸಲಾಯಿತು. ಪ್ರಾರಂಭದಲ್ಲಿ ಪ್ರಧಾನಿಯ ಇಪ್ಪತ್ತು ಅಂಶಗಳ ಕಾರ್ಯಕ್ರಮವನ್ನು ಜಾರಿಗೆ ತರಲು ಕ್ರಮ ಕೈಗೊಳ್ಳಲಾಯಿತಾದರೂ ಕ್ರಮೇಣ ಅದರ ಬಹ್ವಂಶ ಕಾಗದದ ಮೇಲೇ ಉಳಿಯಿತು. ತುರ್ತು ಪರಿಸ್ಥಿತಿ ದಿನ ಕಳೆದಂತೆ ಆಡಳಿತ ಯಂತ್ರವು ಯಥಾಸ್ಥಿತಿಗೆ ಬಂದಿತು. ಜನಸಾಮಾನ್ಯರಲ್ಲಿ ಅತೃಪ್ತಿ ಅಧಿಕಗೊಳ್ಳುತ್ತಿತ್ತು. ತುರ್ತು ಪರಿಸ್ಥಿತಿ ಕಾಲದಲ್ಲಿ ಇಂದಿರಾ ಗಾಂಧಿ ಪುತ್ರ ಸಂಜಯ ಗಾಂಧಿ ಒಂದು ಪ್ರಬಲಶಕ್ತಿಕೇಂದ್ರವಾಗಿ ಬೆಳೆದ. ತನ್ನದೇ ಆದ ನಾಲ್ಕು ಅಂಶಗಳ ಕಾರ್ಯಕ್ರಮ ಪ್ರಕಟಿಸಿದ. ಅದು ಕುಟುಂಬ ಯೋಜನೆ, ಪರಿಸರ ರಕ್ಷಣೆ, ವರದಕ್ಷಿಣೆ ವಿರೋಧ ಹಾಗೂ ಸಾಕ್ಷರತೆಗೆ ಒತ್ತು ನೀಡಿತು. ಬಲಾತ್ಕಾರದ ಕುಟುಂಬ ಯೋಜನೆ, ಹೆಚ್ಚು ಹೆಚ್ಚು ವಿರೋಧವನ್ನು ತಂದಿತು. ಯಾವ ಅಧಿಕಾರ ಸ್ಥಾನದಲ್ಲೂ ಇಲ್ಲದ ಸಂಜಯ ಗಾಂಧಿಯ ವರ್ತನೆ ವಿಪರೀತ ಮಟ್ಟಕ್ಕೆ ಹೋಗಿತ್ತು. ಜನಸಾಮಾನ್ಯರಲ್ಲಿ ಅತೃಪ್ತಿ ಹೊಗೆಯಾಡುತ್ತಿತ್ತು. ದಬ್ಬಾಳಿಕೆ, ಭ್ರಷ್ಟಾಚಾರ, ಅಧಿಕಾರದ ದುರುಪಯೋಗ ಪ್ರಧಾನಿ ಇಂದಿರಾ ಗಾಂಧಿಯ ಜನಪ್ರಿಯತೆ ಮತ್ತಷ್ಟು ಕುಸಿಯುವಂತೆ ಮಾಡಿತು. ಸ್ವತಂತ್ರ ಭಾರತದ ಪ್ರಜಾಪ್ರಭುತ್ವ ಇತಿಹಾಸದಲ್ಲಿ ತುರ್ತು ಪರಿಸ್ಥಿತಿಯ ಇಪ್ಪತ್ತು ತಿಂಗಳೂ ಒಂದೊಂದು ಕಪ್ಪು ಚುಕ್ಕೆ. ೧೯೭೬ರಲ್ಲಿ ನಡೆಯಬೇಕಾಗಿದ್ದ ಚುನಾವಣೆಯನ್ನು ಮುಂದೂಡಲಾಗಿತ್ತು. ಅನಿಶ್ಚಿತತೆ ಆವರಿಸಿದ್ದಾಗ ಹಠಾತ್ತನೆ ಶ್ರೀಮತಿ ಇಂದಿರಾ ಗಾಂಧಿ ೧೯೭೭ರ ಜನವರಿ ೧೮ರಂದು ಮಾರ್ಚ್ ತಿಂಗಳಲ್ಲಿ ಚುನಾವಣೆ ನಡೆಸುವುದಾಗಿ ಪ್ರಕಟಿಸಿದರು. ಬಂಧನದಲ್ಲಿದ್ದ ಎಲ್ಲ ರಾಜಕೀಯ ವ್ಯಕ್ತಿಗಳನ್ನು ಬಿಡುಗಡೆ ಮಾಡಲಾಯಿತು. ಪತ್ರಿಕೆಗಳ ಮೇಲೆ ವಿಧಿಸಲಾಗಿದ್ದ ಸೆನ್ಸಾರ್ ಕ್ರಮವನ್ನು ರದ್ದುಗೊಳಿಸಲಾಯಿತು. ಮುಕ್ತ ಚುನಾವಣೆಗಳಿಗೆ ಅವಕಾಶ ಕಲ್ಪಿಸಲು ರಾಜಕೀಯ ಚಟುವಟಿಕೆಗಳ ಮೇಲೆ, ಸಭೆ ಪ್ರದರ್ಶನಗಳ ಮೇಲೆ ವಿಧಿಸಲಾಗಿದ್ದ ಎಲ್ಲ ನಿರ್ಬಂಧಗಳನ್ನು ತೆಗೆದುಹಾಕಲಾಯಿತು. ಅಂತೂ ತುರ್ತುಪರಿಸ್ಥಿತಿ ಅಂತ್ಯಗೊಂಡಿತು.



*(ಮುಂದುವರಿಯುವುದು)*

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೯, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫







## ಒಡಲ ಹಂಗು

**(ಕಥಾ ಸಂಕಲನ)**

*ಡಾ॥ ಅಮರೇಶ ನುಗಡೋಣಿ*

**ಪುಟ : ೨೧೬**

**ಬೆಲೆ : ರೂ. ೧೫೦**

**ಅಂಕಿತ ಪುಸ್ತಕ**

ಬೆಂಗಳೂರು

*'ಒಡಲ ಹಂಗು' ಡಾ॥ ಅಮರೇಶ ನುಗಡೋಣಿಯವರ ನಾಲ್ಕನೆಯ ಕಥಾ ಸಂಕಲನ. ಇಪ್ಪತ್ತೈದು ವರ್ಷಗಳಿಂದ ನಿರಂತರವಾಗಿ ಕಥಾ ರಚನೆಯಲ್ಲಿ ತೊಡಗಿಸಿಕೊಂಡಿರುವ ಅಪರೂಪದ ಕಥೆಗಾರ. ತಮ್ಮ ಕಥೆಗಳಲ್ಲಿ ಪ್ರಾದೇಶಿಕ ವಿಶಿಷ್ಟತೆಯನ್ನು, ಅನೂಹ್ಯ ಕಥಾ ವಸ್ತುಗಳನ್ನು ವಿಶಿಷ್ಟ ಭಾಷೆಯನ್ನು ಒಳಗೊಳಿಸುತ್ತಲೇ ಕಥಾ ರಚನೆಯಲ್ಲಿ ತೊಡಗಿ, ತಮ್ಮದೇ ಕಥನ ಕ್ರಮವನ್ನು ರೂಪಿಸಿದ ಕಥೆಗಾರ, ಡಾ॥ ಅಮರೇಶರು. 'ಒಡಲ ಹಂಗು' ಸಂಕಲನದಲ್ಲಿನ ಕಥೆಗಳು ಮನುಷ್ಯರ, ಸಮುದಾಯಗಳ ಆಳದ ದುರಂತವನ್ನು ವಿಷಾದದೊಂದಿಗೆ ಪ್ರಕಟಿಸುತ್ತವೆ. ಆಧುನಿಕ ಸಂದರ್ಭದಲ್ಲೂ ತಮ್ಮ ಕಥೆಗಳಲ್ಲಿ ಅನುಭಾವದ–ಅಧ್ಯಾತ್ಮದ ಶೋಧವನ್ನು ನಡೆಸಿರುವ ಡಾ॥ ಅಮರೇಶರು ಜ್ವಲಂತ ಸಮಸ್ಯೆಗಳನ್ನು ಕಥೆಗಳಲ್ಲಿ ಹೆಣೆಯುತ್ತ ರಾಜಕೀಯ, ಸಾಮಾಜಿಕ ಆಯಾಮಗಳಲ್ಲಿ ಅವುಗಳನ್ನು ಒರೆಗೆ ಹಚ್ಚಿರುವ ಏಳು ಕಥೆಗಳು ಈ ಸಂಕಲನದಲ್ಲಿವೆ. ಹೆಚ್ಚು ವಿವರಗಳನ್ನು ಬಳಸಿ ಕಥೆ ರಚಿಸುವ ಡಾ॥ ಅಮರೇಶರು ಕಥಾ ಸಂದರ್ಭದ ಸಾಂಸ್ಕೃತಿಕ ಹಾಗೂ ಸಾಮಾಜಿಕ ಒಳಸುಳಿಗಳನ್ನು, ವ್ಯಕ್ತಿ ಮತ್ತು ಸಾಮಾಜಿಕ ಸಂಬಂಧಗಳ ಅಂತರ್‌ಕ್ರಿಯೆಯನ್ನು ತಮ್ಮದೇ ಆದ ಭಾಷೆ ಹಾಗೂ ಶೈಲಿಗಳ ಮೂಲಕ ಪರಿಣಾಮಕಾರಿಯಾಗಿ ಕಟ್ಟಿಕೊಟ್ಟಿದ್ದಾರೆ.*

– ***ಕಲ್ಲೇಶ್ ಕುಂಬಾರ್,*** *ಬೆಳಗಾವಿ*

## ಮನಸುಗಳ ನಡುವೆ ಪುಷ್ಪಕ ವಿಮಾನ (ಜನಪ್ರಿಯ ವಿಜ್ಞಾನ) *ರೋಹಿತ್ ಚಕ್ರತೀರ್ಥ*

**ಪುಟ : ೯೬** **ಬೆಲೆ : ರೂ. ೬೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ನಾವು ಮನುಷ್ಯರು. ನಮ್ಮನ್ನು ನಾವೇ ಶ್ರೇಷ್ಠರು, ಬುದ್ಧಿವಂತರು ಎಂದೆಲ್ಲ ತಿಳಿದುಕೊಂಡು ಬೀಗುತ್ತಿದ್ದೇವೆ. ಅಗಣಿತ ಜ್ಯೋತಿರ್ವರ್ಷಗಳಷ್ಟು ವಿಸ್ತಾರವಾಗಿ ಹರಡಿರುವ ಖ–ಗೋಲದ ವ್ಯಾಪ್ತಿಯಲ್ಲಿ ನಾವೊಂದು ಚುಕ್ಕೆ ಮಾತ್ರ ಎಂಬುದು ನಮ್ಮರಿವಿಗೆ ಬಂದಿಲ್ಲವೇ ? ಬಂದಿದೆ. ಆದರೂ ವಿಜ್ಞಾನದ ಸಾಧನೆಗಳ ಮೂಲಕ ಎಲ್ಲವನ್ನೂ ಅಂಗೈನೆಲ್ಲಿಯಾಗಿ ಆಡಿಸುತ್ತ ಇತರ ಜೀವಜಂತುಗಳನ್ನು ಕಡೆಗಣಿಸುತ್ತಿದ್ದೇವೆ. ಪ್ರಕೃತಿಯನ್ನು ಆರಾಧಿಸುವ ನಮ್ಮ ಪೂರ್ವಿಕರ ಪರಂಪರೆ ಮಾಯವಾಗಿ ಅದನ್ನು ದೋಚುವತ್ತ ದಾಪುಗಾಲಿಟ್ಟು ಸಾಗಿದ್ದೇವೆ. ನಮ್ಮ ಸುಖಕ್ಕಾಗಿ ಈ ಭೂಮಿಯನ್ನೇ ಆಪೋಶನ ತೆಗೆದುಕೊಂಡದ್ದೂ ಅಲ್ಲದೆ ಮುಂದೆ ಬಾಹ್ಯಾಂತರಿಕ್ಷದಲ್ಲಿ ಇನ್ನೂ ಏನೇನು ಇದೆಯೆಂದು ಆಕಾಶಗಾಮಿಯಾಗಿ ಸಂಚರಿಸುತ್ತಿದ್ದೇವೆ. ಅನ್ಯಗ್ರಹಗಳಲ್ಲಿ ನೀರಿನ ಹನಿ ಕಂಡರೆ ರೋಮಾಂಚನಗೊಳ್ಳುವ ಮನುಷ್ಯ ನಮ್ಮ ಭೂಗ್ರಹದ ನೀರಿನ ಸೆಲೆಗಳನ್ನೇ ಬತ್ತುವಂತೆ ಮಾಡಿದ್ದು ಎಂಥ ವಿಪರ್ಯಾಸ ! ಮಾನವನ ಕಲ್ಯಾಣಕ್ಕಾಗಿ ಇತರ ಪ್ರಾಣಿಗಳನ್ನು ಬಲಿಪಶು ಮಾಡುವಲ್ಲಿ ಆತ ಹಿಂಜರಿಯಲಿಲ್ಲ – ಹೀಗೆ ಸಾಗುತ್ತದೆ ವಿಜ್ಞಾನ ಬರಹಗಾರ ರೋಹಿತ್ ಚಕ್ರತೀರ್ಥ ಅವರ ಯೋಚನಾಲಹರಿ ಮತ್ತು ಬರವಣಿಗೆಯ ವೈಖರಿ. ಹೌದು, ರೋಹಿತ್ ಅವರ ಬರಹಗಳನ್ನು ಓದುತ್ತಿದ್ದಂತೆ ಮನುಷ್ಯನ ಸಾಧನೆ ಎಂಥ ಅದ್ಭುತ ಎಂಬ ಉದ್ಗಾರದೊಂದಿಗೆ ಅವನ ಭಸ್ಮಾಸುರನ ಅಜಾಗ್ರತೆಯ ಬಗೆಗೂ ಆತಂಕವಾಗುತ್ತದೆ. ನೀವಿದನ್ನು ಓದಿದರೆ ಅವರ ಮುಂದಿನ ಪುಸ್ತಕಗಳು ಯಾವುವೆಂದು ಹುಡುಕಾಡುವುದಂತೂ ಖಂಡಿತ.*




## ಅಂಧಶ್ರದ್ಧೆ – ಪ್ರಶ್ನೆ ಚಿಹ್ನೆ ಮತ್ತು ಪೂರ್ಣ ವಿರಾಮ

*ಮರಾಠಿ ಮೂಲ : ಡಾ॥ ನರೇಂದ್ರ ದಾಭೋಲ್ಕರ್, ಪ್ರೊ॥ ಪ. ರಾ. ಆರ್ಡೆ;*

*ಕನ್ನಡಕ್ಕೆ : ಚಂದ್ರಕಾಂತ ಪೋಕಳೆ*

**ಪುಟ : ೮೮** **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ನಾವಿಂದು ಅಂಧಶ್ರದ್ಧೆಯ ದಾಸಾನುದಾಸರಾಗಿದ್ದೇವೆ. ಇದಕ್ಕೆ ಕಾರಣ ಚಿಂತನೆ – ವಿಮರ್ಶೆಗಳ ಅಭಾವ. ಇಂಥ ವೈಜ್ಞಾನಿಕ ಯುಗದಲ್ಲೂ ಅದರ ಎಲ್ಲ ಸೌಕರ್ಯಗಳನ್ನು ಅನುಭವಿಸುತ್ತಲೇ ವೈಜ್ಞಾನಿಕ ಸಾಧನಗಳ ಮೂಲಕವೆ ಮೂಢನಂಬಿಕೆಗಳನ್ನು ಮುಗ್ಧ ಜನರ ಮನದಲ್ಲಿ ಬಿತ್ತುವುದು ಅಕ್ಷಮ್ಯ. ನಮ್ಮ ಸುತ್ತಲೂ ನಮ್ಮ ಅಜ್ಞಾನವನ್ನು ದುರುಪಯೋಗಪಡಿಸುತ್ತ ನಮಗೆ ಕೆಲಸಕ್ಕೆ ಬಾರದ ಸಲಹೆ ನೀಡುತ್ತ ನಮ್ಮ ಕಷ್ಟಗಳಿಗೆ ಗ್ರಹಗತಿಗಳನ್ನು ಕಾರಣವಾಗಿಸಿ ಪರಿಹಾರ ಸೂಚಿಸುತ್ತೇವೆಂದು ನಂಬಿಸುವ ಬಾಬಾ–ಬಾವಾಗಳಿದ್ದಾರೆ. ಮಾಂತ್ರಿಕರು, ಪವಾಡಪುರುಷರು ನಮ್ಮಿಂದ ಸೇವೆಯ ರೂಪದಲ್ಲಿ ಹಣ–ಶ್ರಮ ಎರಡನ್ನೂ ಇಲ್ಲವಾಗಿಸುತ್ತಾರೆ. ಮಾಧ್ಯಮಗಳಂತೂ ಇಂಥ ಕಪಟಸನ್ಯಾಸಿಗಳಿಗೆ ಹೆಚ್ಚಿನ ಪ್ರಾಧಾನ್ಯ ಜಾಹಿರಾತಿನೊಂದಿಗೆ ನೀಡಿ ಜನರನ್ನು ತಪ್ಪುದಾರಿಗೆಳೆಯಲು ರಾಜಮಾರ್ಗ ತೋರುತ್ತಾರೆ. ವೈಜ್ಞಾನಿಕ ಮನೋಭಾವ ಬೆಳೆಸಿಕೊಂಡು ನಾವಿಂದು ಇಂಥ ಅನಿಷ್ಟ ಪ್ರವೃತ್ತಿಯಿಂದ ದೂರವಾಗಿ ಜಾಗ್ರತರಾಗಬೇಕಾಗಿದೆ. ಇಂದು ಮಹಾರಾಷ್ಟ್ರದಲ್ಲಿ ಅಂಧಶ್ರದ್ಧಾನಿರ್ಮೂಲನ ಸಮಿತಿಯವರು ಆಂದೋಲನದ ರೂಪದಲ್ಲಿ ಜನಜಾಗೃತಿ ಮೂಡಿಸಿದ್ದಾರೆ. ಪ್ರಶ್ನೋತ್ತರ ರೂಪದಲ್ಲಿದ್ದು ಅತ್ಯಂತ ಪರಿಣಾಮಕಾರಿಯಾಗಿ ಜನರೊಂದಿಗೆ ಸಂವಹನಿಸುವಂಥ ಕಸುವು ಈ ಕೃತಿಗಿದೆ. ತನ್ನ ನೆಮ್ಮದಿಗಾಗಿ ಅವರಿವರ ಮಾತನ್ನು ಕೇಳಿ ಇನ್ನಷ್ಟು ಕಂಗೆಡುವ ಜನರಿಗೆ ಸರಿಯಾದ ಮಾರ್ಗದರ್ಶನ ಇಲ್ಲಿ ಸೂಚಿಸಲಾಗಿದೆ. ಮಾತ್ರವಲ್ಲ ಸರಿ ಯಾವುದು ತಪ್ಪು ಯಾವುದು ಎಂದೂ ಸಮರ್ಥವಾಗಿ ವಿವರಿಸಲ್ಪಟ್ಟಿದೆ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

## ಕಡಲ ಹಕ್ಕಿ (ನಾಟಕ)

*ಆ್ಯಂಟನ್ ಚೆಕಾಫ್, ಅನುವಾದ : ಶ್ರೀನಿವಾಸ್ ವಿ. ಸುತ್ರಾವೆ*

**ಪುಟ : ೧೪ + ೯೦** **ಬೆಲೆ : ರೂ. ೭೫**

**ಚಂದ್ರನಾಥ ಪ್ರಕಾಶನ,** 'ರತ್ನತ್ರಯ', ೮, ೧ನೇ ಮುಖ್ಯರಸ್ತೆ, ರಜತಗಿರಿ, ಧಾರವಾಡ – ೫೮೦ ೦೦೪



*ವಿಶ್ವವಿಖ್ಯಾತ ನಾಟಕಕಾರ, ಕತೆಗಾರ ಆ್ಯಂಟನ್ ಚೆಕಾಫ್ ಅವರ ಎಲ್ಲ ನಾಟಕಗಳೂ ಕತೆಗಳೂ ವಿಶ್ವದ ಬಹುತೇಕ ಭಾಷೆಗಳಲ್ಲಿ ಅನುವಾದಗೊಂಡಿವೆ. ರಷ್ಯಾದ ಕ್ರಾಂತಿಪೂರ್ವ ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳನ್ನು ಸಶಕ್ತವಾಗಿ ತಮ್ಮ ನಾಟಕಗಳ ವಸ್ತುವನ್ನಾಗಿಸಿಕೊಂಡವರು ಚೆಕಾಫ್. 'ದಿ ಚೆರಿ ಆರ್ಚರ್ಡ್' ಎಂಬ ಚೆಕಾಫ್‌ರ ನಾಟಕ ವಿಶ್ವದ ರಂಗಭೂಮಿಗೆ ಸಂದ ವಿಶೇಷ ಕೃತಿ. ಚೆಕಾಫ್ ಅವರ ಎಲ್ಲ ನಾಟಕಗಳೂ ಕನ್ನಡ ಭಾಷೆಗೆ ಅನುವಾದಗೊಂಡಿವೆ. ಬಹುತೇಕ ರಂಗ ಪ್ರಯೋಗ ಕಂಡಿವೆ. ಕನ್ನಡದಲ್ಲಿ ಬ್ರೆಕ್ಟ್ ಮತ್ತು ಚೆಕಾಫ್ ನಾಟಕಗಳು ಬೇರೆ ಬೇರೆ ಲೇಖಕರಿಂದಲೂ ಅನುವಾದಗೊಂಡಿವೆ. ಪ್ರತಿಯೊಬ್ಬ ಅನುವಾದಕರೂ ತಮ್ಮ ವಿಭಿನ್ನ ಗ್ರಹಿಕೆ ಮತ್ತು ಭಾಷಾಶೈಲಿಯ ಮೂಲಕ ಈ ಕೃತಿಗಳ ಆಶಯಗಳನ್ನು ಮೂಲ ಆಶಯಕ್ಕೆ ಧಕ್ಕೆ ಬಾರದಂತೆ ಕನ್ನಡಕ್ಕೆ ತಂದುಕೊಟ್ಟಿದ್ದಾರೆ. ಹಲವಾರು ಇಂಗ್ಲಿಷ್ ನಾಟಕಗಳನ್ನು, ಬೇರೆ ಭಾಷೆಯಿಂದ ಇಂಗ್ಲಿಷ್‌ಗೆ ಅನುವಾದಗೊಂಡ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ ಪ್ರಮುಖರಲ್ಲಿ ಪ್ರೊ॥ ಶ್ರೀನಿವಾಸ್ ಸುತ್ರಾವೆ ಒಬ್ಬರು. ಅವರು ಚೆಕಾಫ್‌ನ 'ಸೀಗಲ್' ನಾಟಕವನ್ನು 'ಕಡಲ ಹಕ್ಕಿ' ಎನ್ನುವ ಹೆಸರಿನಲ್ಲಿ ಅನುವಾದಿಸಿದ್ದಾರೆ. ಕ್ರಾಂತಿಪೂರ್ವ ರಷ್ಯಾದ ಜನರ ಬದುಕು ಮಧ್ಯಮವರ್ಗದ ತಳಮಳಗಳ ಮಧ್ಯೆಯೇ ಅರಳುವ ಪ್ರೀತಿಯೊಂದು ಕಮರಿಹೋಗುವ ಕತೆ 'ಕಡಲ ಹಕ್ಕಿ'ಯದು. ಸುಂದರವಾದ ಕಡಲ ಹಕ್ಕಿಯ ಸಾವು ಸಮಾಗಮವಾಗಬೇಕಾದ ಎರಡು ಮನಸುಗಳ ವಿಮುಖತೆಗೆ ಸಾಂಕೇತಿಕವಾಗಿ ಮೂಡಿಬಂದಿದೆ. ಶ್ರೀನಿವಾಸ ಸುತ್ರಾವೆ ಯವರು ಮೂಲ ನಾಟಕದ ಪರಿಸರ ಭಿನ್ನವಾಗಿದ್ದರೂ ಭಾಷೆಯ ವಿವಿಧತೆಯಿಂದ ಆಪ್ತವಾದ ರೀತಿಯಲ್ಲಿ ಈ ನಾಟಕವನ್ನು ಕನ್ನಡಕ್ಕೆ ಅನುವಾದಿಸಿ ಕೊಟ್ಟಿದ್ದಾರೆ.*

– ***ಶ್ರೀಸುಮಿತ್ರಾಸುತ,*** *ಅಗಸಬಾಳ*



# ನಾಮಕರಣಕ್ಕೆ "ನಾಮ"

> ನಾಮಕರಣವನ್ನೇ ಅಸ್ತ್ರ ಮಾಡಿಕೊಂಡು ವೃತ್ತಿನಿರತ ರಾಜಕಾರಣಿಗಳಿಗೆ ರಾಜಕೀಯ ಪುನರ್ವಸತಿ ಕಲ್ಪಿಸುವ ಪದ್ಧತಿಯನ್ನು ಮುಂದುವರಿಸಿದರೆ ಮೇಲ್ಮನೆ ತನ್ನ ಅರ್ಥವನ್ನೇ ಕಳೆದುಕೊಳ್ಳುತ್ತದೆ. ಚಿಂತಕರ ಚಾವಡಿ ಹೋಗಿ ಅದು ಜೂಜಿನ ಚಾವಡಿಯಾಗುತ್ತದೆ.

**ಸೂರ್ಯದೇವ**

ಮೇರು ವ್ಯಕ್ತಿತ್ವದ ಗಣ್ಯರನ್ನು ಆಡಳಿತದಲ್ಲಿ ಬಳಸಿಕೊಳ್ಳುವುದಕ್ಕಾಗಿಯೇ ಸಂವಿಧಾನದಲ್ಲಿ ವಿಶಿಷ್ಟ ಅವಕಾಶವನ್ನು ಕಲ್ಪಿಸಲಾಗಿದೆ. ರಾಜ್ಯಸಭೆ ಅಥವಾ ವಿಧಾನ ಪರಿಷತ್‌ಗಳಿಗೆ ಬೇರೆ ಬೇರೆ ಕ್ಷೇತ್ರದ ಗಣ್ಯರನ್ನು ನಾಮಕರಣ ಮಾಡಿ ಅವರ ಚಿಂತನೆಯನ್ನು ಬಳಸಿಕೊಳ್ಳಬೇಕು ಎನ್ನುವುದು ಇದರ ಹಿಂದಿರುವ ಉದ್ದೇಶ. ಕಲೆ, ವಿಜ್ಞಾನ ಮತ್ತು ಸಮಾಜ ಸೇವೆಯಲ್ಲಿ ತೊಡಗಿರುವವರನ್ನು ರಾಜ್ಯಸಭೆಗೆ ನೇಮಕ ಮಾಡಲು ಕಾನೂನಿನಲ್ಲಿ ಅವಕಾಶವಿದೆ. ಅದೇ ರೀತಿ ಕಲೆ, ವಿಜ್ಞಾನ, ಸಮಾಜ ಸೇವೆ ಮತ್ತು ಸಹಕಾರ ಚಳವಳಿಯಲ್ಲಿ ಭಾಗಿಯಾದವರನ್ನು ವಿಧಾನ ಪರಿಷತ್‌ಗೆ ನೇಮಕ ಮಾಡಬಹುದು. ಇದಕ್ಕೆ ಸಂವಿಧಾನದ ಮಾನ್ಯತೆ ಇದೆ. ಕಲೆ, ವಿಜ್ಞಾನ, ಸಮಾಜ ಸೇವೆಯಲ್ಲಿ ತೊಡಗಿದವರಿಗೆ ನೇರವಾಗಿ ಚುನಾವಣೆಯಲ್ಲಿ ಭಾಗಿಯಾಗುವುದಕ್ಕೆ ಕಷ್ಟ. ಆದರೆ ಉತ್ತಮ ಸಮಾಜ ನಿರ್ಮಾಣದಲ್ಲಿ ಅವರನ್ನು ಕಡೆಗಣಿಸಬಾರದು. ನೀತಿ ನಿರೂಪಣೆಯಲ್ಲಿ ಅವರ ಪಾಲೂ ಇರಬೇಕು. ಉತ್ತಮ ಶಾಸನ, ಕಾನೂನು ಮಾಡುವುದರಲ್ಲಿ ಅವರ ಪಾಲೂ ಇರಬೇಕು ಎನ್ನುವ ಕಾರಣಕ್ಕಾಗಿಯೇ ರಾಜ್ಯಸಭೆ ಮತ್ತು ವಿಧಾನ ಪರಿಷತ್‌ಗಳಿಗೆ ನಾಮಕರಣದ ವ್ಯವಸ್ಥೆ ಇದೆ. ಈ ಉದ್ದೇಶದಿಂದಲೇ ಈ ಎರಡೂ ಸದನಗಳನ್ನು ಮೇಲ್ಮನೆ ಎಂದು ಕರೆಯುತ್ತಾರೆ. ಸಮಾಜದಲ್ಲಿ ಮೇಲ್ಮಟ್ಟದಲ್ಲಿ ಇರುವವರು ಇಲ್ಲಿದ್ದಾರೆ ಎನ್ನುವುದು ಇದರ ಅರ್ಥ. ಆದರೆ ಇತ್ತೀಚೆಗೆ ಈ ನಂಬಿಕೆ ಹುಸಿಯಾಗುತ್ತಿದೆ. ಮೇಲ್ಮನೆಗೂ ರಾಜಕಾರಣಿಗಳೇ ದಾಳಿ ಇಡುತ್ತಿದ್ದಾರೆ. ಚುನಾವಣೆಯಲ್ಲಿ ಸೋತವರು, ರಿಯಲ್ ಎಸ್ಟೇಟ್ ಮತ್ತು ಇತರ ಉದ್ಯಮದಲ್ಲಿ ಹಣ ಮಾಡಿದವರೂ ಮೇಲ್ಮನೆ ಪ್ರವೇಶ ಮಾಡುತ್ತಿದ್ದಾರೆ. ವಿಧಾನಸಭೆಯಿಂದ ವಿಧಾನ ಪರಿಷತ್‌ಗೆ ಅಥವಾ ರಾಜ್ಯಸಭೆಗೆ ಆಯ್ಕೆಯಾಗುವವರಲ್ಲಿ ಬಹುತೇಕ ಹಣವಂತರೇ ತುಂಬಿರುತ್ತಾರೆ. ಇದು ಹಲವಾರು ವರ್ಷಗಳಿಂದ ಕರ್ನಾಟಕದಲ್ಲಿ ನಡೆಯುತ್ತಿದೆ. ನಾಮಕರಣ ಮಾಡುವಾಗಲೂ ಇಂತಹ ಜನರನ್ನೇ ಸರ್ಕಾರಗಳೂ ನೇಮಕ ಮಾಡುತ್ತಿವೆ. ರಾಜ್ಯಸಭೆಗೆ ಈಗಲೂ ಕೆಲವು ಉತ್ತಮ ವ್ಯಕ್ತಿಗಳನ್ನು ನೇಮಕ ಮಾಡುವ ಕ್ರಿಯೆ ನಡೆಯುತ್ತಿದೆ. ಆದರೆ ವಿಧಾನ ಪರಿಷತ್‌ಗೆ ಮಾತ್ರ ಸಮಾಜ ಸೇವೆಯ ಹೆಸರಿನಲ್ಲಿ ವೃತ್ತಿ ನಿರತ ರಾಜಕಾರಣಿಗಳನ್ನು ನೇಮಕ ಮಾಡುವ ಪ್ರಕ್ರಿಯೆ ಮುಂದುವರಿಯುತ್ತಲೇ ಇದೆ.

ರಾಜ್ಯಸಭೆಗೆ ಲತಾ ಮಂಗೇಶ್ಕರ್, ಸಚಿನ್ ತೆಂಡೂಲ್ಕರ್ ಅವರನ್ನು ನಾಮಕರಣ ಮಾಡಲಾಗಿದೆ. ಈ ಹಿಂದೆ ಖ್ಯಾತ ವಿಜ್ಞಾನಿಗಳಾದ ರಾಜಾರಾಮಣ್ಣ, ಕಸ್ತೂರಿರಂಗನ್ ಮುಂತಾದವರೂ ರಾಜ್ಯಸಭಾ ಸದಸ್ಯರಾಗಿದ್ದರು. ರಾಜಾರಾಮಣ್ಣ ಅವರನ್ನು ಸಚಿವರನ್ನಾಗಿ ನೇಮಕ ಮಾಡಲಾಗಿತ್ತು. ಆರ್ಥಿಕ ತಜ್ಞರಾದ ಡಾ॥ ಮನಮೋಹನ್ ಸಿಂಗ್ ಅವರನ್ನು ರಾಜ್ಯಸಭೆಗೆ ಆಯ್ಕೆ ಮಾಡಿ ನಂತರ ಅವರನ್ನು ಸಚಿವರನ್ನಾಗಿ ಮಾಡಲಾಯಿತು. ನಂತರ ಅವರು ಬೇರೆ ಬೇರೆ ವಿಧಾನಸಭೆಯಿಂದ ರಾಜ್ಯಸಭೆಗೆ ಆಯ್ಕೆಯಾಗಿ ಪ್ರಧಾನಿಯೂ ಆದರು. ಒಮ್ಮೆಯೂ ಅವರು ನೇರ ಚುನಾವಣೆಯಲ್ಲಿ ಸ್ಪರ್ಧಿಸಿ ಗೆಲ್ಲಲೇ ಇಲ್ಲ. ಒಮ್ಮೆ ಪ್ರಯತ್ನಪಟ್ಟರೂ ಸಫಲರಾಗಲಿಲ್ಲ.

ರಾಜ್ಯದಲ್ಲಿಯೂ ಈಗ ೨೦-೨೫ ವರ್ಷಗಳ ಹಿಂದೆ ವಿಧಾನ ಪರಿಷತ್‌ಗೆ ನಾಮಕರಣ ಮಾಡುವಾಗ ಕಲೆ, ಸಾಹಿತ್ಯ, ಕ್ರೀಡೆ ಮುಂತಾದ ಕ್ಷೇತ್ರಗಳ ಗಣ್ಯರನ್ನೇ ಆಯ್ಕೆ ಮಾಡಲಾಗುತ್ತಿತ್ತು. ಆದರೆ ಇತ್ತೀಚೆಗೆ ಆ ಪದ್ಧತಿಯನ್ನು ಕೈಬಿಡಲಾಗಿದೆ. ಬಿ. ಎಸ್. ಯಡಿಯೂರಪ್ಪ ನೇತೃತ್ವದ ಬಿಜೆಪಿ ಸರ್ಕಾರ ಅಧಿಕಾರದಲ್ಲಿ ಇದ್ದಾಗ ವಿ. ಸೋಮಣ್ಣ ಅವರನ್ನು ನಾಮಕರಣ ಮಾಡಲಾಯಿತು. ಅದಕ್ಕೆ ರಾಜ್ಯಪಾಲರು ಒಮ್ಮೆ ವಿರೋಧ ವ್ಯಕ್ತಪಡಿಸಿದರೂ ಹಟಕ್ಕೆ ಬಿದ್ದ ರಾಜ್ಯ ಸರ್ಕಾರ ಅವರನ್ನೇ ನೇಮಕ ಮಾಡಿತು. ಲೆಹರ್ ಸಿಂಗ್, ಬಿ. ಬಿ. ಶಿವಪ್ಪ, ಎಂ. ಡಿ. ಲಕ್ಷ್ಮೀನಾರಾಯಣ ಮುಂತಾದ ವೃತ್ತಿನಿರತ ರಾಜಕಾರಣಿಗಳನ್ನೇ ನೇಮಕ ಮಾಡಲಾಯಿತು. ಅದೇ ರೀತಿ ಈಗ ಅಧಿಕಾರಕ್ಕೆ ಬಂದಿರುವ ಸಿದ್ದರಾಮಯ್ಯ ನೇತೃತ್ವದ ಕಾಂಗ್ರೆಸ್ ಸರ್ಕಾರ ಕೂಡ ಇದೇ ತಪ್ಪನ್ನು ಮಾಡಿದೆ. ಉಗ್ರಪ್ಪ, ಜಬ್ಬಾರ್ ಖಾನ್, ಐವನ್ ಡಿಸೋಜ ಅವರನ್ನು

ವಿಧಾನ ಪರಿಷತ್‌ಗೆ ನಾಮಕರಣ ಮಾಡಿದೆ. ಕಲಾ ಕ್ಷೇತ್ರದಿಂದ ಜಯಮಾಲಾ ಅವರನ್ನು ನೇಮಕ ಮಾಡಲಾಗಿದೆ. ಜಯಮಾಲಾ ಅವರು ಸಿನಿಮಾ ತಾರೆಯಾಗಿದ್ದರೂ ಹಲವಾರು ವರ್ಷಗಳಿಂದ ಅವರು ಕಾಂಗ್ರೆಸ್ ಪಕ್ಷದ ಸದಸ್ಯರಾಗಿದ್ದರು. ಹೀಗೆ ರಾಜಕಾರಣಿಗಳನ್ನೇ ನೇಮಕ ಮಾಡಿದ ಬಗ್ಗೆ ಆಕ್ಷೇಪ ವ್ಯಕ್ತಪಡಿಸಿದರೆ, "ತಾವೇನೂ ಹೊಸ ಸಂಪ್ರದಾಯ ಜಾರಿ ಮಾಡಿಲ್ಲ; ಈ ಹಿಂದೆ ಕೂಡ ಇಂತಹ ನಾಮಕರಣವಾಗಿದೆ; ನಾವೂ ಕೂಡ ಅದನ್ನೇ ಮಾಡಿದ್ದೇವೆ" ಎಂಬ ಸಮರ್ಥನೆ ಸರ್ಕಾರದಿಂದ ಬಂದಿದೆ. 'ಅವನೂ ಸಗಣಿ ತಿಂದ. ನಾನೂ ತಿನ್ನುತ್ತಿದ್ದೇನೆ' ಎನ್ನುವ ಹಾಗಿದೆ ಇದು. ಅಧಿಕಾರದಲ್ಲಿ ಇದ್ದಾಗ ರಾಜಕಾರಣಿಗಳನ್ನೇ ಮೇಲ್ಮನೆಗೆ ನಾಮಕರಣ ಮಾಡಿದ್ದ ಬಿಜೆಪಿ ಈಗ ರಾಜಕಾರಣಿಗಳ ನಾಮಕರಣಕ್ಕೆ ವಿರೋಧ ವ್ಯಕ್ತಪಡಿಸಿ ರಾಜ್ಯಪಾಲರನ್ನು ಭೇಟಿ ಮಾಡಿ ಮನವಿ ಸಲ್ಲಿಸಿದೆ. ಇದೂ ಕೂಡ ಅತ್ಯಂತ ವಿಪರ್ಯಾಸ. ಬಿಜೆಪಿ ಸರ್ಕಾರ ನಾಮಕರಣ ಮಾಡಿದ ರಾಜಕಾರಣಿಗಳು ಈಗಲೂ ವಿಧಾನ ಪರಿಷತ್‌ನಲ್ಲಿದ್ದಾರೆ.

ರಾಜ್ಯದಲ್ಲಿ ಈ ಬಗೆಯ ನಾಮಕರಣದ ಇತಿಹಾಸವನ್ನು ಗಮನಿಸಿದರೆ ಕೆಲವು ಅತ್ಯಂತ ಪ್ರಮುಖ ವಿಷಯಗಳು ತಿಳಿಯುತ್ತವೆ. ಕೆಂಗಲ್ ಹನುಮಂತಯ್ಯ ಅವರ ಕಾಲದಿಂದಲೂ ಸಾಹಿತ್ಯ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಹೆಸರು ಮಾಡಿದವರನ್ನೇ ವಿಧಾನ ಪರಿಷತ್‌ಗೆ ನೇಮಕ ಮಾಡುವ ಸಂಪ್ರದಾಯ ಇತ್ತು. ರಾಮಕೃಷ್ಣ ಹೆಗಡೆ ಅವರು ಖ್ಯಾತ ಹಿಂದೂಸ್ತಾನಿ ಕಲಾವಿದ ಮಲ್ಲಿಕಾರ್ಜುನ ಮನ್ಸೂರ್, ಕವಿ ಎಂ. ಅಕ್ಬರ್ ಅಲಿ ಮುಂತಾದವರನ್ನು ನಾಮಕರಣ ಮಾಡಿದ್ದರು. ಗುಂಡೂರಾವ್ ಅವರೂ ಕೂಡ ಶಿಕ್ಷಣ ತಜ್ಞ ಎಚ್. ನರಸಿಂಹಯ್ಯ ಅವರನ್ನು ನೇಮಕ ಮಾಡಿದ್ದರು. ವೀರೇಂದ್ರ ಪಾಟೀಲ್ ಅವರು ಗಂಗೂಬಾಯಿ ಹಾನಗಲ್, ನೇತ್ರ ತಜ್ಞ ಡಾ॥ ಎಂ. ಸಿ. ಮೋದಿ ಮುಂತಾದವರನ್ನು ನಾಮಕರಣ ಮಾಡಿದ್ದರು. ಖ್ಯಾತ ಸಾಹಿತಿಗಳಾದ ಚಂದ್ರಶೇಖರ ಕಂಬಾರ, ಕವಿ ಸಿದ್ದಲಿಂಗಯ್ಯ, ದೊಡ್ಡರಂಗೇ ಗೌಡ ಮುಂತಾದವರೂ ವಿಧಾನ ಪರಿಷತ್ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ಕೆಂಗಲ್ ಹನುಮಂತಯ್ಯ ಅವರ ಕಾಲದಲ್ಲಿ ರುಮಾಲೆ ಚೆನ್ನಬಸಪ್ಪ ಮತ್ತು ಮಹಾಬಲೇಶ್ವರ ಭಟ್ಟ ಅವರ ನಡುವೆ ಮೇಲ್ಮನೆ ಸದಸ್ಯತ್ವಕ್ಕೆ ಪೈಪೋಟಿ ನಡೆದಾಗ ಹನುಮಂತಯ್ಯ ಅವರೂ ಇಬ್ಬರಲ್ಲಿ ಯಾರನ್ನು ನೇಮಕ ಮಾಡಬೇಕು ಎಂದು ನೀವು ನೀವೇ ತೀರ್ಮಾನ ಮಾಡಿಕೊಂಡು ಬನ್ನಿ ಎಂದಿದ್ದರು. ಆಗ ಮಹಾಬಲೇಶ್ವರ ಭಟ್ಟ ಅವರು ರುಮಾಲೆ ಅವರನ್ನು ಬೆಂಬಲಿಸಿದ್ದರು. ಈಗ ಅಂತಹ ಜನರು ಇಲ್ಲ. ತಮ್ಮ ಸ್ಥಾನವನ್ನು ಬೇರೊಬ್ಬರಿಗೆ ಬಿಟ್ಟುಕೊಡುವ ಔದಾರ್ಯ ಯಾರಿಗೂ ಇಲ್ಲ. ಬೇರೆಯವರನ್ನು ಹೇಗಾದರೂ ತಪ್ಪಿಸಿ ತಾವೇ ಕುಳಿತುಕೊಳ್ಳಲು ನೋಡುವವರೇ ಹೆಚ್ಚು.

೧೯೦೭ರಲ್ಲಿ ವಿಧಾನ ಪರಿಷತ್ ಅಸ್ತಿತ್ವಕ್ಕೆ ಬಂದಾಗಲೇ ನಾಮಕರಣದ ಬಗ್ಗೆಯೂ ಸ್ಪಷ್ಟ ನಿಯಮಾವಳಿಯನ್ನು ರೂಪಿಸಲಾಗಿದೆ. ಕಾನೂನು ಮತ್ತು ನೀತಿ ನಿರೂಪಣೆಯಲ್ಲಿ ವಿವಿಧ ಕ್ಷೇತ್ರಗಳ ಗಣ್ಯರನ್ನು ಬಳಕೆ ಮಾಡಿಕೊಳ್ಳುವುದಕ್ಕೆ ಅವಕಾಶವನ್ನು ಕಲ್ಪಿಸಿಯೇ ವಿಧಾನ ಪರಿಷತ್ ಮಾಡಲಾಗಿದೆ. ಈಗ ಒಟ್ಟಾರೆ ೧೧ ಮಂದಿಯನ್ನು ನಾಮಕರಣ ಮಾಡಬಹುದು. ಹೀಗೆ ನಾಮಕರಣ ಮಾಡುವವರ ಸಂಖ್ಯೆ ೧೦ಕ್ಕಿಂತ ಕಡಿಮೆ ಇರಬಾರದು ಹಾಗೂ ೧೫ಕ್ಕಿಂತ ಹೆಚ್ಚಿರಬಾರದು ಎಂದು ಆರಂಭದಲ್ಲಿಯೇ ಹೇಳಲಾಗಿದೆ.

೧೯೨೩ ಮತ್ತು ೧೯೪೦ರಲ್ಲಿ ವಿಧಾನ ಪರಿಷತ್ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಲಾಯಿತು. ಆ ಸಂದರ್ಭದಲ್ಲಿ ಮೈಸೂರು ವಿಶ್ವವಿದ್ಯಾಲಯ, ವಾಣಿಜ್ಯ, ಪ್ಲಾಂಟರ್‌ಗಳು, ವ್ಯಾಪಾರಿಗಳನ್ನೂ ಸದಸ್ಯರನ್ನಾಗಿ ಮಾಡಲಾಗುತ್ತಿತ್ತು. ದುರ್ಬಲ ವರ್ಗದವರಿಗೆ ಮೇಲ್ಮನೆಗೆ ಚುನಾಯಿತರಾಗುವುದು ಕಷ್ಟವಾದರೆ ಅವರನ್ನು ಸರ್ಕಾರ ನಾಮಕರಣ ಮಾಡುತ್ತಿತ್ತು. ೧೯೫೭ರಲ್ಲಿ ವಿಧಾನ ಪರಿಷತ್ ಸದಸ್ಯರ ಸಂಖ್ಯೆ ೬೩ ಇತ್ತು. ೧೯೮೭ರಲ್ಲಿ ಅದನ್ನು ೭೫ಕ್ಕೆ ಏರಿಸಲಾಯಿತು. ಈ ೭೫ ಮಂದಿಯಲ್ಲಿ ೨೫ ಸದಸ್ಯರನ್ನು ವಿಧಾನ ಸಭೆಯಿಂದ ಆಯ್ಕೆ ಮಾಡಲಾಗುತ್ತದೆ. ೨೫ ಸದಸ್ಯರು ಸ್ಥಳೀಯ ಸಂಸ್ಥೆಗಳಿಂದ ಆಯ್ಕೆಯಾಗುತ್ತಾರೆ. ತಲಾ ೭ ಮಂದಿ ಶಿಕ್ಷಕರು ಮತ್ತು ಪದವೀಧರರ ಕ್ಷೇತ್ರಗಳಿಂದ ಆಯ್ಕೆಯಾಗುತ್ತಾರೆ. ೧೧ ಮಂದಿಯನ್ನು ರಾಜ್ಯ ಸರ್ಕಾರ ನಾಮಕರಣ ಮಾಡುತ್ತದೆ.

ನಾಮಕರಣವನ್ನೇ ಅಸ್ತ್ರ ಮಾಡಿಕೊಂಡು ವೃತ್ತಿನಿರತ ರಾಜಕಾರಣಿಗಳಿಗೆ ರಾಜಕೀಯ ಪುನರ್ವಸತಿ ಕಲ್ಪಿಸುವ ಪದ್ಧತಿಯನ್ನು ಮುಂದುವರಿಸಿದರೆ ಮೇಲ್ಮನೆ ತನ್ನ ಅರ್ಥವನ್ನೇ ಕಳೆದುಕೊಳ್ಳುತ್ತದೆ. ಚಿಂತಕರ ಚಾವಡಿ ಹೋಗಿ ಅದು ಜೂಜಿನ ಚಾವಡಿಯಾಗುತ್ತದೆ.

**ಸೂರ್ಯದೇವ**
ನಂ. ೧೫, ಪೈಪ್‌ಲೈನ್ ರಸ್ತೆ, ವೈಯ್ಯಾಲಿಕಾವಲ್
ಬೆಂಗಳೂರು – ೫೬೦ ೦೦೩





# ಆ ಧ್ವನಿ ಎಲ್ಲಿ !?

ಸಿಂಹದ ಘರ್ಜನೆ ಮಾಡಿ
ಸಿಂಹಾಸನವನ್ನೇ ಅಲುಗಾಡಿಸುವ
ಬಲವುಳ್ಳ, ಆ ಬಲವಂತರ 'ಧ್ವನಿ'
ಇಂದೇಕೆ ಸೋತು ಸೊರಗಿದೆ ?

ಒಂದೇ ಕೂಗಿಗೆ ನೂರಾರು ಜನ
ಒಗ್ಗಟ್ಟಾಗಿ ಬರುವಂತೆ ಮಾಡುತ್ತಿದ್ದ
ಆ ಗಟ್ಟಿತನದ ಧ್ವನಿಗೆ
ಇಂದೇಕೆ ಬಂತು ಬಂಜೆತನ ?

ಕೇಳುವ ಸದ್ದಿಗೆ, ದಾರಿ ಬಿಟ್ಟು
ದೂರ ನಿಲ್ಲುವಂತೆ ಮಾಡುತ್ತಿದ್ದ
ಆ ನಿಷ್ಠೂರತನದ ಧ್ವನಿಗೆ
ಇಂದೇಕೆ ಬಂತು ಅಂಜುತನ ?

ಬಂಡೆಗಳಂತಹ ಹೃದಯಗಳಿಗೂ
ನಡುಕು ಹುಟ್ಟುವಂತೆ ಮಾಡುತ್ತಿದ್ದ
ಆ ಬಂಡಾಯದ ಧ್ವನಿಗೆ
ಇಂದೇಕೆ ಇಷ್ಟೊಂದು ಸೋಮಾರಿತನ ?

ಯಾರು ಮೋಡಿ ಮಾಡಿ
ನುಂಗಿದರು 'ಆ ಧ್ವನಿ'ಯನ್ನ ?
ಸಿಂಹಾಸನದ ಆ ಜನರೋ...
ಇಲ್ಲ, ಪರಿಸ್ಥಿತಿಯ ಚಮತ್ಕಾರವೋ...
ಯಾರು... ಯಾರು...! ?

**ಎಚ್. ಕೆ. ಕೊಟ್ರಪ್ಪ,** 'ಕೊಟಗಿ ನಿಲಯ', ನಂ. ೧೬, ಕೆ. ಹೆಚ್. ಬಿ. ಕಾಲೋನಿ, ಹೈಸ್ಕೂಲ್ ಬಡಾವಣೆ, ಹರಿಹರ – ೫೭೭ ೬೦೧

# ಕುವೆಂಪು ನಾಟಕಗಳ ಸ್ತ್ರೀ ಪಾತ್ರಗಳು



**ಸೀತೆ, ಸಾವಿತ್ರಿ, ಯಶೋಧರೆ, ಕುಂತಿಯಂಥ ಪಾರಂಪರಿಕ ಸ್ತ್ರೀ ಮಾದರಿಗಳು ಕುವೆಂಪುವನ್ನು ಪ್ರಭಾವಿಸಿರುವಂತೆಯೇ ರಾಷ್ಟ್ರೀಯತೆಯ ಕಲ್ಪನೆಯೂ ಇವರನ್ನು ಪ್ರಭಾವಿಸಿದೆ. ಈ ಹಿನ್ನೆಲೆಯಲ್ಲಿ ಬಲಿದಾನದ ಭಾರತಾಂಬೆ ಒಂದು ವಿಶಿಷ್ಟ ಪಾತ್ರ. ತಾಯಿನಾಡನ್ನು ಪೂಜನೀಯ ಮಾತೃದೇವತೆಯ ಸ್ಥಾನದಲ್ಲಿ ಕುವೆಂಪು ಇಲ್ಲಿ ಕಲ್ಪಿಸಿದ್ದಾರೆ. ರಾಷ್ಟ್ರವನ್ನು ಹೆಣ್ಣೆಂದು ಕಲ್ಪಿಸಿ, ಆಕೆ ಅಬಲೆ, ಸ್ವಯಂಶಕ್ತಳಲ್ಲ, ಆಕೆಯನ್ನು ಗಂಡಸು ರಕ್ಷಿಸಬೇಕು ಎನ್ನುವ ಕಲ್ಪನೆ ಪುರುಷಪ್ರಧಾನ ಚಿಂತನೆಯ ಪ್ರತೀಕವೇ ಆಗಿದೆ.**

**ರಾಮಲಿಂಗಪ್ಪ ಟಿ. ಬೇಗೂರು**

ತಮ್ಮ ನಾಟಕಗಳಲ್ಲಿ ಕುವೆಂಪು ಸೃಷ್ಟಿಸಿರುವ ಸ್ತ್ರೀ ಪಾತ್ರಗಳು ಭಾರತೀಯ ಪರಂಪರೆಯ ಪುರುಷಪ್ರಧಾನ ಚಿಂತನೆ ಸೃಷ್ಟಿಸಿದ ಸ್ತ್ರೀ ಮಾದರಿಗಳೇ ಆಗಿವೆ. ಇವರ ನಾಟಕಗಳಲ್ಲಿನ ಸ್ತ್ರೀಯರು ಪೂಜನೀಯ ದೇವತೆ, ಪೂಜನೀಯ ಮಾತೆ, ಪೂಜನೀಯ ಪ್ರಕೃತಿ, ಪ್ರೇಮತತ್ವದ ಪ್ರತೀಕ, ಸತಿಶಿರೋಮಣಿ, ಅಬಲೆ – ಈ ರೀತಿಯ ಮಾದರಿಗಳೇ ಆಗಿದ್ದಾರೆ.

ನನ್ನ ಗೋಪಾಲ, ಮೋಡಣ್ಣನ ತಮ್ಮ, ಬೆರಳ್ಗೆ ಕೊರಳ್, ಕಾನೀನ, ಶ್ಮಶಾನ ಕುರುಕ್ಷೇತ್ರಂ... ಹೀಗೆ ಹಲವು ನಾಟಕಗಳಲ್ಲಿ ತಾಯಿ ಪಾತ್ರಗಳನ್ನು ಸೃಷ್ಟಿಸಿರುವ ಕುವೆಂಪು ತಾಯಿಯ ಬಗ್ಗೆ ಅಪಾರ ಗೌರವ, ಪ್ರೇಮವನ್ನು ಪ್ರಕಟಿಸಿದ್ದಾರೆ. ಮಾತೃಪ್ರೇಮ, ತಾಯಿತನಗಳ ವೈಭವೀಕರಣ ಈ ನಾಟಕಗಳಲ್ಲಿ ಜರುಗಿದೆ. ಇವರ ಗುರು ಕಲ್ಪನೆಯಂತೆ ತಾಯಿಯ ಕಲ್ಪನೆಯೂ ತುಂಬಾ ಉನ್ನತವಾದದ್ದು. ಗುರುವಿಗೆ ಹೇಗೆ ಪೂಜನೀಯ ಸ್ಥಾನವನ್ನು ಕುವೆಂಪು ಕೊಡುತ್ತಾರೋ ಹಾಗೇ ತಾಯಿಗೂ ಪೂಜನೀಯ ಸ್ಥಾನವನ್ನು ನೀಡಿದ್ದಾರೆ. ಕರ್ಣನನ್ನು ಲಾಲಿಸಿ ಪಾಲಿಸದೆ ನೀರುಪಾಲು ಮಾಡಿದ ಕಠೋರ ವರ್ತನೆಯ ಕುಂತಿಯನ್ನೂ ಸೇರಿದಂತೆ ಯಾವ ತಾಯಿಯನ್ನೂ ಯಾವ ಸಂದರ್ಭದಲ್ಲಿಯೂ ಕುವೆಂಪು ಅಗೌರವದಿಂದ ಚಿತ್ರಿಸಿಲ್ಲ (ಕುಂತಿಯ ತಪ್ಪನ್ನಿಲ್ಲಿ ಕುವೆಂಪು ವಿಧಿಯ ಮೇಲೆ ಹಾಕಿಬಿಡುತ್ತಾರೆ).

ತಿಮ್ಮಿ, ಸೀತಮ್ಮ, ಪೀಂಚಲು, ಹೆಗ್ಗಡಿತಿ ಇಂಥ ಪಾತ್ರಗಳನ್ನು ಸೃಷ್ಟಿಸಿದ ಕುವೆಂಪುನೇ ಸೀತೆ ಸಾವಿತ್ರಿಯರನ್ನು ಪ್ರೇಮತತ್ವದ ಪ್ರತೀಕಗಳೆಂಬಂತೆ ಚಿತ್ರಿಸಿದ್ದಾರೆ. ಜಲಗಾರ, ಶೂದ್ರತಪಸ್ವಿಗಳಲ್ಲಿ ಪ್ರಖರ ವೈಚಾರಿಕತೆ ಪ್ರಕಟಗೊಂಡಿರುವಂತೆ ವಾಲ್ಮೀಕಿಯ ಭಾಗ್ಯ, ಕಾನೀನ ನಾಟಕಗಳಲ್ಲಿ ಪ್ರಖರ ಭಾವುಕತೆಯು ಪ್ರಕಟಗೊಂಡಿದೆ. ಇಲ್ಲಿ ಕರ್ಣ, ಲಕ್ಷ್ಮಣ, ಸೀತೆ ಇವರ ಮನಸ್ಸಿನ ಭಾವನಾತ್ಮಕ ಹೊಯ್ದಾಟಗಳನ್ನು ಚಿತ್ರಿಸುವುದೇ ಇವರಿಗೆ ಮುಖ್ಯವಾಗಿದೆ. ಜಡಮೌಲ್ಯಗಳನ್ನು ಛಿದ್ರಿಸುವ ಭಂಜನ – ನವನಿರ್ಮಾಣ ಪ್ರತಿಭೆಯಾದ ಕುವೆಂಪು, ಲಕ್ಷ್ಮೀಶ, ಕುಮಾರವ್ಯಾಸರನ್ನು ಅನುಸರಿಸಿ ಹೆಂಡತಿ–ಗಂಡ, ತಾಯಿ–ಮಗ, ಅತ್ತಿಗೆ–ಮೈದುನ ಇಂಥ ಸಂಬಂಧದ ಭಾವನೆಗಳ ತಾಕಲಾಟವನ್ನೇ ಪ್ರಧಾನವಾಗಿ ಬಿಂಬಿಸಿದ್ದಾರೆ. ಶೂದ್ರತಪಸ್ವಿಯಲ್ಲಿ ಪ್ರಕಟವಾಗಿರುವ ಪ್ರಖರ ವೈಚಾರಿಕತೆ ವಾಲ್ಮೀಕಿಯ ಭಾಗ್ಯದಲ್ಲಿ ಪ್ರಕಟವಾಗಿಲ್ಲ. ಈ ನಾಟಕದ ಕೊನೆಯಲ್ಲಿ ಸೀತೆಯ ಬಾಣಂತನ ಮಾಡುವ ವಾಲ್ಮೀಕಿಯನ್ನು ಭಾಗ್ಯವಂತನೆಂದಿರುವ ಕುವೆಂಪು ಶಿಶುಪಾಲನೆಯ ಭಾಗ್ಯದಿಂದ ರಾಮ ವಂಚಿತನಾದನೆಂದು ಹೇಳುತ್ತಾರೆಯೇ ವಿನಾ ಸೀತೆಯನ್ನು ಕಾಡಿಗಟ್ಟಿದ ಪ್ರಸಂಗವನ್ನು ಹೆಣ್ಣಿನ ಕಣ್ಣಿನಿಂದ ನೋಡಿಯೇ ಇಲ್ಲ. ಇದು ಕುವೆಂಪು ಉದ್ದೇಶವೂ ಅಲ್ಲ. ಇಲ್ಲಿರುವುದು ಗಂಡು ದೃಷ್ಟಿ ಮಾತ್ರ. ಶ್ರೀರಾಮನ ವ್ಯಕ್ತಿತ್ವದಲ್ಲಿ ಕುಂದೆಣಿಸದ ಕವಿ ಲಕ್ಷ್ಮೀಶನನ್ನು ಮೆಚ್ಚುವ ಗಂಡು ಕವಿದೃಷ್ಟಿ .

ಇವರ ಸ್ತ್ರೀ ಪಾತ್ರಗಳನ್ನು ನೋಡಿದರೆ ದಾಂಪತ್ಯ ನಿಷ್ಠೆಯ ಬಗೆಗೆ ಇವರಿಗೆ ಅಪಾರ ನಂಬಿಕೆ, ಗೌರವಗಳಿರುವಂತೆ ಕಾಣುತ್ತದೆ. ದಾಂಪತ್ಯ ನಿಷ್ಠೆಯನ್ನೇ ಕುವೆಂಪು ಯಮನ ಸೋಲು ನಾಟಕದಲ್ಲಿ ಪ್ರೇಮತತ್ವ ಎಂದು ಕರೆದಿದ್ದಾರೆ. ಹೆಣ್ಣಿನ (ಹೆಂಡತಿಯ) ಪ್ರೇಮಕ್ಕೆ ಗಂಡಸಿನ ಸಾವನ್ನೂ ಮುಂದೂಡುವ ಶಕ್ತಿ ಇದೆ ಎಂದು ಹೇಳುವುದು ಪತಿವ್ರತಾ ತತ್ವದ ಪರೋಕ್ಷ ಪ್ರತಿಪಾದನೆಯೇ ಆಗಿದೆ. “ಎಲ್ಲಿ

ಪತಿಯಿದ್ದರದೆ ಸಗ್ಗ, ಅನುರಾಗವಿದ್ದಲ್ಲಿ ವೈಕುಂಠ, ಪ್ರೇಮವೆಲ್ಲಿರುವುದೋ ಅಲ್ಲಿ ಕೈಲಾಸ" ಎನ್ನುವ ಕುವೆಂಪು ಸಾವಿತ್ರಿಯನ್ನು ಪತಿವ್ರತೆಯನ್ನಾಗಿಯೇ ಚಿತ್ರಿಸಿದ್ದಾರೆ. ರಕ್ತಾಕ್ಷಿ ನಾಟಕದ ಚೆಲುವಾಂಬೆಯನ್ನು ಪಾದರಿ ಎನ್ನುವ ಕುವೆಂಪು ದಾಂಪತ್ಯ ನಿಷ್ಠೆಯನ್ನು ಗೌರವಿಸುವವರು.

ಪ್ರಕೃತಿಯಲ್ಲಿ ದೈವವನ್ನು ಕಾಣುವ ಕುವೆಂಪು ಪ್ರಕೃತಿಯನ್ನು ಹೆಣ್ಣಾಗಿಯೂ ಕಾಣುತ್ತಾರೆ. ಭೂದೇವಿ, ವನದೇವಿ, ಉಷಾದೇವಿ, ನಿಶಾದೇವಿ, ಬಾನ್ದೇವಿ, ಹೀಗೆ ಹಲವು ಹೆಣ್ಣು ಪಾತ್ರಗಳನ್ನು ಕುವೆಂಪು ಸೃಷ್ಟಿಸಿದ್ದಾರೆ. ಪ್ರಕೃತಿಯನ್ನು ಹೆಣ್ಣಾಗಿ, ದೈವವಾಗಿ ಕಾಣುವ ಕುವೆಂಪುಗೆ ಪಾರಂಪರಿಕ ಸ್ತ್ರೀ ಮಾದರಿಗಳನ್ನು ಒಡೆದು ಪ್ರಜಾಪ್ರಭುತ್ವೀಯ ಹೆಣ್ಣನ್ನು ಚಿತ್ರಿಸಲು ಆಗಿಲ್ಲ. ಇವರ ಕಥನಗಳ ಆಯ್ಕೆ ಮತ್ತು ಉದ್ದೇಶಗಳೂ ಕೂಡ ಇದಕ್ಕೆ ಪೂರಕವಲ್ಲ.

ಸೀತೆ, ಸಾವಿತ್ರಿ, ಯಶೋಧರೆ, ಕುಂತಿಯಂಥ ಪಾರಂಪರಿಕ ಸ್ತ್ರೀ ಮಾದರಿಗಳು ಕುವೆಂಪುವನ್ನು ಪ್ರಭಾವಿಸಿರುವಂತೆಯೇ ರಾಷ್ಟ್ರೀಯತೆಯ ಕಲ್ಪನೆಯೂ ಇವರನ್ನು ಪ್ರಭಾವಿಸಿದೆ. ಈ ಹಿನ್ನೆಲೆಯಲ್ಲಿ ಬಲಿದಾನದ ಭಾರತಾಂಬೆ ಒಂದು ವಿಶಿಷ್ಟ ಪಾತ್ರ. ತಾಯಿನಾಡನ್ನು ಪೂಜನೀಯ ಮಾತೃದೇವತೆಯ ಸ್ಥಾನದಲ್ಲಿ ಕುವೆಂಪು ಇಲ್ಲಿ ಕಲ್ಪಿಸಿದ್ದಾರೆ. ರಾಷ್ಟ್ರವನ್ನು ಹೆಣ್ಣೆಂದು ಕಲ್ಪಿಸಿ, ಆಕೆ ಅಬಲೆ, ಸ್ವಯಂಶಕ್ತಳಲ್ಲ, ಆಕೆಯನ್ನು ಗಂಡಸು ರಕ್ಷಿಸಬೇಕು ಎನ್ನುವ ಕಲ್ಪನೆ ಪುರುಷಪ್ರಧಾನ ಚಿಂತನೆಯ ಪ್ರತೀಕವೇ ಆಗಿದೆ. ಭಾವನಾತ್ಮಕ ರಾಷ್ಟ್ರೀಯತೆಯನ್ನು 'ಅನ್ಯ'ದ ಎದುರಿಗೆ ಆತ್ಮಬಲಿದಾನಕ್ಕೆ ಸಿದ್ಧಗೊಳಿಸುವ ಹತ್ಯಾರವಾಗಿ ಮತ್ತು ತೀವ್ರವಾದಿ, ಮಿಲಿಟೆಂಟ್ ರಾಷ್ಟ್ರೀಯತೆಗೆ ಜನತೆಯನ್ನು ಸಿದ್ಧಗೊಳಿಸುವ ಹತ್ಯಾರವಾಗಿ ರಾಷ್ಟ್ರಾದ್ಯಂತ ಚಾಲ್ತಿಯಲ್ಲಿದ್ದ ಕಲ್ಪನೆಯೇ ಭಾರತಾಂಬೆಯ ಕಲ್ಪನೆ. ಇದನ್ನು ಕುವೆಂಪು ಬಲಿದಾನ ನಾಟಕದಲ್ಲಿ ತಮ್ಮದೇ ಆತ್ಮಬಲಿದಾನ ತತ್ವದ ಪ್ರತಿಪಾದನೆಗೆ ಬಳಸಿಕೊಂಡಿದ್ದಾರೆ.

ಹಾಗೆ ನೋಡಿದರೆ, ಕುವೆಂಪು ನಾಟಕಗಳ ಎಲ್ಲ ಸ್ತ್ರೀ ಪಾತ್ರಗಳೂ ಇವರ ವೈಚಾರಿಕ ಚಿಂತನೆ ಅಥವಾ ತತ್ವದರ್ಶನಕ್ಕೆ ಅಧೀನವಾದ ಪಾತ್ರಗಳೇ ಆಗಿವೆ. ಕುವೆಂಪು ಉದ್ದೇಶಿತ ತತ್ವಗಳಿಗಾಗಿ ಇವು ದುಡಿಯುತ್ತವೆಯೇ ವಿನಾ ಇವಕ್ಕೆ ಸ್ವತಂತ್ರ ವ್ಯಕ್ತಿತ್ವ ಇಲ್ಲ. ಯಮನ ಸೋಲುನ ಸಾವಿತ್ರಿ, ವಾಲ್ಮೀಕಿಯ ಭಾಗ್ಯದ ಸೀತೆ, ಮಹಾರಾತ್ರಿಯ ಯಶೋಧರೆ, ಚಂದ್ರಹಾಸದ ವಿಷಯೆ, ನನ್ನ ಗೋಪಾಲದ ತಾಯಿ, ಬೆರಳ್ಗೆ ಕೊರಳ್‌ನ ತಾಯಿ ಹೀಗೆ ಎಲ್ಲ ಪಾತ್ರಗಳೂ ಕುವೆಂಪು ತತ್ವದರ್ಶನಗಳಿಗೆ ದುಡಿಯುವ ಪಾತ್ರಗಳೇ ಆಗಿವೆ. ಆದರೆ ರೂಪಾಂತರಿತ ಬಿರುಗಾಳಿ, ರಕ್ತಾಕ್ಷಿ ನಾಟಕಗಳ ಗೌರಾಂಬೆ–ಚೆಲುವಾಂಬೆ ರುದ್ರಾಂಬೆಯರು ಮಾತ್ರ ಇವರ ಮಿಕ್ಕೆಲ್ಲ ಸ್ತ್ರೀ ಪಾತ್ರಗಳಿಗಿಂತ ಭಿನ್ನ ಪಾತ್ರಗಳು. ಈ ಮೂವರೂ ನಮ್ಮ ಸಿದ್ಧ ಮಾದರಿಗಳಲ್ಲ. ಚೆಲುವಾಂಬೆಯದು ಜಡ ಪುರುಷ ಮೌಲ್ಯಗಳ ವಿರುದ್ಧ ಈಜುವ ಸಾಹಸಿಯ ಪಾತ್ರ, ರುದ್ರಾಂಬೆ ನಿಶಿತಮತಿ ಹೋರಾಟಗಾರ್ತಿಯಂತಹ ಪಾತ್ರ. ಸ್ತ್ರೀವಾದಿ ದೃಷ್ಟಿಯಿಂದ ಈ ಎರಡೂ ಪಾತ್ರಗಳನ್ನು




ನೋಡಿದರೆ ಇವು ಅಪಾರ ಕರ್ತೃತ್ವ ಶಕ್ತಿ ಇರುವ ಪಾತ್ರಗಳಂತೆ ಕಾಣುತ್ತವೆ. ಗೌರಾಂಬೆಯದು ಕೂಡ ಕೇವಲ ಮುದ್ದಿನ ಮಗಳಂತಹ ಪಾತ್ರವಲ್ಲ. ತನ್ನದೇ ಸ್ವತಂತ್ರ ನಿರ್ಧಾರಗಳನ್ನು ತೆಗೆದುಕೊಳ್ಳಬಲ್ಲ ಪಾತ್ರ.

ರಕ್ತಾಕ್ಷಿಯಲ್ಲಿ "ಓ ಚಂಚಲತೆ, ನಿನ್ನ ಹೆಸರೇ ಸ್ತ್ರೀಯಲ್ತೆ ? ಹೇ ಜಗದೀಶ್ವರಾ ನಿನಗೆ ಕಣ್ಣಿಲ್ಲವೇ ?" ಎಂದು ಬಸವಯ್ಯ ದುಃಖದಿಂದ ಮಾತಾಡುತ್ತಾನೆ. ಇಲ್ಲಿ ಚೆಲುವಾಂಬೆ ರಾಜಕೀಯ ಪಿತೂರಿಯನ್ನು ಮಾಡಬೇಕೆಂಬ ಉದ್ದೇಶ ಇರದಿದ್ದರೂ, ಹಾದರ ಮಾಡಬೇಕೆಂಬ ಉದ್ದೇಶ ಇರದಿದ್ದರೂ ನಿಂಬಯ್ಯನ ಪ್ರೇಮಕ್ಕಾಗಿ ತನ್ನ ಗಂಡನ ಕೊಲೆಯಲ್ಲಿ ಭಾಗಿಯಾಗುತ್ತಾಳೆ. ಬಸವಯ್ಯ, ಲಿಂಗಣ್ಣರ ಕೊಲೆ ಸಂಚಿನಲ್ಲಿ ಶಾಮೀಲಾಗುತ್ತಾಳೆ. ಬಿದನೂರಿನ ರಾಜಕೀಯ ಪಲ್ಲಟಗಳು ಸಂಭವಿಸಲು ಇವಳೂ ಕಾರಣ. ಆದರೆ ಇವಳ ರಾಜಕಾರಣ ಪ್ರೇಮತತ್ವದ ರಾಜಕಾರಣವಲ್ಲ. ದಾಂಪತ್ಯದಾಚೆಗಿನ ಪ್ರೇಮದಿಂದ ರಾಜಕೀಯ ಪಲ್ಲಟಗಳಿಗೆ ಇವಳೂ ಕಾರಣಳಾಗಿರುವುದರಿಂದ ಈಕೆ ಪಾದರಿ (ಹಾದರಗಿತ್ತಿ). ಈಕೆಯನ್ನು ಪಾದರಿ ಎಂದು ಶೇಕ್ಸ್‌ಪಿಯರ್ ಹೇಳುವುದಿಲ್ಲ. ಕುವೆಂಪು ಹೇಳುತ್ತಾರೆ.

ಅದೇ ಯಮನ ಸೋಲು ನಾಟಕದ ಸಾವಿತ್ರಿಯ ಪಾತ್ರ ಹೀಗಲ್ಲ. ಆಕೆ ಗಂಡನ ಪ್ರಾಣಕ್ಕಾಗಿ ಹೋರಾಡುವವಳು. ಯಮನಲ್ಲಿ ವರ ಕೇಳುವ ಅವಕಾಶ ಸಿಕ್ಕಾಗ ತನ್ನ ಮಾವನಿಗೆ ಕಳೆದುಹೋದ ರಾಜ್ಯ ಮರಳಿ ಲಭಿಸಲಿ ಎಂದು ವರ ಕೇಳಿ ರಾಜಕೀಯ ಪಲ್ಲಟಗಳಿಗೆ ಕಾರಣಳೂ ಆಗುವವಳು. ಈಕೆಯ ಪಾತ್ರ ಸ್ವೀಕಾರಾರ್ಹ ಮಾದರಿ. ಈಕೆ ಪತಿವ್ರತೆ. ಚೆಲುವಾಂಬೆ ಪಶ್ಚಿಮದ ಮಾದರಿ, ಸಾವಿತ್ರಿ ಭಾರತೀಯ ನಾರಿ ಎಂದೇನೂ ಅಲ್ಲ. ಭಾರತೀಯ ನಾರಿಯರ ಎರಡು ಪ್ರತೀಕಗಳಂತೆಯೇ ಇಬ್ಬರೂ ಇದ್ದಾರೆ. ಭಾರತೀಯ ನಾರಿಯರ ಅಸಂಖ್ಯ ಮಾದರಿಗಳಲ್ಲಿ ಸೀತೆ, ಸಾವಿತ್ರಿ, ಯಶೋಧರೆ, ಕುಂತಿ, ಏಕಲವ್ಯನ ತಾಯಿ, ಗೋಪಾಲನ ತಾಯಿ ಮಾತ್ರವೇ ಅಲ್ಲ ರುದ್ರಾಂಬೆ, ಚೆಲುವಾಂಬೆ, ಕಾಳಿಕಾ ಮಾತೆ, ಮೃತ್ಯುದೇವತೆ ಈ ಎಲ್ಲರೂ ಇದ್ದಾರೆ.

ಸ್ತ್ರೀವಾದಿ ದೃಷ್ಟಿಯಿಂದ ಕುವೆಂಪು ನಾಟಕಗಳನ್ನು ನೋಡಿದರೆ ಇಲ್ಲಿನ ಇವರ ಸ್ತ್ರೀ ಪಾತ್ರಗಳೂ ನಿರ್ದಿಷ್ಟ ಮೌಲ್ಯ ಪ್ರಸಾರದ ಸಾಧನಗಳಂತೆ ಬಳಕೆಯಾಗಿವೆ. ಮನುಷ್ಯ ಸಂಬಂಧಗಳಿಗೆ ಇಲ್ಲಿ ಬೆಲೆ ಜಾಸ್ತಿ. ಹಾಗೆ ನೋಡಿದರೆ ಕುವೆಂಪು ನಾಟಕಗಳು ಸ್ತ್ರೀ ಪಾತ್ರಗಳಿಗೆ ಹೆಚ್ಚು ಪ್ರಾಧಾನ್ಯತೆ ಇರುವ ನಾಟಕಗಳಲ್ಲ. ಇವರ ನಾಟಕಗಳು ವಿಚಾರ ಪ್ರಧಾನ ನಾಟಕಗಳು. ಉನ್ನತ ಸ್ಥಳೀಯ ಸ್ತ್ರೀ ಮಾದರಿಗಳೂ ಬೇಕೆಂದರೆ ನಾವು ಇವರ ಕಾನೂರು ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು ಕಾದಂಬರಿಗಳಿಗೇ ಹೋಗಬೇಕು. ಪ್ರತಿಮಾ ಪಾತ್ರಗಳಲ್ಲದ ವಾಸ್ತವವಾದಿ ಪಾತ್ರಗಳನ್ನು ನಾವು ಈ ಎರಡೂ (ಸ್ತ್ರೀ ಪ್ರಧಾನ) ಕಾದಂಬರಿಗಳಲ್ಲಿ ಕಾಣಬಹುದು. ರಾಮಾಯಣ ದರ್ಶನಂನಲ್ಲಿ ಊರ್ಮಿಳಾ, ಧಾನ್ಯಮಾಲಿನಿ, ಶಬರಿ, ಮಂಥರೆ ಮೊದಲಾದವರು ಪುರಾಣ ಪ್ರತೀಕಗಳಾಗಿ ಚಿತ್ರಿತವಾಗಿರುವುದನ್ನು ಕಾಣಬಹುದು. ವಿಶೇಷವೆಂದರೆ ರಾಮಾಯಣ ದರ್ಶನಂನಲ್ಲಿ ಸೀತೆಯು ಅಗ್ನಿದಿವ್ಯ (ಅಗ್ನಿಪ್ರವೇಶ) ಮಾಡುವಾಗ ಆಕೆಯ ಜೊತೆ ಶ್ರೀರಾಮನೂ ಅಗ್ನಿಪ್ರವೇಶ ಮಾಡಿ ತನ್ನ ಶೀಲವನ್ನೂ ಸಾಬೀತುಪಡಿಸುತ್ತಾನೆ ! ಇಷ್ಟರಮಟ್ಟಿಗೆ ಕುವೆಂಪು ಇಲ್ಲಿ ಲಿಂಗನ್ಯಾಯದ ಪ್ರಶ್ನೆಯನ್ನು ಲಿಂಗಸಮಾನತೆಯ ಪ್ರತಿಪಾದನೆಯ ಮೂಲಕ ಮಂಡಿಸಿದ್ದಾರೆ. ಪ್ರಖರ ವೈಚಾರಿಕತೆ–ದಾರ್ಶನಿಕತೆಗಳನ್ನು ಪ್ರಕಟಿಸುವ ಕುವೆಂಪು ಕೃತಿಗಳಲ್ಲಿ ಸಾಮಾಜಿಕ ನ್ಯಾಯದ ಪ್ರಶ್ನೆಗಳು ಬಹು ಜೋರಾಗಿ ಕೇಳಲ್ಪಟ್ಟಿವೆ. ಅದರೊಟ್ಟಿಗೇ ಲಿಂಗನ್ಯಾಯದ ಪ್ರಶ್ನೆಗಳು ಅಷ್ಟು ಜೋರಾಗಿ ಕೇಳಲ್ಪಟ್ಟಿಲ್ಲ. ಬೆರಳ್‌ಗೆ ಕೊರಳ್, ಜಲಗಾರ, ಶೂದ್ರತಪಸ್ವಿ ಇಲ್ಲೆಲ್ಲ ಸಾಮಾಜಿಕ ನ್ಯಾಯದ ಪ್ರಶ್ನೆಗಳೇ ಮುಖ್ಯ ಆಗುತ್ತವೆ. ಮಲೆಗಳಲ್ಲಿ ಮದುಮಗಳು, ಕಾನೂರು ಹೆಗ್ಗಡಿತಿಯಂತಹ ಹೆಣ್ಣು ಪಾತ್ರಗಳೇ ಪ್ರಧಾನವಾದ ನಾಟಕಗಳನ್ನು ಇವರು ರಚಿಸಿಲ್ಲವಾಗಿ; ಇವರ ನಾಟಕಗಳಲ್ಲಿನ ಸ್ತ್ರೀ ಪಾತ್ರಗಳು ಪೋಷಕ ಪಾತ್ರಗಳು ಮಾತ್ರ ಎನ್ನದೆ ಗತ್ಯಂತರವಿಲ್ಲ. ಅಷ್ಟೇ ಅಲ್ಲ, ರಾಷ್ಟ್ರೀಯವಾದಿಗಳು ಕಟ್ಟಿಕೊಟ್ಟಿರುವ 'ಹೆಣ್ಣು' ಕಲ್ಪನೆಯನ್ನು ಕುವೆಂಪು ಒಪ್ಪುತ್ತಾರೆ ಕೂಡ. 'ಜೈ ಭಾರತ ಜನನಿಯ ತನುಜಾತೆ, ಜಯಹೇ ಕರ್ನಾಟಕ ಮಾತೆ' ಎನ್ನುವ ಕುವೆಂಪು ರಾಷ್ಟ್ರವನ್ನು ಹೆಣ್ಣು, ಮಾತೆ ಎಂದೇ ಭಾವಿಸುತ್ತಾರೆ. ಇವರ ಬಲಿದಾನ ನಾಟಕದ ತಾಯಿ ಕೂಡ ಇದೇ ರೀತಿಯ ಕಲ್ಪನೆ. ಸ್ವಾತಂತ್ರ್ಯ ಬೇಕಿರುವುದು ನಮ್ಮೆಲ್ಲರ ಸಮಷ್ಟಿ ತಾಯಿ ಆದ 'ರಾಷ್ಟ್ರಮಾತೆ'ಗೆ. ಕುವೆಂಪು ಚಿತ್ರಿಸುವ ಆಕೆಯ ಚಿತ್ರ 'ಅಬಲೆ'ಯ ಚಿತ್ರವೇ ಆಗಿದೆ. ಭಾರತ ಮಾತೆ, ಕನ್ನಡಮ್ಮ ಇವರಿಗೆ ಸ್ವಾತಂತ್ರ್ಯ ಬೇಕಾಗಿದೆ ಎಂದು ಹೇಳುವ ಕುವೆಂಪು ಕೃತಿಗಳಲ್ಲಿ ಹೆಣ್ಣಿಗೆ ಸ್ವಾತಂತ್ರ್ಯ ಬೇಕಾಗಿದೆ ಎಂಬ ದನಿ ಇಲ್ಲ. ಅಂದರೆ ಇಲ್ಲಿ ಸಾಮಾಜಿಕ ಸ್ವಾತಂತ್ರ್ಯ ಮತ್ತು ಸಾಮಾಜಿಕ ನ್ಯಾಯದ ಪ್ರಶ್ನೆಗಳು ಪ್ರಧಾನವಾದರೆ ಲಿಂಗನ್ಯಾಯ ಮತ್ತು ಹೆಣ್ಣಿನ ಸ್ವಾತಂತ್ರ್ಯದ ಪ್ರಶ್ನೆಗಳು (ಅರ್ಥಾತ್ ಲಿಂಗ ಸಮಾನತೆಯ ಪ್ರಶ್ನೆಗಳು) ಗೌಣವಾಗಿವೆ.

**ರಾಮಲಿಂಗಪ್ಪ ಟಿ. ಬೇಗೂರು**
ನಂ. ೫೧/೫೨, 'ಸಾವಿತ್ರಿ ರೆಸಿಡೆನ್ಸಿ', ಬಿ–೩, ೧ನೇ ಅಡ್ಡರಸ್ತೆ
ಯಲ್ಲಪ್ಪ ಗಾರ್ಡನ್, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫

# ಕರಗಿದ ಕೊರಗು



'ಮುಂದಿನ ಭಾಷಣಕಾರರು ಶ್ರೀಮತಿ ಅಪರ್ಣಾ ಅಯ್ಯಪ್ಪನವರು' ಸಭೆಯೆದುರು ನಿಂತಿದ್ದ ಕುಮಾರ್ ಹಿಂದಿನ ಭಾಷಣಕಾರರಿಗೆ ವಂದಿಸಿ, ಮುಂದಿನ ಭಾಷಣಕಾರರನ್ನು ಆಹ್ವಾನಿಸಿದ. 'ಸಾಗಣೆ ಮಾರಾಟಕ್ಕೀಡಾಗಿ ಲೈಂಗಿಕ ಶೋಷಣೆಗೆ ಗುರಿಯಾಗಿರುವ ಹೆಣ್ಣುಮಕ್ಕಳನ್ನು ರಕ್ಷಿಸಿ ಸಮಾಜದ ಮುಖ್ಯವಾಹಿನಿಗೆ ತರುವುದರಲ್ಲಿ ಶ್ರೀಮತಿ ಅಪರ್ಣಾ ತೊಡಗಿಕೊಂಡಿದ್ದಾರೆ. ಇದರೊಂದಿಗೆ ಅವರು ಗಮನಿಸುತ್ತಿರುವುದು 'ಸಲಿಂಗಿಗಳ ಲೈಂಗಿಕಾಸಕ್ತಿ ಮತ್ತು ಸಂಬಂಧಗಳು'. ಈ ಕುರಿತು ಇಂದು ಅಪರ್ಣಾ ನಮಗೆ ಮಾಹಿತಿ ನೀಡಲಿದ್ದಾರೆ. ಸಲಿಂಗಿ ಸಂಬಂಧಗಳು, ಅಪಾಯಗಳು, ಅಪರಾಧಗಳು ಮತ್ತು ಕಾನೂನು, ಆಪ್ತ ಸಮಾಲೋಚನೆ, ಸಹಾಯಸೌಲಭ್ಯ, ಇತ್ಯಾದಿ. ಅಪರ್ಣಾ ಅಯ್ಯಪ್ಪನವರು...'

'ವಂದನೆಗಳು ಕುಮಾರ್' ಅಪರ್ಣಾ ಆರಂಭಿಸಿದರು, 'ಲೈಂಗಿಕ ಆಸಕ್ತಿ ಮತ್ತು ಸಂಬಂಧಗಳು ಬಹಳ ಸ್ವಾಭಾವಿಕವಾದುವು. ವಯಸ್ಸಿಗೆ ಬಂದ ಮತ್ತು ಸಾಮಾಜಿಕವಾಗಿ, ಕಾನೂನಿಗೆ ಬದ್ಧವಾದ ವಿರುದ್ಧ ಲಿಂಗಿಗಳ ನಡುವಿನ ಲೈಂಗಿಕ ಸಂಬಂಧಗಳು...' ಸಭೆಯಲ್ಲಿದ್ದ ವಿದ್ಯಾರ್ಥಿಗಳು ಗುಸುಗುಸು ನಿಲ್ಲಿಸಿದರು.

ಕಾಲೇಜು ವಿದ್ಯಾರ್ಥಿಗಳಿಗೆ ಜೀವನ ಕೌಶಲ್ಯ, ಲೈಂಗಿಕ ಆರೋಗ್ಯ, ಕಾನೂನು ಬಗ್ಗೆ ತಿಳಿಸಲು ಅಪರ್ಣಾ ಅವರಲ್ಲದೆ ಇನ್ನೂ ಕೆಲವರನ್ನು ಆಹ್ವಾನಿಸಲಾಗಿತ್ತು. ಲೈಂಗಿಕ ರೋಗಗಳು, ಎಚ್.ಐ.ವಿ./ಏಡ್ಸ್, ಮಕ್ಕಳು, ಮಹಿಳೆಯರ ಸಾಗಣೆ ಹಾಗೂ ಲೈಂಗಿಕ ಶೋಷಣೆ ಕುರಿತು ಯುವಜನರಿಗೆ ಮಾಹಿತಿ ಹಂಚಿಕೆಗಾಗಿ ಸರ್ಕಾರದ ಕ್ಷೇತ್ರ ಪ್ರಚಾರಾಂದೋಲನ ಕಾರ್ಯಕ್ರಮ. ಕಾಲೇಜಿನ ಪ್ರತಿನಿಧಿಯಾಗಿ, ಭಾಷಣಕಾರರನ್ನು ಆಹ್ವಾನಿಸುವ ಜವಾಬ್ದಾರಿಯನ್ನು ಕುಮಾರ್ ನಿರ್ವಹಿಸಿದ್ದ. ಐದಾರು ಪರಿಣತರನ್ನು ಭೇಟಿಯಾಗಿದ್ದ ಕುಮಾರ್‌ಗೆ  ಅಪರ್ಣಾ ಅವರೊಂದಿಗೆ ಮಾತನಾಡಿದಾಗ ಇರಿಸುಮುರುಸು ಆಯಿತು. ಅವರಿಗೆ ಭಾಷಣ ಮಾಡಲು ಕೇಳಿಕೊಂಡ ವಿಚಾರ ಮಾರಾಟ, ಸಾಗಣೆಗೆ ಒಳಗಾದ ಹೆಣ್ಣುಮಕ್ಕಳು ವ್ಯಾಪಾರೀ ಲೈಂಗಿಕ ಶೋಷಣೆಗೆ ಈಡಾಗುವುದು ಮತ್ತವರ ಪುನರ್ವಸತಿ, ಸಂಬಂಧಿಸಿದ ಕಾನೂನು.  ಆದರೆ, ಅಪರ್ಣಾ ಅದನ್ನು ಬಿಟ್ಟು ಬೇರೆ ವಿಚಾರ ತೆಗೆದಿದ್ದರು.

'ನೋಡಿ ಕುಮಾರ್, ನೀವು ಒಪ್ತೀರೋ ಬಿಡ್ತೀರೋ, ನಮ್ಮಲ್ಲಿ ಸಾಕಷ್ಟು ಯುವಕರು ಸಲಿಂಗಿಗಳಾಗ್ತಾರೆ. ಅವರಿಗೆ ಸರಿಯಾದ ಮಾಹಿತಿ ಕೊಡಬೇಕು. ಅದೇನೂ ತಪ್ಪಲ್ಲಪ್ಪ. ಆದರೆ, ಇವರ ಸ್ವಭಾವ ಬೇರೆಯವರಿಗೆ ತೊಂದರೆ ಯಾಗಬಾರದು. ಸಲಿಂಗ ಸ್ವಭಾವದಿಂದ ಎಷ್ಟೋ ಯುವಕರು ತಾವೇನೋ ತಪ್ಪು ಮಾಡ್ತೀದ್ದೀವಿ, ಪಾಪ ಮಾಡ್ತಿದ್ದೀವಿ ಅಂತ ಒದ್ದಾಡ್ತಾ ಇರ್ತಾರೆ. ಇದು ಅಸ್ವಾಭಾವಿಕ ಅಲ್ಲ', ಅಪರ್ಣಾರ ಮಾತುಗಳನ್ನ ಅರ್ಥ ಮಾಡಿಕೊಳ್ಳಲು ಕುಮಾರ್ ಒಪ್ತಿರಲಿಲ್ಲ. 'ಅರೆ, ನೀವ್ಯಾಕೆ ಮುಖ ಸಿಂಡರಿಸಿಕೊಳ್ತೀರಾ? ನಾನೇನೋ ನಿಮಗೆ ಹೇಳಬಾರದನ್ನು ಹೇಳ್ತಿದ್ದೀನಿ ಅನ್ನೋ ತರಹ!' ಅಪರ್ಣಾ ನಕ್ಕಿದ್ದರು. ಕುಮಾರ್ ಕಸಿವಿಸಿಗೊಂಡಿದ್ದ. ಹೇಗಪ್ಪಾ ಇವರನ್ನು ಬಿಟ್ಟುಬಿಡೋದು? ಲೆಕ್ಚರರ್ ಹೇಳಿದ್ರು ಅಂತ ಬಂದಾಗಿದೆ. ಏನಾದರೂ ಹೇಳಿ ಏಳೋಣ ಅಂತ ಅಂದುಕೊಂಡು, 'ಹಾಗೇನಿಲ್ಲ ಮೇಡಂ. ನಮಗೆ ಬೇಕಾಗಿರೋ ಐದು ಭಾಷಣಕಾರರು ಸಿಕ್ಕಿದ್ದಾರೆ. ಆದರೂ, ನಿಮ್ಮನ್ನ ಒಂದು ಸಲ ನೋಡಿ ಹೋಗೋಣಾಂತ ಬಂದೆ... ನಮ್ಮ ಕಾರ್ಯಕ್ರಮ...' ಕುಮಾರ್ ತಡವರಿಸಿದ್ದ.




'ಆಯ್ತು ಬಿಡಿ. ನಾನು ಈ ವಿಷಯ ತೆಗೆದ ಕೂಡಲೇ ಕೆಲವರು ಓಡಿಹೋಗ್ತಾರೆ. ನೀವು ಪರವಾಗಿಲ್ಲ, ಇನ್ನೂ ನನ್ನೆದುರೇ ಕೂತಿದ್ದೀರಿ. ಗಟ್ಟಿಗರಪ್ಪಾ ನೀವು!' ಈಗಲೂ ನಗು. 'ನೋಡಿ, ವಾಸ್ತವಗಳಿಗೆ ಬೆನ್ನು ತಿರುಗಿಸಿ ಅಂತಹದು ಇಲ್ಲವೇ ಇಲ್ಲ ಅಂತ ಅನ್ನೋಕಾಗುತ್ತಾ? ನಿಜವಾಗಿಯೂ ಹಲವಾರು ಜನ ಒಂದ್ಸರ್ತಿನಾದ್ರೂ ತಮ್ಮದೇ ಲಿಂಗದ ವ್ಯಕ್ತಿಗಳತ್ತ ಆಕರ್ಷಿತರಾಗಿರುತ್ತಾರೆ. ಅವ್ರೆಲ್ಲಾ ಹೋಗಿ ಲೈಂಗಿಕವಾಗಿಯೇ ಸಂಬಂಧ ಇಟ್ಟುಕೊಳ್ತಾರೆ ಅಂತ ಹೇಳಕ್ಕಾಗಲ್ಲ. ವಿದೇಶಗಳಲ್ಲಾದರೆ ಲೆಸ್ಬಿಯನ್, ಗೇ ಅಂತೆಲ್ಲಾ ಗುರುತಿಸಿ ಸಾಮಾಜಿಕ ಮನ್ನಣೆ ಸಿಗುತ್ತೆ. ನಾವು ಇನ್ನೂ ಅದನ್ನೆಲ್ಲಾ ತಮಾಷೆ ಮಾಡ್ತಿದ್ದೀವಿ. ಇಲ್ಲವೇ ಥೂ ಥೂ! ಅಂತ ಮಡಿ ಮಡಿ ಮಾಡ್ಕೊಂಡಿರ್ತೀವಿ. ಇದೆಲ್ಲಾ ನಮ್ಮ ಸಂಸ್ಕೃತಿಯಲ್ಲಿ ಇಲ್ಲಪ್ಪ. ನಮ್ಮದು ಸನಾತನವಾದ ಭಾರತೀಯ ಧರ್ಮ. ನಮಗೆ ಇದು ಸರಿಯಿಲ್ಲ ಅಂತ ಸುಮ್ಮನೆ ಕಣ್ಣು ಮುಚ್ಚಿಕೊಂಡು ಕೂರ್ತೀವಿ!'

ಇವರಿಂದ ಬಿಡಿಸಿಕೊಂಡು ಹೋಗೋದು ಹೇಗೆ ಅಂತ ಕುಮಾರ್ ಯೋಚಿಸುತ್ತಿದ್ದ. 'ನಿಮಗೆ ಗೊತ್ತಾ ಕುಮಾರ್, ಇಂತಹ ಸಲಿಂಗ ವ್ಯವಹಾರಗಳು ಅಂದೂ ಇತ್ತು. ಇಂದೂ ಇದೆ. ಮುಂದೇನೂ ಇರುತ್ತೆ. ಈ ಬಗ್ಗೆ ಸರಿಯಾಗಿ ಗೊತ್ತಿಲ್ಲದ ಜನರಿಂದಲೇ ಸಮಸ್ಯೆಗಳು ಉಂಟಾಗೋದು. ಸಲಿಂಗ ಆಸಕ್ತಿ ಇರುವವರು ಮಕ್ಕಳಿಗೆ ತೊಂದರೆ ಕೊಡಬಹುದು. ಆಗ ತೊಂದರೆಗೆ ಒಳಗಾದ ಮಕ್ಕಳು ತಮಗೇನೋ ಆಗಿಹೋಗಿದೆ ಅಂತಲೋ ಅಥವಾ ತಮ್ಮದೇ ತಪ್ಪು ಎಂಬ ಕೀಳರಿಮೆಗೀಡಾಗಬಹುದು. ಇಲ್ಲಿ ಬೇಕಿರುವುದು ಆಪ್ತಸಮಾಲೋಚನೆ, ಚಿಕಿತ್ಸೆ ಮತ್ತು ನೆರವು.'

'ಹೌದಲ್ಲವೆ' ಎಂಬ ಅಭಿಪ್ರಾಯ ಕುಮಾರ್ ಮನಸ್ಸಿನಲ್ಲಿ ಮೂಡಿತು.

**ವಾಸುದೇವ ಶರ್ಮಾ**

ಏಳಬೇಕಿದ್ದವನು, ಸ್ವಲ್ಪ ಮುಂದಕ್ಕೆ ಸರಿದು ಕುಳಿತ, ಮೈಯೆಲ್ಲಾ ಕಿವಿಯಾಯಿತೇನೋ ಎಂಬಂತೆ. 'ನೋಡಿ ಕುಮಾರ್, ನಿಮಗೆ ಈ ವಿಚಾರದ ಬಗ್ಗೆ ಮೊದಲು

ಅರ್ಥ ಆಗಬೇಕು. ಭಾಷಣಕ್ಕೆ ಕರೆಯಲು ಬಂದಿದ್ದೀರಿ. ಈ ವಿಷಯದ ಬಗ್ಗೆ ತಿಳೀದೆ, ಪ್ರಾಮುಖ್ಯತೆ ತಿಳೀದೆ ಹೋಗಬಾರದು. ಹೋಗಲಿ ಬಿಡಿ. ನನ್ನ ಭಾಷಣಕ್ಕೆ ಕರೆಯಬೇಡಿ. ನೀವೇ ಹೇಳಿದಿರಲ್ಲ...!' 'ಹಾಗೇನಿಲ್ಲ ಮೇಡಂ' ಸ್ವಲ್ಪ ಸಂಕೋಚದಿಂದಲೇ ಕುಮಾರ್ ಹೇಳಿದ. 'ನೀವು ಹೇಳುವ ವಿಚಾರ ಸ್ವಲ್ಪ ಭಿನ್ನವಾಗಿದೆ. ನಮ್ಮ ಕಾಲೇಜಿನ ಹುಡುಗರಿಗೆ ಹಿಡಿಸತ್ತೋ ಇಲ್ಲವೋ...', '...ಅಂತ ನನ್ನನ್ನ ಕರೆಯೋದೋ ಬಿಡೋದೋ ಅಂತಿದ್ದೋರು, ಈಗ ಕರೆಯೋದು ಹೇಗೆ ಅಂತ... ಯೋಚನೆ ?'

ಮುಂದಿನ ಮಾತಿನಲ್ಲಿ ಪ್ರಕರಣಗಳನ್ನು ಎದುರಿಗಿಟ್ಟುಕೊಂಡು ಸಲಿಂಗಿಗಳ ಮನಃಸ್ಥಿತಿ ಹೇಗಿರುತ್ತೆ, ಯಾಕೆ ಅವರು ಸಲಿಂಗಿಗಳಾಗುತ್ತಾರೆ, ಸಲಿಂಗಿಗಳ ಆಕ್ರಮಣಕ್ಕೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಶಕ್ತಿಹೀನರಾಗಿರುವವರು ಹೇಗೆ ಬಲಿಯಾಗುತ್ತಾರೆ, ಕೆಲವೊಮ್ಮೆ ಸಮ-ವಯಸ್ಕರು, ಸಮ-ಮನಸ್ಕರಾಗಿ ಸಲಿಂಗಿಗಳಾಗುತ್ತಾರೆ, ಹಲವಾರು ಬಾರಿ ಚಿಕ್ಕ ಮಕ್ಕಳನ್ನು ದೊಡ್ಡವರು ಆಕ್ರಮಿಸಿದಾಗ ಸಹಾಯವಿಲ್ಲದೆ ಮಕ್ಕಳು ಮುದುಡುತ್ತಾರೆ, ಮಾನಸಿಕವಾಗಿ ಆಘಾತ ಎದುರಿಸುತ್ತಾರೆ, ಅವರಿಗೆ ಸಹಾಯವನ್ನು ನಮ್ಮ ಸಮಾಜ ಕೊಡದೆ ಇರುವುದರಿಂದ ಏನೆಲ್ಲಾ ತೊಂದರೆಗಳು ಆಗ್ತಾ ಇದೆ ಎಂದೆಲ್ಲಾ ಅಪರ್ಣಾ ವಿವರಿಸಿದರು. ಕುಮಾರ್ ಪ್ರಶ್ನೆಗಳನ್ನು ಕೇಳುತ್ತಾ ಅರ್ಥ ಮಾಡಿಕೊಳ್ಳುತ್ತಿದ್ದ. ಈ ವಿಚಾರ ಬೇಡ, ಇವರೇ ಬೇಡ ಎಂದು ಓಡಬೇಕೆಂದಿದ್ದವನನ್ನೇ ಕಟ್ಟಿಹಾಕಿ ಮನಸ್ಸಿಗೆ ತಟ್ಟುವಂತೆ ವಿವರಿಸಿದರಲ್ಲಾ, ಇವರು ಖಂಡಿತಾ ಸಭೆಗೆ ಬೇಕೆಂದುಕೊಂಡ. ಅಪರ್ಣಾ ಹುಸಿಮುನಿಸು ತೋರಿಸುತ್ತಲೇ ಹೇಳಿದರು, 'ಬರ್ತೀನಿ, ಈ ವಿಚಾರ ಸುಲಭವಾಗಿ ಒಪ್ಪಲಿಕ್ಕೆ ಆಗಲ್ಲ. ನಿಮ್ಮ ಕಾಲೇಜಿನ ವಿದ್ಯಾರ್ಥಿಗಳು ಎಂತಹ ಪ್ರತಿಕ್ರಿಯೆ ಕೊಡ್ತಾರೋ ನೋಡೋಣ'.

'ಈಗ ನೋಡಿ, ನಿಮ್ಮ ಮನೆಯಲ್ಲಿ ಹತ್ತು ಹನ್ನೆರಡು ವರ್ಷದ ಮಗುವಿರುತ್ತೆ ಅಂತ ಅಂದುಕೊಳ್ಳೋಣ. ಅಂತಹ ವಯಸ್ಸಿನಲ್ಲಿ ಎಲ್ಲರೂ ಆ ಮಕ್ಕಳ ಮೇಲೆ ವಿವಿಧ ಕಾರಣಗಳಿಂದ ಕಣ್ಣಿಟ್ಟಿರುತ್ತಾರೆ'. ಅಪರ್ಣಾ ತಮ್ಮ ಭಾಷಣದಲ್ಲಿ ಪ್ರಕರಣವೊಂದನ್ನು ವಿವರಿಸುತ್ತಿದ್ದರು. ಇಡೀ ಸಭೆ ಆಸಕ್ತಿಯಿಂದ ಕೇಳುತ್ತಿತ್ತು.

'ಹೌದಲ್ವಾ. ನನಗಾಗ ಹದಿಮೂರು ವರುಷ.' ಕುಮಾರ್‌ನ ಮನಸ್ಸಿನಲ್ಲಿ ನೆನಪುಗಳ ಸುರಳಿ ಬಿಚ್ಚತೊಡಗಿತು. 'ಮನೆಯಲ್ಲಿ ಅಪ್ಪ ಅಮ್ಮ ಅಲ್ಲದೆ ಅಜ್ಜ ಮತ್ತು ಸೋದರತ್ತೆ ಇದ್ದರು. ಅಪ್ಪನ ದೂರದ ಸಂಬಂಧಿ ಜಗದೀಶ್ ಆಗಾಗ್ಗೆ ಬರುತ್ತಿದ್ದರು. ಕೆಲವೊಮ್ಮೆ ಬಂದವರು ಐದಾರು ದಿನ ಇರುವುದೂ ಇತ್ತು. ಜಗದೀಶ್ ಮಾಮ ಬಹಳ ತಮಾಷೆ. ನಮ್ಮನ್ನೆಲ್ಲಾ ಹೊರಗಡೆ ಸುತ್ತಾಡಿಸ್ತಿದ್ರು. ಅಪ್ಪ ಕೊಡಿಸದ ಚಾಕೊಲೇಟ್, ಬಿಸ್ಕತ್ ಕೊಡಿಸೋದೂ ಉಂಟು. ನಾನು ಕೆಂಪಕೆಂಪಗೆ ಚೆನ್ನಾಗಿದ್ದೆ. ಎಲ್ಲರ ಥರಾನೇ ಜಗದೀಶ್ ಮಾಮ ಕೂಡಾ ರೇಗಿಸೋದು, ಆಡಿಸೋದು ಇತ್ತು. ನನಗೇನೂ ಅನ್ನಿಸ್ತಿರಲಿಲ್ಲ. ಒಂದ್ಸರ್ತಿ ನನಗೆ ಪರೀಕ್ಷೆ ಹತ್ತಿರವಾಗ್ತಿದ್ದಾಗ, ಮನೆಯವರೆಲ್ಲಾ ಯಾವುದೋ ಪೂಜೆಗೆ ನಮ್ಮೂರಿಗೆ ಹೋಗಬೇಕಾಗಿತ್ತು. ಅಪ್ಪನ ಸಲಹೆಯಂತೆ ನನ್ನೊತೆ ಮನೆಯಲ್ಲಿ ಜಗದೀಶ್ ಮಾಮ ಇರುವುದು ಅಂತಾಗಿತ್ತು. ಅವರೂ ಒಪ್ಪಿದ್ದರು. ಜಗದೀಶ್ ಮಾಮ ಒಳ್ಳೆ ಅಡುಗೆ ಮಾಡಿದರು. ನಾವಿಬ್ಬರೂ ರಾತ್ರಿ ಊಟ ಆದ ಮೇಲೆ ಹೊರಗಡೆ ಗಾಳಿ ಸೇವನೆಗೆ ಹೋಗಿ ಬಂದು ಮಲಗಿದೆವು.'

'ಮಕ್ಕಳನ್ನು ಲೈಂಗಿಕವಾಗಿ ಹಿಂಸಿಸಿ, ಶೋಷಣೆ ಮಾಡುವವರು ಸಾಮಾನ್ಯವಾಗಿ ತಿಳಿದವರು, ಹತ್ತಿರದವರೇ ಆಗಿರ್ತಾರೆ. ಅದು ಮನೆಯ ಬಳಗದವರು, ಸ್ನೇಹಿತರು, ಶಿಕ್ಷಕವರ್ಗ, ಮನೆಯ ಕೆಲಸಗಳಿಗೆ ಬರುವವರು, ಇತ್ಯಾದಿ. ಹೀಗಾದಾಗ, ತಮ್ಮ ಮೇಲೆ ಆಗ್ತಿರೋದು ಲೈಂಗಿಕ ದಾಳಿಯೋ ಅಥವಾ ಅದೇ ನಿಜವಾದ ಪ್ರೀತಿಯೋ ಅಥವಾ ಇನ್ನೇನೋ ಮಕ್ಕಳಿಗೆ ಗೊತ್ತಾಗಲ್ಲ. ಅವರಿಗೆ ಗೊಂದಲ ಆಗುತ್ತೆ. ಇದರಿಂದ ಹೊರಗೆ ಬರುವುದು ಹೇಗೆ, ಯಾರ ಹತ್ತಿರ ಹೇಳಿಕೊಳ್ಳೋದು, ಗೊತ್ತಾಗಲ್ಲ. ಇದು ತನ್ನ ತಪ್ಪೋ ಅಥವಾ ಬೇರೆಯವರ ತಪ್ಪೋ ಊಹೂ, ಗೊತ್ತಾಗಲ್ಲ. ಇಂತಹ ಮಕ್ಕಳಿಗೆ ತುರ್ತಾಗಿ ಬೇಕಿರುವುದು ಸಹಾಯಹಸ್ತ. ಕೇಳುವ ಕಿವಿ. ಅರ್ಥ ಮಾಡಿಕೊಳ್ಳುವಂತಹ ಮನಸ್ಸು ...' ಅಪರ್ಣಾ ಅವರಿಂದ ವಿವರಣೆ ಸಾಗಿತ್ತು.




ಕುಮಾರ್‌ನ ನೆನಪಿನ ಎರಡನೆ ಕಂತು ಬಿಚ್ಚಿಕೊಂಡಿತು. 'ಮೂರು ದಿನ ಕಳೆದ ಮೇಲೆ ನಾನು ಶಾಲೆಯಿಂದ ಬರುವ ಹೊತ್ತಿಗೆ ಅಪ್ಪ ಅಮ್ಮ ತಾತ ಮತ್ತು ತಂಗಿ ಊರಿಂದ ಬಂದರು. ಜಗದೀಶ್ ಮಾಮ ಹೊರಟುಹೋಗಿದ್ದರು. ಅವರಿಗೆ ನಾನು ಏನೋ ಹೇಳಬೇಕಿತ್ತು. ಆದರೆ ಅವರು ಸಿಗಲೇ ಇಲ್ಲ. ಮನೆಗೆ ಬಂದವನು ನಾನು ಒಬ್ಬನೇ ಮಹಡಿಯ ಮೇಲಿದ್ದೆ. ಸಂಜೆ ಬಹಳ ಹೊತ್ತಾದ ಮೇಲೆ ಅಮ್ಮ ಹುಡುಕಿಕೊಂಡು ಬಂದಳು. 'ಏನೋ ಒಬ್ಬನೇ ಕೂತಿದ್ದೀಯಾ ? ನಾವೆಲ್ಲಾ ಬಂದಿದ್ದು ಬೇಜಾರಾಯಿತೇನೋ ? ಜಗದೀಶ್ ಮಾಮನ ಜೊತೆ ಹೇಗಿತ್ತು ? ಅವನಿಲ್ಲ ಅಂತ ಯೋಚನೇನೋ ?' ಅಮ್ಮ ಏನು ಕೇಳ್ತಿದ್ದಾಳೆ ಅಂತ ತಿಳೀಲಿಲ್ಲ. ಆದ್ರೆ ಜಗದೀಶ್ ಮಾಮನಿಗೆ ಹೇಳುವ ಬದಲು ಅಮ್ಮನಿಗೆ ಹೇಳಿದರೆ ಹೇಗೆ ? ಬೈದುಬಿಟ್ಟರೆ, ಮಾಮ ಅಷ್ಟೊಳ್ಳೆಯವರು ಅಂದ್ರೆ ? ಹೋಗಲಿ ಅಪ್ಪಂಗೆ ಹೇಳಿದ್ರೆ ? ಹೊಡೆದುಬಿಟ್ರೆ ? ಯಾರಿಗೆ ಹೇಳುವುದು ಗೊತ್ತಾಗದೇ ಅಳು ಬರುವಂತಾಗಿತ್ತು. ನನ್ನ ಮಾತು ಯಾರು ಕೇಳ್ತಾರೆ. ಒಂದಿನ ಯಾರೋ ಸೈಕಲ್ ಮೇಲೆ ಬಂದು ಲಂಗ ಎಳೆದರು ಅಂತ ನನ್ನ ತಂಗಿ ಅಳ್ತಿದ್ದಾಗ ಅಪ್ಪ ರಂಪ ಮಾಡಿದ್ದರು. ಇನ್ಮೇಲೆ ಇವಳು ಶಾಲೆಗೆ ಹೋಗುವುದೇ ಬೇಡ. ಮನೇಲೆ ಜೋಪಾನ ಮಾಡಬೇಕು ಅಂತೆಲ್ಲಾ ಕೂಗಾಡಿ, ತಂಗಿ ಓಡಾಡೋ ದಾರೀಲೆಲ್ಲಾ ಸುತ್ತಾಡಿ, ಸೈಕಲ್ ಮೇಲೆ ಬರೋವ್ನ ಹುಡುಕಾಡಿಬಿಟ್ಟರು. ತಂಗೀನ ಸರಿಯಾಗಿ ನೋಡಿಕೊಳ್ಳೋಕೆ ಬರದ ಮೂರ್ಖ, ಮಖೇಡಿ ಅಂತೆಲ್ಲಾ ಬೈದಿದ್ದರು. ಇನ್ನು ಇದನ್ನು ಹೇಳಿದರೆ ನನಗೇ ಪೂಜೆ ಮಾಡಿಬಿಡ್ತಾರಷ್ಟೆ'.

'ಆಗ ತನಗೆ ಸಹಾಯ ಮಾಡಿದವರು ಯಾರು ?' ಕುಮಾರ್ ತನ್ನನ್ನು ತಾನೇ ಪ್ರಶ್ನೆ ಮಾಡಿಕೊಳ್ಳುತ್ತಿದ್ದ, 'ಅಪರ್ಣಾ ಅಂತಹವರ ಸಹಾಯ ಇರಲಿಲ್ಲ. ಅಮ್ಮ ಅಪ್ಪ ಮತ್ತು ಅಜ್ಜ ಹೇಳುತ್ತಿದ್ದ ಹಾಗೆ ಗಂಡುಮಕ್ಕಳು ಗುಂಡುಕಲ್ಲಿನಂತಿರಬೇಕು. ಯಾವುದಾವುದಕ್ಕೋ ಹೆದರಿ ಪುಕ್ಕರಾಗಬಾರದು. ತಾಳಿಕೊಳ್ಳಬೇಕು. ಹೌದಲ್ವ, ಅದನ್ನೆಲ್ಲಾ ತಾಳಿಕೊಂಡೇ ಬಂದಿರುವುದು ಇಷ್ಟು ದಿವಸ. ಆದರೂ, ಅಪರ್ಣಾ ಅವರ ಮಾತಿನಿಂದಾಗಿ ಇದೆಲ್ಲಾ ನೆನಪಾಗಿತ್ತು. ಅವರ ಮುಂದೆ ಹೇಳಿಬಿಡಲೇ ಎಂದುಕೊಂಡವನು ಕಷ್ಟಪಟ್ಟು ತಡೆದುಕೊಂಡಿದ್ದೆನಲ್ಲಾ' ಎಂದುಕೊಂಡ.

'ಆಯಿತು. ಇಷ್ಟು ನಿಮಗೆ ತಿಳಿದಿರಲಿ. ಸಲಿಂಗಿಗಳು ಕಾಮಿಸುವುದು ಸ್ವಾಭಾವಿಕ. ಸಮ-ಮನಸ್ಕರು, ಸಮ-ವಯಸ್ಕರ ನಡುವೆ ಆರೋಗ್ಯಕರವಾದ ವಾತಾವರಣದಲ್ಲಿ ಪರಸ್ಪರ ನಂಬುಗೆ ಮತ್ತು ವಿಶ್ವಾಸವಿದ್ದಲ್ಲಿ ವಿರೋಧವೇಕೆ ? ಆದರೆ, ಚಿಕ್ಕ ವಯಸ್ಸಿನವರ ಮೇಲೆ ದಬ್ಬಾಳಿಕೆ ಮಾಡುವುದು, ಅಥವಾ ಸುಳ್ಳು ಪ್ರೀತಿ ತೋರುವುದು, ಗುಪ್ತವಾಗಿ ಸಂಬಂಧ ಹೊಂದಿರುವುದು ತಪ್ಪು. ಅದು ಕೇವಲ ಸಲಿಂಗಿಗಳೇ ಆಗಬೇಕೆಂದೇನೂ ಇಲ್ಲ. ಯಾವುದೇ ವಯಸ್ಕರು ಮಕ್ಕಳನ್ನು-ಗಂಡಾಗಲೀ ಹೆಣ್ಣಾಗಲೀ ಲೈಂಗಿಕವಾಗಿ ಶೋಷಿಸಿದರೆ ಅದನ್ನು ವಿರೋಧಿಸಬೇಕು. ಇಂತಹ ತೊಂದರೆಗೆ ಗುರಿಯಾದವರಿಗೆ ಆಪ್ತ ಸಮಾಲೋಚನೆ, ನೆರವು ನೀಡಿ ರಕ್ಷಿಸಬೇಕು. ಕಾನೂನಿನ ರಕ್ಷಣೆ ಪಡೆಯಬೇಕು. ಇದು ಎಲ್ಲ ವಯಸ್ಕರ ಜವಾಬ್ದಾರಿ.' ಭಾಷಣ ಮುಗಿಯುವ ಹಂತಕ್ಕೆ ಬಂದಿತ್ತು. 'ಏನಾದರೂ ಪ್ರಶ್ನೆಗಳು ?'

'ಸಲಿಂಗಿಗಳ ನಡುವೆ ಗುಹ್ಯ ರೋಗಗಳು, ಎಚ್. ಐ. ವಿ. ಬರಬಹುದಾ ಮೇಡಂ?' ಒಬ್ಬರ ಪ್ರಶ್ನೆ. ಬೆಳಗ್ಗಿನಿಂದಲೂ ಈ ಗಂಭೀರವಾದ ಆದರೆ, ಬಹಳ ಆವಶ್ಯಕವಾದ ವಿಚಾರದ ಬಗ್ಗೆ ಭಾಷಣಗಳನ್ನು ಕೇಳಿದ್ದರೂ, ಅಲ್ಲಲ್ಲಿ ಒಂದಷ್ಟು ವಿದ್ಯಾರ್ಥಿಗಳು ವ್ಯಂಗ್ಯವಾಗಿ ನಕ್ಕರು. 'ಬಹಳ ಸ್ಪಷ್ಟವಾದ ಪ್ರಶ್ನೆ. ಈ ಪ್ರಶ್ನೆ ಕೇಳುವ ಧೈರ್ಯ ಮಾಡಿರುವ ನಿಮಗೆ ನನ್ನ ಅಭಿನಂದನೆಗಳು.' ಸಭೆಯಲ್ಲಿ ಕರತಾಡನ. ಅಪರ್ಣಾರ ಸಮಯಪ್ರಜ್ಞೆಗೆ ಕುಮಾರ್ ಮೆಚ್ಚಿಕೊಂಡ. 'ಖಂಡಿತಾ ಗುಹ್ಯ ರೋಗಗಳು ಬರುವ ಅಪಾಯವಿದೆ. ಆದರೆ, ಎಚ್ಚರಿಕೆ ವಹಿಸಿದರೆ ಮತ್ತು ಸುರಕ್ಷಿತ ಲೈಂಗಿಕ ಸಂಪರ್ಕ ಹೊಂದಿದ್ದರೆ ರೋಗಗಳ ಅಪಾಯವಿಲ್ಲ. ಆದರೆ, ಈ ಪ್ರಯತ್ನ ಮಕ್ಕಳ ಮೇಲೆ ಮಾಡಿದರೆ ಅದು ಅಪರಾಧ'.

'ಮೇಡಂ, ಮಕ್ಕಳ ಮೇಲೆ ಸಲಿಂಗ ಕಾಮ ತೋರಿಸುತ್ತಾರಲ್ಲ, ಅವರಿಗೆ ಶಿಕ್ಷೆ ಕೊಡಬೇಕೋ ಅಥವಾ ಅವರಿಗೂ ಏನಾದರೂ ಚಿಕಿತ್ಸೆ, ಅಂದರೆ ಮಾನಸಿಕ ಚಿಕಿತ್ಸೆ,

ಆಪ್ತಸಮಾಲೋಚನೆ ಕೊಡಿಸಬೇಕೋ?' ಪ್ರಶ್ನೆ ಸ್ವಲ್ಪ ಗಂಭೀರವಾಯಿತೋ ಅಥವಾ ಎಲ್ಲರೂ ಅಪರ್ಣಾ ಅವರು ಈ ಹಿಂದಿನ ಪ್ರಶ್ನೆ ಕೇಳಿದವರನ್ನು ಶ್ಲಾಘಿಸಿದ್ದಕ್ಕಾಗಿ ಅದೇ ಭಾವನೆಯಲ್ಲಿದ್ದರೋ ಅಥವಾ ಕುಮಾರ್‌ನಂತೆಯೇ ಅನೇಕರು ಚಿಂತಿಸುತ್ತಿದ್ದರೋ ತಿಳಿಯದು. ಸಭೆ ಗಂಭೀರವಾಗಿತ್ತು. 'ಒಳ್ಳೆಯ ಪ್ರಶ್ನೆ. ನಮ್ಮ ದೇಶದಲ್ಲಿ ನಡೆಸಿರುವ ಅಧ್ಯಯನಗಳ ಪ್ರಕಾರ, ಸುಮಾರು ಐದು ಜನರನ್ನು ಸಂಪರ್ಕಿಸಿ ಈ ವಿಚಾರಗಳ ಬಗ್ಗೆ ಕೇಳಿದಾಗ ಮೂರಕ್ಕೂ ಹೆಚ್ಚಿನವರು ಹೇಳಿರುವುದು ತಾವು ಮಕ್ಕಳಾಗಿದ್ದಾಗ ತಮ್ಮ ಮೇಲೆ ಒಂದಲ್ಲಾ ಒಂದು ರೀತಿಯ ಲೈಂಗಿಕ ಶೋಷಣೆ ಆಗಿದೆ, ಅದರಲ್ಲೂ ತಮ್ಮನ್ನು ಲೈಂಗಿಕವಾಗಿ ಶೋಷಿಸಿರುವವರು ತಮ್ಮ ಹತ್ತಿರದವರು ಅಂತ ಹೇಳಿದ್ದಾರೆ.' ಅಪರ್ಣಾ ಹೇಳಿದಾಗ ಇಡೀ ಸಭೆ 'ಓ' ಎಂದಿತು. ನೀರವತೆ ಏರ್ಪಟ್ಟಿತ್ತು.

'ಏನು ಮಾಡೋಣ? ಮಕ್ಕಳ ಮೇಲೆ ಹೀಗೆ ಲೈಂಗಿಕವಾಗಿ ವರ್ತಿಸಿದವರಿಗೆ ಖಂಡಿತಾ ಶಿಕ್ಷೆ ಕೊಡೋಣವೋ ಅಥವಾ ಬಿಟ್ಟು ಬಿಡೋಣವೋ?' ಬೇರೆ ಯಾರಾದರೂ ಉತ್ತರ ಕೊಡುವ ಮೊದಲೇ ಕುಮಾರ್ ಕೂಗಿಯೇಬಿಟ್ಟ 'ಶಿಕ್ಷೆ ಕೊಡಲೇಬೇಕು'. ವೇದಿಕೆಯಿಂದಲೇ ಅಪರ್ಣಾ ಕುಮಾರ್ ಕಡೆ ನೋಡುತ್ತಲೇ ಮಾತು ಮುಂದುವರಿಸಿದರು. ಅಷ್ಟು ಹೊತ್ತಿಗೆ ಸಾಕಷ್ಟು ದನಿಗಳು ಕುಮಾರ್ ಹೇಳಿದ್ದನ್ನೇ ಪುನರುಚ್ಚರಿಸುತ್ತಿದ್ದರು. 'ಹಾ ಹಾ! ಶಿಕ್ಷೆ ಕೊಡೋಣವಂತೆ. ನೋಡಿ. ನಮ್ಮಲ್ಲಿ ಇಂತಹ ಅಪರಾಧಗಳು ನಡೆದಾಗ ಬಹಳಷ್ಟು ಜನ ಪೊಲೀಸರಿಗೆ ದೂರು ಕೊಡಲ್ಲ. ಪ್ರಕರಣ ದಾಖಲಾಗುವುದಿಲ್ಲ. ನ್ಯಾಯಾಲಯ ಮುಟ್ಟುವುದಿಲ್ಲ. ಮೊದಲನೆಯದಾಗಿ, ಪೊಲೀಸರಿಗೆ ದೂರು ಕೊಡಬೇಕು ಅಂತ ಅನೇಕರಿಗೆ ತಿಳಿದಿರುವುದಿಲ್ಲ. ಅಪ್ಪ ಅಮ್ಮನಿಗೇ ಹೇಳಲಿಕ್ಕೆ ಹಿಂಜರಿಯುವವರು ಪೊಲೀಸರ ತನಕ ಹೋಗ್ತಾರಾ? ಜೊತೆಗೇ ನಾನಾಗಲೇ ಹೇಳಿದ ಹಾಗೆ ಯಾರು ಮಕ್ಕಳಿಗೆ ಚೆನ್ನಾಗಿ ಪರಿಚಯ ಇರ್ತಾರೋ ಅಂತಹವರೇ ಹೀಗೆ ಲೈಂಗಿಕವಾಗಿ ಬಳಸಿಕೊಂಡು ಯಾರಿಗೂ ಹೇಳಬೇಡ ಇದು ನಮ್ಮಿಬ್ಬರ ನಡುವಿನ ರಹಸ್ಯ ಅಂತೆಲ್ಲಾ ಹೇಳಿರಬಹುದು. ಹೀಗೆ ಲೈಂಗಿಕ ಬಳಕೆಗೆ ಗುರಿಯಾದವರು ಹುಡುಗರಾದರಂತೂ ಯಾರೂ ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲ. ಅದಕ್ಕೆ ನಮ್ಮಲ್ಲಿ ದೂರಿನ ಪ್ರಮಾಣವೂ ಕಡಿಮೆ. ಶಿಕ್ಷೆಯಂತೂ ಆಗಿಯೇ ಇಲ್ಲವೆನ್ನಬೇಕು. ಎಷ್ಟೋ ಬಾರಿ ದೊಡ್ಡವರೇ ಸೇರಿಕೊಂಡು ಮಗು ಸುಳ್ಳು ಹೇಳುತ್ತಿದೆ ಅಂತ ಹೇಳಿ ಅಪರಾಧಿಗಳನ್ನ ರಕ್ಷಿಸಿಬಿಡ್ತಾರೆ.

'ಮೊದಲು ನಾವು ಗಮನಿಸಬೇಕಾಗಿರುವುದು, ಲೈಂಗಿಕವಾಗಿ ಶೋಷಣೆಗೆ ಒಳಗಾಗಿರುವ ಮಗುವನ್ನ. ಮಗುವಿಗೆ ಧೈರ್ಯ ನೀಡಬೇಕು. ಈಗ ತರಬೇತಿ ಹೊಂದಿರುವ ಆಪ್ತ ಸಹಾಯಕರು ಇದ್ದಾರೆ. ಮಕ್ಕಳಿಗೆ ಮಾನಸಿಕವಾಗಿ ಬೆಂಬಲ ನೀಡುವ ಆಪ್ತ ಸಮಾಲೋಚನೆ ನೀಡ್ತಾರೆ. ಮನೆಯವರು, ಹತ್ತಿರದವರು ಮಗುವಿಗೆ ಬೆಂಬಲವಾಗಿ ನಿಲ್ಲಬೇಕು. ನಿನ್ನನ್ನ ಬಿಟ್ಟುಬಿಡುವುದಿಲ್ಲ, ನಿನಗೆ ಹೊಡೆಯುವುದಿಲ್ಲ, ಸಹಾಯ ಮಾಡಲು ನಾವಿದ್ದೇವೆ, ನಿನ್ನದೇನೂ ತಪ್ಪಿಲ್ಲ, ನೀನೇನು ಕೆಟ್ಟುಹೋಗಿಲ್ಲ ಅಥವಾ ನಿನ್ನ ಬದುಕು ಹಾಳಾಗುವುದಿಲ್ಲ...'

'ಏನೂ ಆಗಲ್ಲ ಬಿಡೋ. ಇದನ್ನೆಲ್ಲಾ ತಲೇಗೆ ಹಚ್ಚಿಕೊಳ್ಳಬೇಡ'. ಪ್ರಾಯಶಃ ಅವತ್ತು ಗೋವಿಂದಪ್ಪ ಮೇಷ್ಟ್ರು ಹೇಳದೇ ಇದ್ದಿದ್ದರೆ ನಾನೇನಾಗ್ತಾ ಇದ್ನೋ ಗೊತ್ತಿಲ್ಲ. 'ಯಾಕೋ ಮಂಕಾಗಿದ್ದೀಯಾ ಏನಾಯ್ತು' ಅಂತ ಮೇಷ್ಟ್ರು ಕೇಳೋ ಹೊತ್ತಿಗೆ ಇದೆಲ್ಲಾ ಆಗಿ ಹದಿನೈದಿಪ್ಪತ್ತು ದಿನ ಆಗಿ ಹೋಗಿತ್ತು. ಈ ಮಧ್ಯೆ ಒಂದು ಸರ್ತಿ ಬಂದು ಹೋದ ಜಗದೀಶ್ ಮಾಮ ನನ್ನ ಸರಿಯಾಗಿ ಮಾತನಾಡಿಸಲೇ ಇಲ್ಲ. ಬಂದವರು ಅಪ್ಪ ಅಮ್ಮನ ಹತ್ತಿರ ಮಾತನಾಡಿ ಏನೂ ಆಗಿಯೇ ಇಲ್ಲದವರಂತೆ ಹೊರಟುಹೋಗಿದ್ದರು. ತರಗತೀಲಿ ಪಾಠ ಮಾಡ್ತಿದ್ರೆ ನಾನೆಲ್ಲೋ ಏನೋ ಯೋಚನೆ ಮಾಡ್ತಿದ್ದೆ. ಗೆಳೆಯರು ಆಟಕ್ಕೆ ಕರೆದರೆ ಮನೆ ಕಡೆ ಹೋಗ್ತಿದ್ದೆ. ಒಂತರಾ ಆಗ್ತಿತ್ತು. ಯಾರಿಗಾದರೂ ಹೇಳಬೇಕು. ಅಳಬೇಕು ಅಂತ ಅನ್ನಿಸ್ತಿತ್ತು. ಕ್ಲಾಸ್ ಟೆಸ್ಟ್‌ನಲ್ಲಿ ಸರಿಯಾಗಿ ಬರೆಯಕ್ಕೆ ಆಗಲಿಲ್ಲ. ಒಂದಿನ ಗೋವಿಂದಪ್ಪ ಮೇಷ್ಟ್ರು ಹತ್ತಿರ ಕರೆದು ನಿಧಾನವಾಗಿ ಮಾತನಾಡಿಸಿದಾಗ ಎಲ್ಲ ಹೇಳಿಬಿಟ್ಟಿದ್ದೆ. 'ಆಯ್ತು ಬಿಡು. ಈಗ ಪರೀಕ್ಷೆಗೆ ಓದಿಕೋ. ಸಾಯಂಕಾಲ ಮನೆಗೆ ಹೋಗೋದಿಕ್ಕೆ ಮೊದಲು ಹನುಮಂತನ ಗುಡಿಗೆ ಹೋಗಿ ನಮಸ್ಕಾರ ಮಾಡಿ ಎಲ್ಲ ಮರೆತುಬಿಡು. ಪರೀಕ್ಷೆ ಆದ ಮೇಲೆ ಎಲ್ಲಾದರೂ ಹೋಗಿ ಬಾ. ಈಗ ಹೋಗಿ ಫ್ರೆಂಡ್ಸ್ ಜೊತೆ ಆಟ ಆಡು.' ಹೌದಲ್ವ ಮೇಷ್ಟ್ರು ಅವತ್ತು ನನಗೆ ಕೊಟ್ಟಿದ್ದು ಧೈರ್ಯ ಅಲ್ಲವಾ, ಆದರೆ ನನಗೆ ಬೇಡವೆಂದರೂ ಈ ಯೋಚನೆಗಳು ಆಗಾಗ್ಗೆ ಮನಸ್ಸಿನ ಮೂಲೆಯಲ್ಲಿ ಗಟ್ಟಿಯಾಗಿ ಕುದಿಯುತ್ತಿದೆಯಲ್ಲವೆ? ಕುಮಾರ್‌ನ ಯೋಚನಾ ಸರಣಿ ಮುಂದುವರಿದಿತ್ತು.

'ಈಗ ನೋಡಿ ಅಪರಾಧ ಮಾಡಿದವರನ್ನು ಒಂದು ಕಡೆ ಶಿಕ್ಷಿಸಬೇಕು ಅನ್ನುವುದು ಸರಿ. ಇನ್ನೊಂದು ರೀತಿಯಲ್ಲಿ ಮಕ್ಕಳ ಮೇಲೆ ಲೈಂಗಿಕ ಪ್ರಹಾರ ಮಾಡಿದವರನ್ನ ಹಾಗೆಯೇ ಬಿಟ್ಟುಬಿಡಬಾರದು. ಈಗ ಇರುವ ಲೈಂಗಿಕ ಅಪರಾಧಗಳ ವಿರುದ್ಧ ಮಕ್ಕಳ ರಕ್ಷಣೆ ಕಾಯಿದೆ ಪ್ರಕಾರ ಶಿಕ್ಷೆ ಜೊತೆಗೆ ಅವರಿಗೂ ಚಿಕಿತ್ಸೆ ಕೊಡಿಸಬೇಕು. ಮಾನಸಿಕ ತಜ್ಞರೊಡನೆ ಸಮಾಲೋಚನೆಗೆ ಸೇರಿಸಬೇಕು. ಇಲ್ಲವಾದರೆ ಅಂತಹವರಿಂದ ಇನ್ನೂ ಅನೇಕ ಮಕ್ಕಳಿಗೆ ಅಪಾಯವಾದರೂ ಆಗಬಹುದು. ಹೀಗೆ ಅಪರಾಧಕ್ಕೆ ಗುರಿಯಾದವರು ದೊಡ್ಡವರಾದ ಮೇಲೆ ಬೇರೆ ಮಕ್ಕಳನ್ನು ಶೋಷಿಸುವವರೂ ಆಗಬಹುದು... ಒಮ್ಮೊಮ್ಮೆ ಇಂತಹ ಶೋಷಣೆಗೆ ಒಳಗಾದ ಮಕ್ಕಳು ಅದರಲ್ಲಿ ಏನಾದರೂ ಸುಖ ಇದೆ ಎಂದು ಕಂಡುಬಿಟ್ಟರೆ, ಶೋಷಕರು ಮಕ್ಕಳಿಗೆ ದುಡ್ಡು ಅಥವಾ ಉಡುಗೊರೆಗಳನ್ನು ಕೊಟ್ಟು ಒಲಿಸಿಕೊಳ್ತಾ ಇದ್ದರೆ ಅಥವಾ ಮೇಲಿಂದ ಮೇಲೆ ಇಂತಹ ಶೋಷಣೆಗೆ ಒಳಗಾದದ್ದೇ ಆದಲ್ಲಿ, ಅಂತಹ ಮಕ್ಕಳು ಅದನ್ನೇ ದಂಧೆ ಮಾಡಿಕೊಳ್ಳುವಂತಹ ಅಪಾಯವೂ ಇದೆ. ಹೀಗೆ ಲೈಂಗಿಕ ಶೋಷಣೆಗೆ ಒಳಗಾದ ಮಕ್ಕಳು ಬೆಳೆದಂತೆ ಸಲಿಂಗಿಗಳೊಂದಿಗೆ ಲೈಂಗಿಕ ಆಸಕ್ತಿಯನ್ನೇ ಗಟ್ಟಿ ಮಾಡಿಕೊಳ್ಳಬಹುದು. ನಗರಗಳಲ್ಲಿ ಇಂತಹ ಮಕ್ಕಳನ್ನು ಇಟ್ಟುಕೊಂಡು ಹಣ ಮಾಡುವವರಿದ್ದಾರೆ. ಕೆಲವು ಮಕ್ಕಳು ಶಾಲೆ ಶಿಕ್ಷಣ ಮರೆತು, ಹಣ ಮಾಡುವ ದಂಧೆಗೆ ಇಳಿದಿರುವುದು ಇನ್ನೊಂದು ಅಪಾಯ. ಹೀಗೆ ಆಗುವುದಕ್ಕೆ ಕಾರಣ, ಅಮಾನುಷವಾಗಿ ಮಕ್ಕಳ ಮೇಲೆ ಲೈಂಗಿಕ ಶೋಷಣೆ ಮಾಡುವ ವಯಸ್ಕರು...'

'ಹಾಗಾದರೆ ಜಗದೀಶ್‌ಮಾಮ... ತನಗೆ ಗೊತ್ತಿರುವಂತೆ ಹೀಗೆ ಇನ್ಯಾರಿಗಾದರೂ ಮಾಡಿರಬಹುದೆ...?' ಕುಮಾರ್ ಯೋಚಿಸುತ್ತಿದ್ದ. 'ಕುಮಾರ್ ವಂದನಾರ್ಪಣೆ' ಯಾರೋ ಕೂಗಿದರು. ಕುಮಾರ್ ದಡಬಡಿಸಿ ಓಡಿದ. 'ಇಂದು ನಮ್ಮ ಸಭೆಗೆ ಬಂದು ನಮ್ಮೊಡನೆ ಮಾತನಾಡಿ, ಸಾಮಾನ್ಯವಾಗಿ ನಾವೆಲ್ಲರೂ ಹಾಸ್ಯ ಮಾಡಿಬಿಡುವ ಅಥವಾ ತಿರಸ್ಕರಿಸುವ ವಿಚಾರದ ಬಗ್ಗೆ ನಮ್ಮಲ್ಲಿ ಅಸಹ್ಯ ಹುಟ್ಟದಂತೆ ಮತ್ತು ಭಯ ಹುಟ್ಟದಂತೆ, ನಾವು ಏನು ಮಾಡಬೇಕು, ಏನು ಮಾಡಬಾರದು ಎನ್ನುವ ವಿಚಾರಗಳನ್ನು ಬಹಳ ನೇರವಾಗಿ ಮತ್ತು ಸ್ಪಷ್ಟವಾಗಿ ತಿಳಿಸಿದ ಶ್ರೀಮತಿ ಅಪರ್ಣಾ ಅಯ್ಯಪ್ಪನವರಿಗೆ ನನ್ನ ವೈಯಕ್ತಿಕವಾಗಿ ಹಾಗೂ ಕಾಲೇಜಿನ ಎಲ್ಲ ವಿದ್ಯಾರ್ಥಿಗಳು ಹಾಗೂ ಸಂಘಟಕರು ಮತ್ತು ಅಧ್ಯಾಪಕ ವೃಂದದ ಪರವಾಗಿ ವಂದನೆಗಳನ್ನು ಹೇಳುತ್ತಿದ್ದೇನೆ' ಕುಮಾರ್ ಹೃದಯ ತುಂಬಿ ಮಾತನಾಡಿದ.

ದೀರ್ಘ ಕರತಾಡನಗಳ ಮಧ್ಯೆ ಅಪರ್ಣಾ ವೇದಿಕೆ ಇಳಿಯುತ್ತಿದ್ದಂತೆಯೇ ಅನೇಕ ವಿದ್ಯಾರ್ಥಿಗಳು ಅವರನ್ನು ಸುತ್ತುಗಟ್ಟಿದ್ದರು. ಭಾಷಣದ ಮುಂದುವರಿದ ಭಾಗವಾಗಿ ಸಮಾಲೋಚನೆ ನಡೆದಿತ್ತು. ಕುಮಾರ್‌ನ ಎದೆಯಲ್ಲಿ ಎಷ್ಟೋ ವರ್ಷಗಳಿಂದ ಗಟ್ಟಿಯಾಗಿ ಕೂತಿದ್ದ ಕಹಿ ಕರಗಿತ್ತು. ಆದರೆ ಜಗದೀಶ್ ಮಾಮ...?

**ವಾಸುದೇವ ಶರ್ಮಾ**
ನಂ. ೧೦, 'ಶ್ರದ್ಧಾ', ೮ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ
ಶ್ರೀನಿಧಿ ಬಡಾವಣೆ, ಕೋಣನಕುಂಟೆ, ಬೆಂಗಳೂರು – ೫೬೦ ೦೬೨

## ಶಾಸ್ತ್ರ ಕೇಳುವುದು

ತ್ರಾಣ ಇಲ್ಲದವರು
ಮೊರೆ ಹೋಗುತ್ತಾರೆ
ಶಾಸ್ತ್ರಕ್ಕೆ
ಶಾಸ್ತ್ರ ಹೇಳುವವನು
ದೂಡುತ್ತಾನೆ
ಅವರ
ನಿತ್ರಾಣಕ್ಕೆ

ಡಾ॥ ಮುತ್ತುರಾಜು
ಬೆಂಗಳೂರು – ೫೬೦ ೦೭೪



# ಕೆಂಪು ನಕ್ಷತ್ರ ಮತ್ತು ಗ್ರಹ

**ಸಂ**ಜೆಯ ಆಕಾಶದಲ್ಲಿ ಶನಿ ಮತ್ತು ಅದರ ಪಕ್ಕದ ಚಿತ್ರಾ ನಕ್ಷತ್ರ ಎರಡೂ ದಿಗಂತದ ಅಂಚಿಗೆ ಸರಿಯುತ್ತವೆ. ಅವುಗಳ ಜೊತೆ ಇದ್ದ ಮಂಗಳ ಮುಂದೆ ಸರಿದು ವೃಶ್ಚಿಕವನ್ನು ಪ್ರವೇಶಿಸಿದೆ. ತಿಂಗಳ ಮೊದಲ ದಿನ ಚಂದ್ರನ ಪಕ್ಕ ಕಾಣುವ ಕೆಂಪು ಚುಕ್ಕೆಯೇ ಮಂಗಳ. ತಿಂಗಳ ಮೊದಲಲ್ಲಿ ಅನುರಾಧಾ ನಕ್ಷತ್ರದ ಪಕ್ಕ ಕಾಣುವ ಇದು ಬಣ್ಣದಲ್ಲಿ ತನ್ನ ಪ್ರತಿಸ್ಪರ್ಧಿಯಾದ ಜ್ಯೇಷ್ಠಾ ನಕ್ಷತ್ರದ ಸಮೀಪ ತಿಂಗಳ ಕೊನೆಗೆ ಹಾದು ಹೋಗಲಿದೆ. (ಜ್ಯೇಷ್ಠಾ ಎಂಬುದರ ಪಾಶ್ಚಾತ್ಯ ಹೆಸರು ಅಂಟಾರೆಸ್ – ಅಂದರೆ ಆರೆಸ್‌ನ ಪ್ರತಿಸ್ಪರ್ಧಿ – ಆರೆಸ್ ಎಂಬುದು ಯುದ್ಧ ದೇವತೆ ಮಂಗಳದ ಹೆಸರು).

೨೪ರಂದು ಭಾರತದ ಮಾರ್ಸ್ ಆರ್ಬೈಟರ್ ಮಂಗಳದ ಸುತ್ತ ಪ್ರದಕ್ಷಿಣೆ ಹಾಕುವುದನ್ನು ಆರಂಭಿಸುತ್ತದೆ. ಈ ಕಾರಣದಿಂದಲೂ ಮಂಗಳ ಸುದ್ದಿ ಮಾಡುತ್ತದೆ.

ಮುಂಜಾವಿನಲ್ಲಿ ಜೋಡಿಯಾಗಿದ್ದ ಶುಕ್ರ ಮತ್ತು ಗುರು ಈಗ ದೂರವಾಗಿವೆ. ಕಟಕರಾಶಿಯಲ್ಲಿರುವ ಗುರು ಗ್ರಹ ದಿನೇ ದಿನೇ ದಿಗಂತದಿಂದ ಮೇಲೆ ಏರುತ್ತಿದೆ. ೨೦ರ ಮುಂಜಾವು ಚಂದ್ರ ಇದರ ಪಕ್ಕದಲ್ಲಿರುತ್ತದೆ. ಶುಕ್ರ ಸಿಂಹರಾಶಿಯನ್ನು ದಾಟುವುದರಲ್ಲಿದೆ. ೨೩ರಂದು ಚಂದ್ರ ಶುಕ್ರದ ಪಕ್ಕ ಕಾಣುತ್ತದೆ.

ಬರಿಗಣ್ಣಿಗೆ ಕಾಣುವ ಐದನೆಯ ಗ್ರಹ ಬುಧ ತಿಂಗಳುದ್ದಕ್ಕೂ ಕಾಣುವುದು. ತಿಂಗಳ ಕೊನೆಗೆ ಸಂಜೆ ಚಿತ್ರಾ ನಕ್ಷತ್ರದ ಪಕ್ಕ ಕಾಣುವುದು. ಆದರೆ ಹುಡುಕುವುದು ಕಷ್ಟವೇ.

ಮೋಡಗಳು ಬಿಡುವು ಕೊಟ್ಟರೆ ಧನು, ವೃಶ್ಚಿಕ ರಾಶಿಗಳಲ್ಲಿ ಆಕಾಶ ಗಂಗೆಯ ಸೌಂದರ್ಯವನ್ನು ಗುರುತಿಸಲು ಇದು ಸುಸಂದರ್ಭ. ತಿಂಗಳ ಕೊನೆಯ ದಿನಗಳಲ್ಲಿ ಚಂದ್ರ ವೃಶ್ಚಿಕ ರಾಶಿಯ ಮೂಲಕ ಹಾದುಹೋಗುವುದನ್ನು ಕಾಣಬಹುದು. ಆಕಾಶಗಂಗೆಯ ಒಂದು ಭಾಗ ನೆತ್ತಿಯ ಮೇಲೆ ವೀಣಾ (ಲೈರಾ) ಪುಂಜದಲ್ಲಿ ಅಭಿಜಿತ್ (ವೇಗಾ) ನಕ್ಷತ್ರ ಮತ್ತು ಗರುಡ (ಅಕ್ವಿಲಾ)ದಲ್ಲಿ ಶ್ರವಣ (ಆಲ್ಟೇರ್), ರಾಜಹಂಸ (ಸಿಗ್ನಸ್)ನಲ್ಲಿ ದೆನೆಬ್ – ಈ ಮೂರು ನಕ್ಷತ್ರಗಳ ತ್ರಿಕೋಣದ ಮೂಲಕ ಹಾದು ಈಶಾನ್ಯದ ಕುಂತಿ (ಕೆಸಿಯೋಪಿಯಾ)ಯವರೆಗೂ ವಿಸ್ತರಿಸಿರುವುದನ್ನು ಕಾಣಬಹುದು. ವಾಯುವ್ಯದಲ್ಲಿ ಸಪ್ತರ್ಷಿಮಂಡಲ ಕಾಣುವುದು. ನೈಋತ್ಯದಲ್ಲಿ ಕಿನ್ನರ (ಸೆಂಟಾರಸ್) ಪುಂಜದ ಎರಡು ಪ್ರಕಾಶಮಾನ ನಕ್ಷತ್ರಗಳಾದ (ಆಲ್ಫಾ ಮತ್ತು ಬೀಟಾ) ಇವು ಮಾತ್ರ ಕಾಣುವುವು.

೨೮ರಂದು ಚಂದ್ರ ಶನಿಗ್ರಹವನ್ನು ಮರೆಮಾಡುವುದು; ಈ ಆಚ್ಛಾದನೆಯನ್ನು ನೋಡುವ ಅವಕಾಶ ನಮಗಿಲ್ಲ.

೨೩ರಂದು ವಿಷುವ – ಹಗಲು ರಾತ್ರಿಗಳ ಅವಧಿ ಸಮನಾಗುವ ದಿನ. ಅದಾದ ನಂತರ ಹಗಲಿನ ಅವಧಿ ಕಡಿಮೆಯಾಗುತ್ತಾ ಹೋಗುವುದು.

**ಖಗೋಳ ದಿನಚರಿ**

ಸೆಪ್ಟೆಂಬರ್ ೧ ಚಂದ್ರ – ಮಂಗಳ ನಡುವೆ ೫ ಡಿಗ್ರಿ*
೨ ಚಾಂದ್ರಮಾಸದ ಮೊದಲ ಪಾದ
೫ ಶುಕ್ರ – ಮಘ ನಕ್ಷತ್ರ ಜೋಡಿ*
೮ ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ
೯ ಹುಣ್ಣಿಮೆ ೦೫:೪೯ಕ್ಕೆ
೧೫ ರೋಹಿಣಿ, ಚಂದ್ರ ಜೋಡಿ
೧೬ ಚಾಂದ್ರಮಾಸದ ಕೊನೆಯ ಪಾದ
೨೦ ಗುರು – ಚಂದ್ರ ಜೋಡಿ (ಮುಂಜಾವು)
ಬುಧ – ಚಿತ್ರಾ ನಕ್ಷತ್ರ ಜೋಡಿ (ಸಂಜೆ)*
೨೧ ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೨೩ ಶರದ್ ವಿಷುವ ೫:೪೯ಕ್ಕೆ (ಹಗಲು–ರಾತ್ರಿಗಳ ಅವಧಿ ಸಮ)
೨೪ ಅಮಾವಾಸ್ಯೆ ೧೧:೩೦ಕ್ಕೆ
೨೬ ಚಿತ್ರಾ, ಬುಧ, ಚಂದ್ರ – ಇವುಗಳ ಪುಟ್ಟ ಗುಂಪು*
೨೮ ಚಂದ್ರ ಶನಿ ಜೋಡಿ (ಆಚ್ಛಾದನೆ ಕಾಣುವುದಿಲ್ಲ)
ಮಂಗಳ – ಜ್ಯೇಷ್ಠಾ ೩ ಡಿಗ್ರಿ ಅಂತರದಲ್ಲಿ*
೨೯ ಮಂಗಳ ಚಂದ್ರ ನಡುವೆ ೬ ಡಿಗ್ರಿ ಅಂತರ*
(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧



*ಸೆಪ್ಟೆಂಬರ್ ೨೯ರ ಸಂಜೆ ಪಶ್ಚಿಮ ದಿಕ್ಕಿನಲ್ಲಿ ಮಂಗಳ, ಚಂದ್ರ, ಜ್ಯೇಷ್ಠಾ ಮತ್ತು ಶನಿ*

*ಯಾನ ಕಾದಂಬರಿಯ ಕಾರಣ ಎಲ್ಲರ ಗಮನ ಸೆಳೆದಿರುವ ಪ್ರೊಕ್ಸಿಮಾ ಸೆಂಟಾರಿ ಎಂಬುದು ಆಲ್ಫಾ ಸೆಂಟಾರಿ ನಕ್ಷತ್ರದ ಕ್ಷೀಣ ಸಂಗಾತಿ. ಬರಿಗಣ್ಣಿಗೆ ಕಾಣುವುದು ಆಲ್ಫಾ ಸೆಂಟಾರಿ ಮಾತ್ರ. (ಇದು ಎ) ದೂರದರ್ಶಕದ ಮೂಲಕ ಇದನ್ನು ಪುದುಚೇರಿಯಿಂದ ವೀಕ್ಷಿಸಿ ಇದಕ್ಕೊಂದು ಸಂಗಾತಿ (ಬಿ) ಎಂದು ೧೬೮೯ರಲ್ಲಿ ಕಂಡುಹಿಡಿದವರು ಜೆಸ್ಯೂಟ್ ಪಾದ್ರಿ ಜೀನ್ ರಿಚೌಡ್. ಮೂರನೆಯ ಸಂಗಾತಿ ಪ್ರೊಕ್ಸಿಮಾ (ಸಿ) ಪತ್ತೆಯಾದದ್ದು ೧೯೧೫ರಲ್ಲಿ. ಅದು ಉಳಿದೆರಡಕ್ಕಿಂತ ಸ್ವಲ್ಪ ಹತ್ತಿರ ಬರುವುದೆಂದು ತಿಳಿದ ಮೇಲೆ ಈ ಹೆಸರು ಸಿಕ್ಕಿತು. ಬಿ ಎಂಬ ನಕ್ಷತ್ರಕ್ಕೆ ಭೂಮಿಯಂತಹ ಗ್ರಹ ಇದೆ ಎಂದು ೨೦೧೨ರಲ್ಲಿ ತಿಳಿಯಿತು. ಆದರೆ ಅದು ಕೇವಲ ಮೂರೇ ದಿನಗಳಲ್ಲಿ ತನ್ನ ಸೂರ್ಯನನ್ನು ಸುತ್ತುವುದು; ಅಂದರೆ ನಕ್ಷತ್ರಕ್ಕೆ ಬಹಳ ಸಮೀಪದಲ್ಲಿರುವುದರಿಂದ ಅಲ್ಲಿ ಜೀವ ಜಗತ್ತು ಇರುವುದು ಸಾಧ್ಯವಿಲ್ಲ.*

# ಪ್ರಜಾಪ್ರಭುತ್ವ
## ಬ್ರಿಟಿಷ್ ಕಾಲದಲ್ಲಿ ಹಾದುಬಂದ ಒಂದು ಪರಿ

ಡಾ॥ ಎ. ಬಿ. ವಗ್ಗರ

ಪ್ರಪಂಚದಲ್ಲಿ ಅತೀ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರ ಎಂಬ ಹೆಗ್ಗಳಿಕೆ ಹೊಂದಿದ ಭಾರತದಲ್ಲಿ ಪ್ರಜಾಪ್ರಭುತ್ವದ ಆಶಯಗಳು ಈಡೇರಿವೆಯೇ ಎಂಬ ಪ್ರಶ್ನೆ ಇನ್ನೂ ನಮ್ಮ ಮುಂದಿದೆ. ಇದಕ್ಕೆ ಕಾರಣ, ಜಗತ್ತಿನಲ್ಲಿ ಅನೇಕ ಬಗೆಯ ಪ್ರಜಾಪ್ರಭುತ್ವಗಳಿರುವುದು. ಇಂಗ್ಲೆಂಡು ಬೇರೆ ಬೇರೆ ದೇಶಗಳನ್ನು ವಸಾಹತುಗಳನ್ನಾಗಿ ಮಾಡಿಕೊಂಡು ದಬ್ಬಾಳಿಕೆಯ ಆಡಳಿತ ನಡೆಸುವಾಗ ಅಲ್ಲಿಯೂ ಪ್ರಜಾಪ್ರಭುತ್ವ, ಚುನಾವಣೆ, ಪಾರ್ಲಿಮೆಂಟುಗಳಿದ್ದವು. ಇದನ್ನು ವಸಾಹತುಶಾಹಿ ಪ್ರಜಾಪ್ರಭುತ್ವ ಎನ್ನಬಹುದು. ಈಗ ಅಮೆರಿಕವು ತನ್ನ ಮಿಲಿಟರಿ ಶಕ್ತಿಯಿಂದ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯ ಮೂಲಕ ಜಗತ್ತಿನ ಸಣ್ಣಪುಟ್ಟ ದೇಶಗಳನ್ನು ಆಳುತ್ತಿದೆ, ಶೋಷಿಸುತ್ತಿದೆ. ಇದನ್ನು ಬಂಡವಾಳಶಾಹಿ ಮಾದರಿಯ ಪ್ರಜಾಪ್ರಭುತ್ವವೆನ್ನಬಹುದು. ಕೆಲವು ದೇಶಗಳಲ್ಲಿ ಧಾರ್ಮಿಕ ಮೂಲಭೂತವಾದಿಗಳೇ ಪ್ರಜಾಪ್ರಭುತ್ವದ ಸೂತ್ರಗಳನ್ನು ಹಿಡಿದಿರುತ್ತಾರೆ. ಅದನ್ನು ಧಾರ್ಮಿಕ ಮೂಲಭೂತವಾದಿ ಮಾದರಿಯ ಪ್ರಜಾಪ್ರಭುತ್ವ ಎನ್ನಬಹುದು. ಇದೇ ಮಾದರಿಯಲ್ಲಿ ಭಾರತದಲ್ಲಿಯೂ ಪ್ರಜಾಪ್ರಭುತ್ವವಿದೆ. ಅದು ಆರಂಭವಾದ ಬಗೆ ಮಾತ್ರ ವಸಾಹತುಶಾಹಿ ಆಳ್ವಿಕೆಯನ್ನು, ಜಮೀನ್ದಾರಿ ಪದ್ಧತಿಯನ್ನು ಅಳವಡಿಸಿಕೊಂಡಿದ್ದ ಮಾದರಿಯಾಗಿತ್ತು. ಭಾರತದಲ್ಲಿ ಪಾಶ್ಚಿಮಾತ್ಯ ಮಾದರಿಯ ಪ್ರಜಾಪ್ರಭುತ್ವ ಅಸ್ತಿತ್ವಕ್ಕೆ ಬರದೆ, ಊಳಿಗಮಾನ್ಯ ನೆಲೆಯಲ್ಲಿಯೇ ರೂಪುಗೊಂಡಿದ್ದನ್ನು ಕಾಣುತ್ತೇವೆ. ಭಾರತದಲ್ಲಿ ಪ್ರಜಾಪ್ರಭುತ್ವ ವಿವಿಧ ಪ್ರಯೋಗಗಳ ಮೂಲಕ ನೆಲೆಗೊಂಡಿತು. ಈ ದಿಶೆಯಲ್ಲಿ ಚುನಾವಣೆ ಅತ್ಯಂತ ಮಹತ್ವದ ಪ್ರಯೋಗವಾಗಿದೆ. ಆದರೆ, ಈ ಚುನಾವಣೆಗಳಲ್ಲಿ ಮುಕ್ತ ಹಾಗೂ ಸಾರ್ವತ್ರಿಕ ಮತದಾನಕ್ಕೆ ಅವಕಾಶ ನೀಡದೆ, ಕೇವಲ ಜಮೀನ್ದಾರ, ವತನದಾರ ಮತ್ತು ಕೈಗಾರಿಕೋದ್ಯಮಿಗಳಿಗೆ ಪ್ರಾತಿನಿಧ್ಯ ನೀಡಲಾಯಿತು. ಹಾಗಾಗಿಯೇ ಕೆಲವರು ೧೯೪೭ರ ಸ್ವಾತಂತ್ರ್ಯವನ್ನು ಅಧಿಕಾರದ ಹಸ್ತಾಂತರವಷ್ಟೆ ಎನ್ನುವಂತಾಯಿತು.

ರಾಷ್ಟ್ರೀಯ ಹೋರಾಟದ ತೀವ್ರತೆಯನ್ನು ಮತ್ತು ಅಂತರ ರಾಷ್ಟ್ರೀಯ ವಿದ್ಯಮಾನಗಳನ್ನು ಎದುರಿಸುವುದಕ್ಕಾಗಿ ಬ್ರಿಟಿಷರು ಭಾರತೀಯರಿಗೆ ಆಡಳಿತದಲ್ಲಿ ಸಹಭಾಗಿತ್ವ ನೀಡುವ ನಿಲುವಿನೊಂದಿಗೆ ಚುನಾವಣೆಗಳನ್ನು ಜಾರಿಗೊಳಿಸಿದರು. ಬ್ರಿಟಿಷರು ಜಾರಿಗೆ ತಂದ ಸುಧಾರಣೆಗಳ ಮೂಲಕ ಬಂದ ಚುನಾವಣೆಗಳಲ್ಲಿನ ಸ್ಪರ್ಧೆ, ಮತದಾನದ ಹಕ್ಕು ಹಾಗೂ ಆಯ್ಕೆಯ ಸ್ವರೂಪಗಳು ಕುಲೀನ ಪ್ರಭುಗಳನ್ನೇ ಕೇಂದ್ರೀಕರಿಸಿದ್ದವು ಎಂಬುದು ೧೯೨೦, ೧೯೩೬ ಮತ್ತು ೧೯೪೦ರಲ್ಲಿ ಹೊರಡಿಸಲಾಗಿದ್ದ ಚುನಾವಣೆಗಳ ಕರಪತ್ರಗಳಿಂದ ಸ್ಪಷ್ಟವಾಗುತ್ತದೆ. ಈ ಕರಪತ್ರಗಳನ್ನು ಗಮನಿಸಿದಾಗ ಬ್ರಿಟಿಷರಿಗಾಗಲಿ, ಇಲ್ಲವೆ ಚುನಾವಣೆಯಲ್ಲಿ ಸ್ಪರ್ಧಿಸಿದ ಬಹುಪಾಲು ಸ್ಪರ್ಧಾಳುಗಳಿಗಾಗಲಿ, ಪ್ರಜೆಗಳಿಗೆ ಸಾಮಾಜಿಕ ನ್ಯಾಯ ಒದಗಿಸುವ ಉದ್ದೇಶವಿರಲಿಲ್ಲ. ಯಾಕೆಂದರೆ ಸ್ಥಳೀಯವಾಗಿ ಬಲಾಢ್ಯರೆನಿಸಿಕೊಂಡ ಫ್ಯೂಡಲ್ ವರ್ಗದವರು ಹಾಗೂ ಆರ್ಥಿಕ ಕ್ಷೇತ್ರದಲ್ಲಿ ಬಲಶಾಲಿಗಳಾಗಿದ್ದ ಉದ್ಯಮಿಗಳಿಗೆ ಮಾತ್ರ ಚುನಾವಣೆಯಲ್ಲಿ ಸ್ಪರ್ಧಿಸುವ ಹಾಗೂ ಮತದಾನ ಮಾಡುವ ಹಕ್ಕನ್ನು ನೀಡಲಾಗಿತ್ತು. ಇವೆರಡೇ ವರ್ಗಗಳನ್ನು ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆ ಮುಂದುವರಿಕೆಗೆ ಹಾಗೂ ಹೆಚ್ಚುತ್ತಿದ್ದ ರಾಷ್ಟ್ರೀಯ ಹೋರಾಟಕ್ಕೆ ತಡೆಯನ್ನಾಗಿ ಬಳಸಿಕೊಳ್ಳುವ ಯೋಜನೆ ಬ್ರಿಟಿಷರದ್ದಾಗಿತ್ತು.

ಒಂದೆಡೆ ಬ್ರಿಟಿಷ್ ಹಿತಾಸಕ್ತಿ, ಇನ್ನೊಂದೆಡೆ ಪ್ರಾಚೀನ ಅರಸು ಮನೆತನಗಳಿಂದ ಭಾರತದಲ್ಲಿ ಸಮ್ಮಿಳಿತಗೊಂಡ ಯಜಮಾನಿಕೆಯು ಹೇಗೆ ಪ್ರಜಾಪ್ರಭುತ್ವ ಎಂಬ ಆಧುನಿಕ ಪರಿಕಲ್ಪನೆಯ ವ್ಯವಸ್ಥೆಯನ್ನು ಕಬಳಿಸಿಬಿಟ್ಟಿತು ಎಂಬುದನ್ನು ಚುನಾವಣಾ ಕರಪತ್ರಗಳ ಚರ್ಚೆಯ ಮೂಲಕ ನೋಡುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

**ದೊರೆತ ಚುನಾವಣಾ ಕರಪತ್ರಗಳು**

ಈ ಲೇಖನ ಸಿದ್ಧಪಡಿಸಲು ೧೯೨೦, ೧೯೩೬ ಮತ್ತು ೧೯೪೦ರಲ್ಲಿ ನಡೆದ ಚುನಾವಣೆಗಳಿಗಾಗಿ ಈ ಕೆಳಗೆ ಪ್ರಸ್ತಾಪಿಸಿದವರ ಮೂಲಕ ಪ್ರಕಟಗೊಂಡ ಕರಪತ್ರಗಳನ್ನು ಬಳಸಿಕೊಳ್ಳಲಾಗಿದೆ. ೧. ಬಾಗಲಕೋಟ ಜಿಲ್ಲೆಯ ರಕ್ಕಸಗಿಯ–ಸಂಗಪ್ಪಾ ಅಮೀನಗೌಡ ಸರದೇಸಾಯಿ (೧೯೨೦); ೨. ಸರ್ ಫಿರೋಜ್ಶ್ ಸೇಠಣಾ – ಮುಂಬೈ ಇವರ ಪರವಾಗಿ ಬಾಗಲಕೋಟ ಜಿಲ್ಲೆಯ ತಾಳಿಕೋಟದ ಪ್ರಥಮ ದರ್ಜೆ ಸರದಾರರಾದ ಎಂ. ಎ. ರಾಸ್ತೆ ಇವರು ಪ್ರಕಟಿಸಿದ ಕರಪತ್ರ (೧೯೨೦); ೩. ಫಕೀರಪ್ಪಾ ಗುರುಬಸಪ್ಪಾ ಹಳಕಟ್ಟಿ (೧೯೨೦); ೪. ಜಮ್‌ಷೆಡ್ ಎನ್. ಆರ್. ಕರಾಚಿ (೧೯೨೦); ೫. ಅರ್ದೇಶಿರ್ ನವರೋಜಿ–ಬೆಳಗಾವಿ (೧೯೨೦); ೬. ವಿಶ್ವನಾಥ ಪಿ. ವೈದ್ಯ – ಮುಂಬೈ (೧೯೨೦); ೭. ಗೋಕುಲದಾಸ ಕೆ. ಪಾರೇಖ್ – ಮುಂಬೈ (೧೯೨೦); ೮. ಸರದಾರ ಎಲ್. ಎನ್. ಹೆಬ್ಬಿಕರ – ಧಾರವಾಡ ಜಿಲ್ಲೆಯ ಹೆಬ್ಬಳ್ಳಿ (೧೯೩೬); ೯. ರಾವಬಹಾದ್ದೂರ ನೀಲಕಂಠ ಚಿಂತಾಮಣಿ ಲಿಮಯೆ – ವಿಜಾಪೂರ(ಜಿ), ಇಂಡಿ (ತಾ), ಭತಗುಣಕಿ (೧೯೩೬); ೧೦. ರಘೋತ್ತಮಾಚಾರ್ಯ ರಾಮಚಂದ್ರಾಚಾರ್ಯ ಜಹಾಗೀರದಾರ – ಇಂಡಿ (ತಾ) ಭುಯಾರ (೧೯೩೬); ೧೧. ಸರದಾರ ರಾವಬಹಾದ್ದೂರ ಸಿ. ಬಿ. ದೇಸಾಯಿ –ಬೆಳಗಾವಿ (ಜಿ), ಸವದತ್ತಿ (ತಾ), ತಲ್ಲೂರ (೧೯೩೬); ೧೨. ನಾರಾಯಣರಾವ್ ಗಣಪತರಾವ್ ವಿಂಚೂರಕರ್ – ಫರ್ಸ್ಟ್ ಕ್ಲಾಸ್ ಸರದಾರ, ಡೆಕ್ಕನ ಮತ್ತು ಜಹಾಗೀರದಾರ – ನಾಶಿಕ (೧೯೩೬); ೧೩. ಎಂ. ಎನ್. ದಲಾಲ – ಮುಂಬೈ (೧೯೩೬); ೧೪. ರಾಷ್ಟ್ರೀಯ ಕಾಂಗ್ರೆಸ್ ವತಿಯಿಂದ ಸ್ಪರ್ಧಿಸಿದ ಗೋವಿಂದಲಾಲ ಶಿವಲಾಲ ಮೋತಿಲಾಲ – ಮುಂಬೈ ಇವರ ಪರವಾಗಿ ಕೆ. ಎಫ್. ನಾರೀಮನ್ ಇವರು ಪ್ರಕಟಿಸಿದ ಕರಪತ್ರ (೧೯೩೬); ೧೫. ಭುಲಾಬಾಯಿ ಜೆ. ದೇಸಾಯಿ – ಮುಂಬೈ (೧೯೩೬); ೧೬. ಮಹೇಂದ್ರ ಭುವನ – ಮುಂಬೈ (೧೯೩೬); ೧೭. ನಾಗಪ್ಪ ಬಂಡಪ್ಪಾ ಕಡಾದಿ –



ಬೆಳಗಾವಿ (೧೯೪೦); ೧೮. ಖಾನಸಾಹೇಬ ಇಸ್ಮಾಯಿಲಸಾಹೇಬ ಬೇದರೇಕರ – ಇವರ ಪರವಾಗಿ ವಿಜಾಪೂರ ಜಿಲ್ಲೆಯ ಹೊನಗನಹಳ್ಳಿ, ವಿಜಾಪುರ, ತಿಗಣಿಬಿದ್ರಿ, ಅಬಜಲಪುರ ಇವುಗಳ ಮುಸ್ಲಿಂ ಇನಾಮದಾರರು ಮತ್ತು ಮುಸ್ಲಿಂ ಧಾರ್ಮಿಕ ನಾಯಕರು ಪ್ರಕಟಿಸಿದ ಕರಪತ್ರ. (೧೯೩೬); ೧೯. ರಾವ್ ಬಹಾದ್ದೂರ ಆರ್. ಸಿ. ಅರಟಾಳ ಇವರು ಡೆಕ್ಕನ್ ಸರದಾರ ಮತ್ತು ಇನಾಮದಾರರ ವತಿಯಿಂದ ಸ್ಪರ್ಧಿಸಿದ ಸರದಾರ ಎಸ್. ಸಿ. ಮೊದಲಿಯಾರ್ – ಪುಣೆ ಇವರ ಪರವಾಗಿ ಪ್ರಕಟಿಸಿದ ಕರಪತ್ರ.

ಬ್ರಿಟಿಷರು ಪ್ರಾಂತವಾರು ಸರಕಾರ ರಚನೆಗೆ ಚುನಾವಣೆಗಳನ್ನು ನಡೆಸಿದರು. ಅದರಂತೆ ಮುಂಬೈ ಲೆಜಿಸ್ಲೇಟಿವ್ ಕೌನ್ಸಿಲ್‌ಗೆ ವಿಜಾಪುರ, ಧಾರವಾಡ, ಬೆಳಗಾವಿ ಮತ್ತು ಸೊಲ್ಲಾಪೂರ ಈ ಜಿಲ್ಲೆಗಳಿಗೆ ಎರಡು ಸ್ಥಾನಗಳನ್ನು ನೀಡಲಾಗಿತ್ತು. ೧೯೨೦ರಲ್ಲಿ ನಡೆದ ಮುಂಬೈ ಪ್ರಾಂತೀಯ ಲೆಜಿಸ್ಲೇಟಿವ್ ಕೌನ್ಸಿಲ್‌ನ ಕೆಳಮನೆಗೆ ಸ್ಪರ್ಧಿಸಲು ಆಸ್ತಿಯನ್ನು ಅರ್ಹತೆಯನ್ನಾಗಿಸಿದರು. ಮೇಲ್ಮನೆಗೆ ಸ್ಪರ್ಧಿಸಲು ಬ್ರಿಟಿಷರ ಹಿತಾಸಕ್ತಿಗೆ ಅನುಗುಣವಾಗಿ ಹೊಂದಿದ ವ್ಯವಹಾರ ಜ್ಞಾನವನ್ನು ಅರ್ಹತೆಯನ್ನಾಗಿಸಿದರು. ಅಂತೆಯೇ ಕೆಳಮನೆಗೆ ಇನಾಮದಾರ, ವತನದಾರ ಮುಂತಾಗಿ ಕರೆಯಲ್ಪಡುತ್ತಿದ್ದ ಫ್ಯೂಡಲ್ ವರ್ಗ ಸ್ಪರ್ಧಿಸಿತು. ಮೇಲ್ಮನೆಗೆ ಉದ್ಯಮಿಗಳು, ಅರ್ಥಶಾಸ್ತ್ರ ಮತ್ತು ವಾಣಿಜ್ಯ ಮುಂತಾದ ಕ್ಷೇತ್ರಗಳಲ್ಲಿ ಅನುಭವ ಗಳಿಸಿದವರು ಸ್ಪರ್ಧಿಸಿದರು. ಬ್ರಿಟಿಷರು ನಿಗದಿಪಡಿಸಿದ ಈ ಅರ್ಹತೆಯ ಉದ್ದೇಶ ಕೆಳಮನೆಗೆ ಚುನಾಯಿತರಾದವರ ಮೂಲಕ ಗ್ರಾಮ ಸಮುದಾಯಗಳನ್ನು, ಮೇಲ್ಮನೆಯ ಚುನಾಯಿತರಾದವರ ಮೂಲಕ ಸುಶಿಕ್ಷಿತ ಸಮುದಾಯವನ್ನು ತಮ್ಮ ನಿಯಂತ್ರಣಕ್ಕೆ ಒಳಪಡಿಸಿಕೊಳ್ಳುವ ಹುನ್ನಾರವಿತ್ತು. ಪಾಶ್ಚಾತ್ಯ ಶಿಕ್ಷಣದಿಂದ ಜಾಗೃತರಾಗುತ್ತಿದ್ದ ವರ್ಗ ಮತ್ತು ಸ್ಥಳೀಯವಾಗಿ ಜನಸಮುದಾಯವನ್ನು ನಿಯಂತ್ರಣದಲ್ಲಿಟ್ಟುಕೊಂಡ ವತನದಾರ–ಇನಾಮದಾರ ವರ್ಗ ಓಲೈಕೆಗಾಗಿಯೇ ಚುನಾವಣೆಗಳನ್ನು ಪ್ರಜಾಪ್ರಭುತ್ವದ ಹೆಸರಿನಲ್ಲಿ ಮತ್ತು ಭಾರತೀಯರಿಗೆ ಹಂತ ಹಂತವಾಗಿ ಕೊಡಮಾಡುವ ಸ್ವರಾಜ್ಯ ಎಂಬ ಹುಸಿ ಸುಳ್ಳಿನೊಂದಿಗೆ ಪರಿಚಯಿಸಿದರು. ಹೀಗೆ ಸರದಾರ ಮತ್ತು ಇನಾಮದಾರ ಮತದಾರರ ಸಂಘ, ದುಮಾಲದಾರರ ಸಂಘ, ರಾಷ್ಟ್ರೀಯ ಕಾಂಗ್ರೆಸ್, ಲಿಬರಲ್ ಪಕ್ಷದ ವತಿಯಿಂದ, ಇನ್ನು ಕೆಲವರು ಸ್ವಪ್ರಾಬಲ್ಯದ ಮೇಲೆ ಚುನಾವಣೆಗೆ ಸ್ಪರ್ಧೆಗಿಳಿದರು.

ಈ ಚುನಾವಣೆಗಳಲ್ಲಿ ಮತದಾನದ ಹಕ್ಕನ್ನು ಉತ್ಪಾದನೆಯ ಮೇಲೆ ೩೨ ರೂಪಾಯಿ ತೆರಿಗೆ ಅಥವಾ ಅಷ್ಟೇ ಪ್ರಮಾಣದ ಲಾವಣಿ ಹಣ ನೀಡುವ ವತನದಾರ ದೇಸಾಯಿ, ಇನಾಮದಾರ, ಪಾಟೀಲ ಕುಲಕರ್ಣಿಯರು, ವತನದಾರ ಹರಿಜನರು ಮತ್ತು ದೊಡ್ಡ ದೊಡ್ಡ ಆಸ್ತಿ ಹೊಂದಿದವರು, ವಿಶ್ವವಿದ್ಯಾಲಯಗಳಲ್ಲಿ ಸೆನೆಟ್(ಅಂದು ಮತ್ತು ಹಿಂದೆ) ಸದಸ್ಯರಾಗಿದ್ದವರು. ಒಟ್ಟಿನಲ್ಲಿ ಹುಟ್ಟಿನಿಂದ, ಸಂಪತ್ತಿನಿಂದ ಮತ್ತು ಬುದ್ಧಿಮತ್ತೆಯಿಂದ ಕುಲೀನರಾದ ವರ್ಗಗಳಿಗೆ ನೀಡಲಾಗಿತ್ತು.

ಚುನಾವಣಾ ಕಣಕ್ಕಿಳಿದ ಹುರಿಯಾಳುಗಳು ಕರಪತ್ರಗಳಲ್ಲಿ ಮತದಾರರಿಗೆ, "ನಾನು ಮುನ್ಸಿಪಲ್, ತಾಲೂಕ, ಜಿಲ್ಲಾ ಮತ್ತು ಲೋಕಲ್ ಬೋರ್ಡನ ಅಧ್ಯಕ್ಷ, ಉಪಾಧ್ಯಕ್ಷ, ಮೆಂಬರ್ ಇದ್ದೇನೆ. ಆನರರಿ ಮೆಜಿಸ್ಟ್ರೇಟ್, ಮದರಸಾ ಡೆಕ್ಕನ್ (ಅಂಜುಮನ್ ಇಸ್ಲಾಂ) ಕಮಿಟಿ ಉಪಾಧ್ಯಕ್ಷ, ಯುದ್ಧ ಮತ್ತು ಬರ ಪರಿಹಾರ ಕಮಿಟಿಯ ಸದಸ್ಯ, ಜಿಲ್ಲಾ ಇನಾಮದಾರ ಸಂಘದ ಅಧ್ಯಕ್ಷ, ಲಿಂಗಾಯತ ಎಜುಕೇಷನ್ ಸೊಸೈಟಿಯ ಅಧ್ಯಕ್ಷನಿದ್ದೇನೆ, ನಾನು ೧೫ ವರ್ಷಗಳಿಂದ ಭಾರತದ ಆರ್ಥಿಕ ಮತ್ತು ವಾಣಿಜ್ಯ ಸಮಸ್ಯೆಗಳ ಕುರಿತು ಅಧ್ಯಯನ ಮಾಡುತ್ತಿದ್ದೇನೆ. ಅರ್ಥಶಾಸ್ತ್ರ ಮತ್ತು ಆಡಳಿತದ ಮೇಲೆ ಹಲವಾರು ಪುಸ್ತಕಗಳನ್ನು ಬರೆದಿದ್ದೇನೆ" ಎಂದು ಮುಂತಾಗಿ ಹೇಳುವ ಮೂಲಕ ತಮ್ಮನ್ನು ಪರಿಚಯಿಸಿಕೊಂಡಿದ್ದಾರೆ. ಹೀಗೆ ಇನಾಮದಾರ–ವತನದಾರರು ಧಾರ್ಮಿಕ ಮತ್ತು ಶಿಕ್ಷಣ ಸಂಸ್ಥೆಗಳೊಂದಿಗೆ, ಬ್ರಿಟಿಷ್ ಆಡಳಿತದೊಂದಿಗೆ, ಆರ್ಥಿಕ ಮತ್ತು ಸ್ವರಾಜ್ಯ ಚಿಂತನೆಯೊಂದಿಗೆ ಪರಿಚಯಿಸಿಕೊಂಡರೆ, ರಕ್ಕಸಗಿ ದೇಸಗತಿಯ ಸಂಗಪ್ಪಾ ಅಮೀನಗೌಡ ಸರದೇಸಾಯಿ ಇವರು, "ನಾನು ೧೯೧೭ನೇ ಸಾಲಿನಲ್ಲಿ ನೇಮಕನಾಮದಾರ (ಗೌರವಾನ್ವಿತ)ರಾದ ಹಿಂದೂಸ್ಥಾನದ ವೈಸರಾಯ್ ಮತ್ತು ಸ್ಟೇಟ್ ಸೆಕ್ರೆಟರಿ ಬಳಿ ಹೋದ ಇನಾಮದಾರರ ನಿಯೋಗದಲ್ಲಿ ಒಬ್ಬ ಸಭಾಸದನಿದ್ದೆ. ೨೪ ಜುಲೈ, ೧೯೧೯ರಂದು ಮುಂಬೈ ನಾಮದಾರ ಗವರ್ನರ್ ಸಾಹೇಬರು ವಿಜಾಪುರಕ್ಕೆ ಬಂದಾಗ ಅವರನ್ನು ಭೇಟಿ ಮಾಡಿದ್ದ ಇನಾಮದಾರರ ನಿಯೋಗದ ಅಧ್ಯಕ್ಷನಾಗಿದ್ದೆ" ಎಂದು ಬ್ರಿಟಿಷ್ ಸರ್ಕಾರದಲ್ಲಿ ತಮ್ಮ ಸ್ಥಾನಮಾನಗಳ ಬಗ್ಗೆ ಹೇಳಿಕೊಳ್ಳುತ್ತಾ ಪರಿಚಯಿಸಿಕೊಂಡು, "ನನ್ನ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ನಾನು ವಿಜಾಪುರ ಜಿಲ್ಲೆಯಲ್ಲಿ ಬಹಳ ವರ್ಷದಿಂದ ವಂಶಪರಂಪರೆಯಿಂದ ನಡೆದುಬಂದ ಇನಾಮದಾರ ಘರಾಣೆಯ ಪ್ರತಿನಿಧಿ ಇದ್ದೇನೆ" ಎಂದು ಪರಿಚಯಿಸಿಕೊಂಡಿದ್ದಾರೆ. ಇವರು ಪರಿಚಯಿಸಿಕೊಂಡಿರುವ ಧಾಟಿಯನ್ನು ನೋಡಿದರೆ, ಅದು ಹಿಂದೆ ರಾಜಮಹಾರಾಜರು ಶಾಸನಗಳಲ್ಲಿ ತಮ್ಮ ವಿವಿಧ ಸಾಧನೆ, ಬಿರುದು–ಬಾವಲಿಗಳ ಮೂಲಕ ಬಣ್ಣಿಸಿಕೊಂಡ ಭಾಷೆಯನ್ನು ನೆನಪಿಸುತ್ತದೆ. ರಾಜರು ತಮ್ಮ ಕಾರ್ಯಗಳಿಗೆ ದೈವೀ ಸಾಕ್ಷಿ ಒದಗಿಸುವಂತೆ, "ನನ್ನ ಶಕ್ತ್ಯಾನುಸಾರವಾಗಿ ಮನೋದೇವತೆಯನ್ನು ಸ್ಮರಿಸಿ ಸಾರ್ವಜನಿಕ ಕಾರ್ಯಗಳನ್ನು ಮಾಡುತ್ತಲಿದ್ದೇನೆ" ಎಂದು ಕರಪತ್ರಗಳಲ್ಲಿ ಉಲ್ಲೇಖಿಸುತ್ತಾರೆ. ವಿಪರ್ಯಾಸವೆಂದರೆ ಇವರು ತಮ್ಮ ಸಾಮಾನ್ಯ ಜನಸಮೂಹವನ್ನು ಪರಿಗಣಿಸಲೇ ಇಲ್ಲ. ಆ ಸಂದರ್ಭದಲ್ಲಿ ಸಾಮಾಜಿಕ ನ್ಯಾಯ ನಗಣ್ಯವಾಗಿತ್ತು ಎನ್ನಬಹುದು.

ಇವರ ಪರಿಚಯದ ಪೀಠಿಕೆಯನ್ನು ಗಮನಿಸಿದರೆ, ಅದು ಹಿಂದಿನಿಂದ ನಾವು ಆಳ್ವಿಕೆ ಮಾಡುತ್ತ ಬಂದಿದ್ದೇವೆ, ಪ್ರಜಾಪ್ರಭುತ್ವದ ಭಾಗವಾಗಿ ಬ್ರಿಟಿಷರು ಪರಿಚಯಿಸಿದ ಚುನಾವಣೆ ವ್ಯವಸ್ಥೆಯಲ್ಲಿಯೂ ನಾವು ಆಳ್ವಿಕೆ ನಡೆಸಲು ಯೋಗ್ಯರಿದ್ದೇವೆ ಎಂಬ ಲಹರಿಯಲ್ಲಿದೆ. ಈ ವತನದಾರ–ಇನಾಮದಾರರು ತಮ್ಮ ರಕ್ಷಣೆಗಾಗಿ ನಿರಂತರವಾಗಿ ಜಾಗರೂಕತೆ ವಹಿಸುತ್ತಿದ್ದರು. ಅದೇ ಸಂದರ್ಭದಲ್ಲಿ ದೇಶಾದ್ಯಂತ ಮಾರ್ಕ್ಸ್‌ವಾದ ಮುಂತಾದ ಸಮಾಜವಾದಿ ಚಿಂತನೆಯಿಂದಾಗಿ ಸಮಾನತೆಯ ಕೂಗು ಎದ್ದಿತ್ತು. ಬಹುಶಃ ಇದನ್ನೇ ಗಮನದಲ್ಲಿಟ್ಟುಕೊಂಡು ಇವರು ತಮ್ಮ ಕರಪತ್ರಗಳಲ್ಲಿ "ಸದ್ಯದ ಕಾಲದಲ್ಲಿ ಎಷ್ಟೋ ಹಿಂದಿ ಪುಡಾರಿಗಳು ವತನದಾರರ ಮತ್ತು ಆಸ್ತಿದಾರರ ಹಕ್ಕುಗಳನ್ನು ಮನಬಂದಂತೆ ಟೀಕಿಸುತ್ತಿರುವುದನ್ನು ನೀವು ಅರಿತಿರುವಿರಿ" ಎಂದು ಉಲ್ಲೇಖಿಸಿದ್ದಾರೆ. ಜೊತೆಗೆ ತಮ್ಮ ಸಹವರ್ಗದವರಿಗೆ, "ನಾನಾದರೂ ಇಂಥ ಒಬ್ಬ ವತನದಾರನೇ ಇರುವುದರಿಂದ ವತನದಾರರ ಹಿತ ಸಂಬಂಧಗಳನ್ನು ಯಾವಾಗಲೂ ಮನಃಪೂರ್ವಕವಾಗಿ ಕಾಪಾಡಲಿಕ್ಕೆ ಹೆಣಗಾಡುವೆನೆಂದು ತಾವು ನಂಬದಿರಲಾರಿರಿ" ಎಂಬ ಭದ್ರತೆಯ ಮಾತುಗಳನ್ನಾಡಿದ್ದಾರೆ. ಆದರೆ, ಇವರೇ ಸ್ವಾತಂತ್ರ್ಯ ಹೋರಾಟದ ಅಧ್ಯಾಯದಲ್ಲಿ ನಾಯಕರಾಗಿ ಬಿಂಬಿತರಾಗಿರುವುದು ಇತಿಹಾಸದ ವಿಪರ್ಯಾಸ. ಇವರಿಗೆ ರಾಜಕೀಯ ಸಹಭಾಗಿತ್ವ ಪ್ರತಿಷ್ಠೆಯ ಪ್ರಶ್ನೆಯಾಗಿತ್ತೆ ವಿನಾ ಪ್ರಜಾಪ್ರಭುತ್ವದ ಮೌಲ್ಯಗಳಲ್ಲ ಎಂಬುದು ಸ್ಪಷ್ಟವಾಗುತ್ತದೆ. ಫ. ಗು. ಹಳಕಟ್ಟಿಯಂಥವರು ಮಾತ್ರ ಸಾಮಾಜಿಕ ನ್ಯಾಯ, ಕರ್ನಾಟಕ ಪ್ರಾಂತ ರಚನೆ, ಶಾಸನಗಳ ಮತ್ತು ಹಸ್ತಪ್ರತಿಗಳ ಶೋಧ ಕಾರ್ಯವನ್ನು ಪ್ರಸ್ತಾಪಿಸಿದ್ದಾರೆ. 'ಕರ್ನಾಟಕ' ಪದ ಬಳಕೆ ಇವರ ಕರಪತ್ರದಲ್ಲಿ ಮಾತ್ರ ಕಾಣುತ್ತೇವೆ.

ಈ ಚುನಾವಣೆಗಳ ಮೇಲೆ ಬ್ರಾಹ್ಮಣ–ಬ್ರಾಹ್ಮಣೇತರ ಚಳುವಳಿಯ ಪ್ರಭಾವ ಇತ್ತು. ೧೯೨೦ರಲ್ಲಿ ರಾವ್ ಬಹಾದ್ದೂರ ಆರ್. ಸಿ. ಅರಟಾಳರು – ಎಸ್. ಸಿ. ಮೊದಲಿಯಾರರು ಬ್ರಾಹ್ಮಣೇತರರಾಗಿದ್ದಾರೆ ಎಂದು ಮತದಾರರಿಗೆ ಪರಿಚಯಿಸಿದ್ದನ್ನು ಕಾಣಬಹುದು.

ಸ್ವರಾಜ್ಯ ಕಲ್ಪನೆ ಹೊಂದಿದ ಚುನಾವಣಾ ಸ್ಪರ್ಧಾಳುಗಳು ತಾವು ಮಂದಗಾಮಿ ಇಲ್ಲವೇ ತೀವ್ರಗಾಮಿ ಧೋರಣೆ ಹೊಂದಿದ ಬಗ್ಗೆ ಬಹಿರಂಗಪಡಿಸಬೇಕಾಗಿತ್ತು. ಈ ದಿಶೆಯಲ್ಲಿ ಫ. ಗು. ಹಳಕಟ್ಟಿಯವರು, "ರಾಷ್ಟ್ರೀಯ ಸಭೆಯ ಧ್ಯೇಯವಾದ ಸಾಮ್ರಾಜ್ಯಾಂತರ್ಗತ ಸ್ವರಾಜ್ಯಕ್ಕೆ ನನ್ನ ಒಪ್ಪಿಗೆ ಇದೆ" ಎನ್ನುವ ಮೂಲಕ ಮಂದಗಾಮಿ ಧೋರಣೆ ಪ್ರತಿಪಾದಿಸಿದ್ದನ್ನು ಕಾಣುತ್ತೇವೆ. ಮುಂದುವರಿದು, "ಈ ಚುನಾವಣೆ

## ನಮನ



ಕನ್ನಡದ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಹಿರಿಯ ಸಾಹಿತಿ ಡಾ॥ ಯು. ಆರ್. ಅನಂತಮೂರ್ತಿ, ೨೨-೮-೨೦೧೪ರಂದು ತಮ್ಮ ೮೨ನೇ ವಯಸ್ಸಿನಲ್ಲಿ ಬೆಂಗಳೂರಿನ ಮಣಿಪಾಲ್ ಆಸ್ಪತ್ರೆಯಲ್ಲಿ ನಿಧನರಾಗಿದ್ದಾರೆ. ಸಾಹಿತ್ಯಲೋಕಕ್ಕಿದು ಆಘಾತಕರ ಸುದ್ದಿಯಾಗಿದ್ದು ಅನಂತಮೂರ್ತಿಯವರ ನಿಧನಕ್ಕೆ ನವಕರ್ನಾಟಕ ಹಾಗೂ 'ಹೊಸತು' ಪತ್ರಿಕಾ ಬಳಗ ತೀವ್ರ ಸಂತಾಪ ವ್ಯಕ್ತಪಡಿಸುತ್ತದೆ.

ರಾಷ್ಟ್ರೀಯ ಹೋರಾಟದ ತೀವ್ರತೆಯನ್ನು ಮತ್ತು ಅಂತರರಾಷ್ಟ್ರೀಯ ವಿದ್ಯಮಾನಗಳನ್ನು ಎದುರಿಸುವುದಕ್ಕಾಗಿ ಬ್ರಿಟಿಷರು ಭಾರತೀಯರಿಗೆ ಆಡಳಿತದಲ್ಲಿ ಸಹಭಾಗಿತ್ವ ನೀಡುವ ನಿಲುವಿನೊಂದಿಗೆ ಚುನಾವಣೆಗಳನ್ನು ಜಾರಿಗೊಳಿಸಿದರು. ಬ್ರಿಟಿಷರು ಜಾರಿಗೆ ತಂದ ಸುಧಾರಣೆಗಳ ಮೂಲಕ ಬಂದ ಚುನಾವಣೆಗಳಲ್ಲಿನ ಸ್ಪರ್ಧೆ, ಮತದಾನದ ಹಕ್ಕು ಹಾಗೂ ಆಯ್ಕೆಯ ಸ್ವರೂಪಗಳು ಕುಲೀನ ಪ್ರಭುಗಳನ್ನೇ ಕೇಂದ್ರೀಕರಿಸಿದ್ದವು ಎಂಬುದು ೧೯೨೦, ೧೯೩೩ ಮತ್ತು ೧೯೪೦ರಲ್ಲಿ ಹೊರಡಿಸಲಾಗಿದ್ದ ಚುನಾವಣೆಗಳ ಕರಪತ್ರಗಳಿಂದ ಸ್ಪಷ್ಟವಾಗುತ್ತದೆ. ಈ ಕರಪತ್ರಗಳನ್ನು ಗಮನಿಸಿದಾಗ ಬ್ರಿಟಿಷರಿಗಾಗಲಿ, ಇಲ್ಲವೆ ಚುನಾವಣೆಯಲ್ಲಿ ಸ್ಪರ್ಧಿಸಿದ ಬಹುಪಾಲು ಸ್ಪರ್ಧಾಳುಗಳಿಗಾಗಲಿ, ಪ್ರಜೆಗಳಿಗೆ ಸಾಮಾಜಿಕ ನ್ಯಾಯ ಒದಗಿಸುವ ಉದ್ದೇಶವಿರಲಿಲ್ಲ. ಯಾಕೆಂದರೆ ಸ್ಥಳೀಯವಾಗಿ ಬಲಾಢ್ಯರೆನಿಸಿಕೊಂಡ ಫ್ಯೂಡಲ್ ವರ್ಗದವರು ಹಾಗೂ ಆರ್ಥಿಕ ಕ್ಷೇತ್ರದಲ್ಲಿ ಬಲಶಾಲಿಗಳಾಗಿದ್ದ ಉದ್ಯಮಿಗಳಿಗೆ ಮಾತ್ರ ಚುನಾವಣೆಯಲ್ಲಿ ಸ್ಪರ್ಧಿಸುವ ಹಾಗೂ ಮತದಾನ ಮಾಡುವ ಹಕ್ಕನ್ನು ನೀಡಲಾಗಿತ್ತು. ಇವೆರಡೇ ವರ್ಗಗಳನ್ನು ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆ ಮುಂದುವರಿಕೆಗೆ ಹಾಗೂ ಹೆಚ್ಚುತ್ತಿದ್ದ ರಾಷ್ಟ್ರೀಯ ಹೋರಾಟಕ್ಕೆ ತಡೆಯನ್ನಾಗಿ ಬಳಸಿಕೊಳ್ಳುವ ಯೋಜನೆ ಬ್ರಿಟಿಷರದ್ದಾಗಿತ್ತು.

ಬ್ರಿಟಿಷರು ಕೊಡಮಾಡಿದ ಸ್ವರಾಜ್ಯದ ಮೊದಲ ಕಾಣಿಕೆಯಾಗಿದೆ. ಇದರ ಸದ್ಬಳಕೆಯ ಮೂಲಕ ನಮ್ಮ ದಕ್ಷತೆ ತೋರಿಸುವುದೆ ನನ್ನ ಅಭಿಮತವಾಗಿದೆ. ಹಾಗಂತ ಸರಕಾರದ ಪಕ್ಷ ವಹಿಸುವುದಿಲ್ಲಾ. ನಮ್ಮ ದೇಶಕ್ಕೆ ಮಾರಕವಾದ ಧೋರಣೆಯನ್ನು ಸರಕಾರ ಅನುಸರಿಸಿದರೆ ಅದನ್ನು ವಿರೋಧಿಸಿ ನಮ್ಮ ಹಿತ ಕಾಪಾಡಿಕೊಳ್ಳತಕ್ಕದ್ದಾಗಿದೆ" ಎನ್ನುವ ಮೂಲಕ ರಾಷ್ಟ್ರೀಯ ಹೋರಾಟವನ್ನು ಸಮರ್ಥಿಸಿಕೊಂಡಿದ್ದಾರೆ. ಹಳಕಟ್ಟಿಯವರ ಕರಪತ್ರದಲ್ಲಿನ ವಿಶೇಷತೆ ಎಂದರೆ, ಇವರು ತಮ್ಮ ಸಾಧನೆಗಳ ಪಟ್ಟಿ ನೀಡದೆ, "ಮತದಾರ ಚೆನ್ನಾಗಿ ವಿಚಾರ ಮಾಡಿ ನಾನು ಯೋಗ್ಯನೆಂದು ಕಂಡುಬಂದರೆ, ನನಗೆ ಮತ ನೀಡಿ" ಎಂದು ಮನವಿ ಮಾಡಿಕೊಂಡಿದ್ದಾರೆ. ಶ್ರೀನಿವಾಸ ವೆಂಕಟೇಶ ಕೌಜಲಗಿ ಇವರ ಕರಪತ್ರವು ಸಹ ಇದೇ ಧಾಟಿಯಲ್ಲಿದೆ.

ಈ ವತನದಾರ-ಇನಾಮದಾರರು ತಮ್ಮ ಪಾಳೇಗಾರಿಕೆಯನ್ನು ಉಳಿಸಿಕೊಳ್ಳಲು ಎಂಥ ಹವಣಿಕೆಯಲ್ಲಿದ್ದರೆಂದರೆ, ಎಲ್. ಎನ್. ಹೆಬ್ಬಿಕರರು : "ನಮ್ಮದು ಹಳೆಯ ಜಹಾಗೀರದಾರ ಮನೆತನ, ನಮ್ಮ ಪೂರ್ವಜರು ದಕ್ಷಿಣ ಹಿಂದೂಸ್ಥಾನದ ಸರದಾರರಲ್ಲಿ ಹೆಸರಾದವರು, ನಾನು ಹಿಂದೂಸ್ಥಾನದ ಎರಡನೆಯ ದರ್ಜೆಯ ಸರದಾರನೆಂದು ಮಾನ್ಯತೆ ಪಡೆದಿದ್ದೇನೆ. ವಿಜಾಪುರ ಆದಿಲ್ ಶಾಹಿ, ಪುಣೆಯ ಪೇಶ್ವೆಯರ ಆಳ್ವಿಕೆ ಹಾಗೂ ಇಂದಿನ ಬ್ರಿಟಿಷರ ಆಡಳಿತದಲ್ಲಿಯೂ ನಮ್ಮ ಮನೆತನದವರು ಹಲವು ಬಗೆಯ ಆಡಳಿತಾತ್ಮಕ ಹಾಗೂ ಸೈನಿಕ ಸೇವೆಯನ್ನು ಸಲ್ಲಿಸಿದ್ದಾರೆ" ಎಂದು ತಮ್ಮನ್ನು ಪರಿಚಯಿಸಿಕೊಳ್ಳುತ್ತಾರೆ. ಎಲ್ಲ ಇನಾಮದಾರರ ಹಕ್ಕುಗಳ ರಕ್ಷಣೆಗಾಗಿ ಹೆಬ್ಬಿಕರರು ಧಾರವಾಡದ ಇನಾಮದಾರ, ಪುಣೆಯ ಸರದಾರ ಹಾಗೂ ದುಮಾಲದಾರರ ಸಂಘದ ಪರವಾಗಿ ತಮ್ಮ ಓರ್ವ ಪ್ರತಿನಿಧಿಯನ್ನು ದುಂಡುಮೇಜಿನ ಪರಿಷತ್‌ಗೆ ಕಳುಹಿಸಿದ್ದರು. ಇವರು ಯಾವ ರೀತಿಯ ಸ್ವರಾಜ್ಯದ ಕನಸನ್ನು ಇಟ್ಟುಕೊಂಡಿದ್ದರೆಂದರೆ 'ಭಾರತಕ್ಕೆ ಬ್ರಿಟಿಷ್ ಸಾಮ್ರಾಜ್ಯದ ಅಡಿಯಲ್ಲಿ ವಸಾಹತುಶಾಹಿ ಸ್ವರೂಪದ ಸ್ವರಾಜ್ಯ ಬೇಕು ಮತ್ತು ಇಲ್ಲಿಯ ಸರಕಾರವು ಶಕ್ತಿಶಾಲಿ ಮತ್ತು ಉದಾರವಾದಿ ಆಗಿರಬೇಕು' ಎಂದು ಪ್ರತಿಪಾದಿಸಿದ್ದರು. 'ಭಾರತೀಯ ತನ್ನ ದೇಶದಲ್ಲಿ ಸ್ವತಂತ್ರ ಹಾಗೂ ಪರದೇಶಗಳಲ್ಲಿ ಈತನನ್ನು ಬ್ರಿಟಿಷ್ ಸಾಮ್ರಾಜ್ಯದಲ್ಲಿನ ನಾಗರಿಕ ಎಂದು ಗೌರವಿಸುತ್ತಾರೆ' ಎಂಬ ಮಾತನ್ನು ಸ್ಪರ್ಧಾಳು ಅರ್ದೆಶಿರ್ ನವರೋಜಿ ತಮ್ಮ ಕರಪತ್ರದಲ್ಲಿ ಉಲ್ಲೇಖಿಸುತ್ತಾ ಬ್ರಿಟಿಷ್ ಸಾಮ್ರಾಜ್ಯದಲ್ಲಿಯೇ ಸ್ವರಾಜ್ಯ ಅರಳಬೇಕು ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಪ್ರಜೆ ಮತ್ತು ರಾಜ್ಯ ಇವುಗಳ ಸಂಬಂಧ ಸಾಧನೆ ಪ್ರಜಾಪ್ರಭುತ್ವದ ಮೂಲ ಆಶಯ. ಪ್ರಜಾಪ್ರತಿನಿಧಿಗಳು ನಿಮ್ನ ವರ್ಗ ಮತ್ತು ಪ್ರದೇಶಗಳ ಸಾಮಾಜಿಕ ನ್ಯಾಯವನ್ನು ಕಾಪಾಡಿಕೊಂಡು ಹೋಗುವುದು ಪ್ರಜಾಪ್ರಭುತ್ವದಲ್ಲಿರಬೇಕಾದ ಗುಣ. ಆದರೆ, ಅದು ಕೆಲವೇ ವರ್ಗಗಳ ಹಿತಾಸಕ್ತಿಗಳಿಗೆ ಸೀಮಿತಗೊಂಡಿದ್ದರಿಂದ ಇಂದಿಗೂ ಆ ಆಶಯ ತಿರುಕನ ಕನಸಾಗಿ ಉಳಿದಿದೆ ಎಂದರೆ ಆಶ್ಚರ್ಯವಿಲ್ಲ. ವಸಾಹತುಶಾಹಿ ಕಾಲದಲ್ಲಿ ಕುಲೀನ ವರ್ಗದ ಪ್ರಭುತ್ವ ಉಳಿಸಿಕೊಳ್ಳುವುದಕ್ಕಾಗಿ ಚುನಾವಣೆಗಳು ನಡೆದರೆ, ಇಂದು ತಮ್ಮ ಪ್ರಭುತ್ವ ಸಾಧಿಸಲು ಹಂಬಲಿಸುವ ವ್ಯಕ್ತಿಗಳಿಗಾಗಿ ನಡೆಯುತ್ತಿವೆಯೋ ಏನೋ ಎಂಬ ಅನುಮಾನ ನಮ್ಮಲ್ಲಿ ಮೂಡದೆ ಇರಲಾರದು. ಕೇವಲ ಒಂದೇ ಒಂದು ಕರಪತ್ರದಲ್ಲಿ 'ವತನದಾರ ಹರಿಜನರು' ಎಂದು ಉಲ್ಲೇಖ ಇದೆ. ವತನದಾರ ಹರಿಜನರು ಸ್ಪರ್ಧಿಸಿದ ಉದಾಹರಣೆ ಇಲ್ಲ. ಮಹಿಳಾ ಪ್ರಾತಿನಿಧ್ಯ ಇಲ್ಲದಿರುವಾಗ ಇದನ್ನು ಪ್ರಜಾಪ್ರಭುತ್ವದ ಅಂಗವಿಕಲ ಬೆಳವಣಿಗೆ ಎನ್ನಬಹುದೇ ?

ಆದರೆ, ಇದೇ ವ್ಯವಸ್ಥೆಯಲ್ಲಿಯೇ ಬಂದ ಗೋಪಾಲಗೌಡ, ನೀಲಗಂಗಯ್ಯ ಪೂಜಾರ ಮುಂತಾದ ರಾಜಕೀಯ ಮುತ್ಸದ್ದಿಗಳಿಂದಾಗಿ ಪ್ರಜಾಪ್ರಭುತ್ವ ತನ್ನ ಆದರ್ಶ ಘಟ್ಟ ತಲುಪಿತ್ತು ಎಂಬುದು ಒಂದು ವಾಸ್ತವ. ಪ್ರಜಾಪ್ರಭುತ್ವ ವ್ಯವಸ್ಥೆಯು ಧಾರ್ಮಿಕ ನಾಯಕರ ಅಥವಾ ರಾಜಮಹಾರಾಜರ ನಿರಂಕುಶ ಪ್ರಭುತ್ವಕ್ಕಿಂತ ಮಿಗಿಲಾದದ್ದು. ಆದರೆ, ಭಾರತದ ಇಂದಿನ ಸ್ಥಿತಿ ನೋಡಿದಾಗ ಪಾಶ್ಚಿಮಾತ್ಯರು ಪರಿಚಯಿಸಿದ ಪ್ರಜಾಪ್ರಭುತ್ವವು ಜಾತಿ-ವರ್ಗ, ದೀನ-ದಲಿತ, ಸ್ತ್ರೀ ಸಂವೇದನೆಗಳ ಮೂಲಕ ಪ್ರವೇಶಿಸದೆ, ವತನದಾರರಂತಹ ಮೇಲ್ವರ್ಗದವರ ಮೂಲಕ ತನ್ನ ನೆಲೆ ಕಂಡುಕೊಂಡಿತು. ಇವರಿಗೆ ತಮ್ಮ ಆನುವಂಶಿಕ ಅಧಿಕಾರ ರಕ್ಷಣೆ ಮುಖ್ಯವಾಗಿತ್ತು. ಪ್ರಸ್ತುತ ವ್ಯವಸ್ಥೆ ಕೋಮುವಾದಿಗಳು, ಗಣಿಧಣಿಗಳು, ರಿಯಲ್ ಎಸ್ಟೇಟ್, ಕಾರ್ಪೊರೇಟ್ ವಲಯ, ವಿದೇಶಿ ಕಂಪನಿ ಹಾಗೂ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಆಡುಂಬೊಲವಾಗಿರುವಾಗ, ಇಲ್ಲಿ ಯಾರ ಹಿತರಕ್ಷಣೆ ಮುಖ್ಯವಾಗಿದೆ ಎನ್ನುವುದನ್ನು ಬಿಡಿಸಿ ಹೇಳಬೇಕಾಗಿಲ್ಲ, ಅಲ್ಲವೆ ?

ಜಗತ್ತಿನ ಬೇರೆಬೇರೆ ದೇಶಗಳಲ್ಲಿ ಪ್ರಜಾಪ್ರಭುತ್ವವಿದ್ದು, ಅದು ಅನೇಕ ಮಾದರಿಗಳಲ್ಲಿ ಜಾರಿಯಾಗಿದೆ. ಈ ಬಹುಮಾದರಿಗಳಿಗೆ ಕಾರಣ, ಪ್ರಜಾಪ್ರಭುತ್ವದ ಮೂಲತತ್ವ ಪ್ರಣಾಳಿಕೆಯಲ್ಲ. ಅದು ಜಾರಿಯಾಗುತ್ತಿರುವ ಸಮಾಜ ಮತ್ತು ಕಾಲ, ಒತ್ತಡಗಳಾಗಿವೆ. ಸಮಾಜವಾದಿ ಪಕ್ಷದ ಹೆಸರಲ್ಲಿಯೇ ಹಿಟ್ಲರ್ ಜನಾಂಗವಾದಿ ಆಳ್ವಿಕೆ ಮಾಡಿದ್ದನ್ನು ಮರೆಯುವಂತಿಲ್ಲ. ರಾಜಪ್ರಭುತ್ವವಿದ್ದ ಕಾಲದಲ್ಲಿ ಮೈಸೂರು ಒಡೆಯರಾದ ನಾಲ್ವಡಿ ಕೃಷ್ಣರಾಜ ಒಡೆಯರು ಹಾಗೂ ಕೊಲ್ಹಾಪುರದ ಶಾಹು ಮಹಾರಾಜರು, ಮೀಸಲಾತಿಗೆ ಸಂಬಂಧಿಸಿದಂತೆ, ಕೆಳಜಾತಿ-ವರ್ಗಗಳಿಗೆ ಮಾಡಿದ ನೆರವನ್ನು ಈಗಿನ ಪ್ರಜಾಪ್ರಭುತ್ವ ಮಾದರಿಯ ಸರ್ಕಾರಗಳು ಮಾಡುತ್ತಿಲ್ಲ ಎನ್ನುವುದು ಇದನ್ನೇ ಸೂಚಿಸುತ್ತದೆ. ಹೀಗಾಗಿಯೇ, ಪ್ರಜಾಪ್ರಭುತ್ವವನ್ನು ಒಳಗೊಂಡಂತೆ ಸಮಾಜವಾದ, ದುರ್ಬಲರ ಸಬಲೀಕರಣ, ಧಾರ್ಮಿಕ ಸಾಮರಸ್ಯ, ವಿಕೇಂದ್ರೀಕರಣ ಮುಂತಾದ ಆರ್ಥಿಕ, ರಾಜಕೀಯ, ಸಾಮಾಜಿಕವಾಗಿ ಆದರ್ಶರೂಪಿಯಾಗಿ ಕಾಣುವ ಪರಿಕಲ್ಪನೆ ಮತ್ತು ವ್ಯವಸ್ಥೆಗಳ ಮೌಲ್ಯನಿರ್ಣಯವು, ವಾಸ್ತವದಲ್ಲಿ ಯಾವ ಸ್ವರೂಪದಲ್ಲಿ ಜಾರಿಯಾಗಿವೆ ಎಂಬುದರ ಮೇಲೆಯೇ ಮಾಡಬೇಕು. ಅವುಗಳ ಮುಖಬೆಲೆಯ ಮೇಲಲ್ಲ. ಆದರ್ಶವೆಂದು ಕಾಣುವ ಈ ವ್ಯವಸ್ಥೆಗಳು ಜಗತ್ತಿನ ಬೇರೆಬೇರೆ ಚಾರಿತ್ರಿಕ ಕಾಲಘಟ್ಟಗಳಲ್ಲಿ ಸಮಾಜಗಳಲ್ಲಿ ಬೇರೆಬೇರೆ ಅರ್ಥಗಳಲ್ಲಿ ಅನುವಾದಗೊಂಡು ಜಾರಿಯಾಗಿವೆ. ಏಕರೂಪಿಯಾಗಿ ಅಲ್ಲ. ಚರಿತ್ರೆಯ ಚಲನೆಗಳು ಪರಿಕಲ್ಪನೆಗಳಿಗೆ ಅರ್ಥವನ್ನು ತುಂಬುತ್ತವೆ. ಅವುಗಳ ಸ್ವರೂಪವನ್ನು ನಿಶ್ಚಯಿಸುತ್ತವೆ.

ಇಂದಿನ ಚುನಾವಣೆಗಳ ಕಾಲಕ್ಕೆ ಹೊರಡುತ್ತಿರುವ ಕರಪತ್ರಗಳಲ್ಲಿನ ಭರವಸೆಗಳು ದೆವ್ವದ ಬಾಯಿಂದ ಬಂದ ವೇದವಾಕ್ಯಗಳೇ ಎನಿಸುತ್ತಿಲ್ಲವೆ ? ಆದ್ದರಿಂದ ಬ್ರಿಟಿಷ್ ಆಡಳಿತಾವಧಿಯಲ್ಲಿನ ಪ್ರಜಾಪ್ರಭುತ್ವದ ಬೆಳವಣಿಗೆಯ ಬಗ್ಗೆ ನಾಚಿಕೆಪಡುವಂಥದ್ದೇನಿಲ್ಲ ಮತ್ತು ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆ ಬಗ್ಗೆ ಹೆಮ್ಮೆಪಡುವಂಥದ್ದೂ ಏನಿಲ್ಲ.

ಡಾ॥ ಎ. ಬಿ. ವಗ್ಗರ
ನಿಗದಿ ಬಿಲ್ಡಿಂಗ್, ಹನುಮಾನ ಗುಡಿ ಹತ್ತಿರ, ಗುರ್ಲಹೊಸೂರ, ಸವದತ್ತಿ ತಾ, ಬೆಳಗಾವಿ ಜಿಲ್ಲೆ

# ಕೆಲ ದೃಷ್ಟಾಂತ ಕತೆಗಳು

ಖಲೀಲ್ ಗಿಬ್ರಾನ್

ಕನ್ನಡಕ್ಕೆ : ಡಾ॥ ಎಚ್. ಎಸ್. ಅನುಪಮಾ



೧

## ನೋಟ

ಅಲ್ಲಿ, ಹಚ್ಚಹಸಿರು ಹೊಲದ ನಡುವೆ, ಸ್ಫಟಿಕ ಶುಭ್ರ ನೀರಿನ ತೊರೆಯ ಪಕ್ಕದಲ್ಲಿ, ಒಂದು ಸುಂದರ ಪಂಜರ ಕಂಡೆ. ಅದರ ತಿರುಪು, ಬಾಗಿಲುಗಳು ಕುಶಲಿಯ ಕೈಗಳಲಿ ರೂಪುಗೊಂಡವು. ಅದರ ಒಂದು ಮೂಲೆಯಲ್ಲಿ ಹಕ್ಕಿ ಬಿದ್ದಿತ್ತು. ಮತ್ತೊಂದು ಮೂಲೆಯಲ್ಲಿ ಎರಡು ಖಾಲಿ ಬಟ್ಟಲು – ಒಂದು ನೀರಿನದು, ಇನ್ನೊಂದು ಕಾಳಿನದು. ಮೆಚ್ಚುಗೆ ಸೂಸುವವನಂತೆ ಅದರ ಪಕ್ಕವೇ ನಿಂತೆ – ಜೀವವಿಲ್ಲದ ಹಕ್ಕಿ ಮತ್ತು ನೀರಿನ ಕಲಕಲ ಸದ್ದು ಆಳ ಮೌನಕ್ಕೆ, ಗೌರವಕ್ಕೆ ಅರ್ಹರೋ ಎಂಬಂತೆ; ಅರಿವು ಮತ್ತು ಹೃದಯದ ಮಾತುಗಳಿಂದ ಧ್ಯಾನಸ್ಥನಾಗಿ ಪರಿಶೀಲಿಸುವವನಂತೆ.

ಹೀಗೆ ಚಿಂತೆ–ಚಿಂತನೆಯಲ್ಲಿ ಮುಳುಗಿರುವಾಗ ನನಗೆ ಗೊತ್ತಾಯಿತು, ಪಾಪ, ಆ ಹಕ್ಕಿ ತೊರೆಯ ಬಳಿ ಇದ್ದೂ ಬಾಯಾರಿ ಸತ್ತುಹೋಗಿದೆ; ಜೀವ ತುಂಬಿ ನಳನಳಿಸುವ ಹಚ್ಚಹಸಿರು ಹೊಲದ ನಡುವೆ ಹಸಿವಿನಿಂದ ಬಳಲಿ ಸತ್ತುಹೋಗಿದೆ. ಸಿರಿವಂತನೊಬ್ಬ ತನ್ನ ತಿಜೋರಿಯೊಳಗೆ ಚಿನ್ನದ ರಾಶಿಯ ನಡುವೆ ಬೀಗ ಹಾಕಿಕೊಂಡು ಕುಳಿತು ಹಸಿವಿನಿಂದ ಸತ್ತ ಹಾಗೆ.

ಇದ್ದಕ್ಕಿದ್ದಂತೆ ನನ್ನ ಕಣ್ಣೆದುರು ಆ ಪಂಜರ ಒಂದು ಮಾನವ ಅಸ್ಥಿಪಂಜರವಾಯಿತು. ಸತ್ತ ಹಕ್ಕಿ ಮಾನವ ಹೃದಯವಾಯಿತು. ಆ ಹೃದಯ ದುಃಖಿಸುವ ಹೆಣ್ಣಿನ ತುಟಿಗಳಾಗಿ ರಕ್ತ ಹರಿವ ಆಳ ಗಾಯ ಹೊಂದಿತು. ಗಾಯದಿಂದೊಂದು ದನಿ ಹೊರಟಿತು : 'ನಾನು ಮಾನವ ಹೃದಯ, ಭೋಗವಸ್ತುಗಳ ಬಂದಿ, ನೆಲದ ಕಾನೂನುಗಳ ಬಂದಿ.'

'ದೇವನ ಸುಂದರ ಹೊಲದಲ್ಲಿ ಬದುಕಿನ ತೊರೆಯ ಪಕ್ಕದಲ್ಲಿ ಮಾನವ ನಿರ್ಮಿತ ಕಾನೂನು ಪಂಜರದಲ್ಲಿ ಬಂದಿಯಾಗಿರುವೆ. ಈ ಸುಂದರ ಸೃಷ್ಟಿಯ ನಟ್ಟನಡುವೆ ನಾನು ನಿರ್ಲಕ್ಷಿತನಾಗಿ ತೀರಿಕೊಂಡೆ. ಏಕೆಂದರೆ ದೇವನ ಉದಾರತೆಯನ್ನು ಅನುಭವಿಸಲಾರದಂತೆ ನನ್ನ ಇಡಲಾಗಿತ್ತು.'

'ನನ್ನ ಪ್ರೇಮಕಾಮಗಳ ಎಚ್ಚರಿಸುವ ಎಲ್ಲ ಚೆಲುವೂ ಕಳಂಕ ಎಂದು ಭಾವಿಸಲಾಯ್ತು. ಮನುಷ್ಯನ ತೀರ್ಪಿನಲ್ಲಿ ನಾ ಹಂಬಲಿಸುವ ಒಳ್ಳೆಯತನವೇ ಇಲ್ಲವೆನ್ನಲಾಯಿತು. ಮನುಷ್ಯರ ಹುಸಿ ನೀತಿ–ನಿಯಮಗಳ ಕಾರಾಗೃಹದಲ್ಲಿ ಕಳೆದುಹೋದ, ನಾಶವಾದ ಮಾನವ ಹೃದಯ ನಾನು. ಅಧಿಕಾರದ ಸರಪಳಿಯಲ್ಲಿ ಕಟ್ಟಲ್ಪಟ್ಟಿರುವೆ. ನಾಲಿಗೆ ಸತ್ತ, ತೇವವಿರದ ಕಣ್ಣುಗಳ ಜನರು ನಕ್ಕು, ನನ್ನ ಮರೆತು ನಾನು ತೀರಿಕೊಂಡಿದ್ದೇನೆ.'



ಈ ಎಲ್ಲ ಮಾತು ಕೇಳಿದವು. ಗಾಯಗೊಂಡ ಹೃದಯದಿಂದ ನಿರಂತರ ಹರಿವ ತೆಳ್ಳನೆಯ ರಕ್ತದ ನಡುವಿನಿಂದಲೇ ಅವು ಎದ್ದು ಬಂದವು.

ಇನ್ನೂ ಹೇಳುತ್ತಲೇ ಇದ್ದರೂ ನನ್ನ ಒದ್ದೆ ಕಣ್ಣು ಮತ್ತು ಅಳುವ ಆತ್ಮಗಳು ಇನ್ನಷ್ಟು ನೋಡದಂತೆ, ಕೇಳದಂತೆ ತಡೆದವು.

*(ಟಿಯರ್ಸ್ ಅಂಡ್ ಲಾಫ್ಟರ್)*

೨

## ನನ್ನ ದುಃಖ ಹುಟ್ಟಿದಾಗ

ನನ್ನ ದುಃಖ ಹುಟ್ಟಿದಾಗ ಜತನದಿಂದ ಜೋಪಾನ ಮಾಡಿದೆ. ಪ್ರೀತಿ ತುಂಬಿದ ಕಾಳಜಿಯಿಂದ ಗಮನಿಸಿದೆ.

ನನ್ನ ದುಃಖ ಎಲ್ಲ ಜೀವಿಗಳಂತೆ ಬೆಳೆಯಿತು. ಬಲಶಾಲಿಯಾಗಿ, ಸುಂದರವಾಗಿ, ಅದ್ಭುತ ಆನಂದವಾಗಿ.

ನಾವು ಒಬ್ಬರನೊಬ್ಬರು ಪ್ರೀತಿಸಿದೆವು, ನನ್ನ ದುಃಖ ಮತ್ತು ನಾನು, ನಮ್ಮ ಸುತ್ತಲ ಜಗವನ್ನು ಪ್ರೀತಿಸಿದೆವು; ದುಃಖಕ್ಕೆ ಕರುಣೆಯ ಹೃದಯವಿತ್ತು, ನನ್ನ ಹೃದಯ ದುಃಖದಿಂದಾಗಿ ಕರುಣಾಪೂರಿತವಾಗಿತ್ತು.

ನಾನು ಮತ್ತು ನನ್ನ ದುಃಖ ಸಂವಾದಿಸುವಾಗ, ನಮ್ಮ ಹಗಲುಗಳಿಗೆ ರೆಕ್ಕೆ ಮೂಡಿದವು. ರಾತ್ರಿಗಳು ಕನಸುಗಳಿಂದ ಸುತ್ತುವರೆಯಲ್ಪಟ್ಟವು. ದುಃಖಕ್ಕೆ ವಾಕ್ಚಾತುರ್ಯದ ನಾಲಿಗೆ, ನನ್ನ ನಾಲಿಗೆ ದುಃಖದಿಂದ ವಾಕ್ಚಾತುರ್ಯ ಪಡೆದಿದೆ.

ನಾನು ಮತ್ತು ದುಃಖ ಒಟ್ಟಿಗೆ ಹಾಡುವಾಗ, ನಮ್ಮ ನೆರೆಹೊರೆಯವರು ತಂತಮ್ಮ ಬಾಗಿಲಲಿ ಕುಳಿತು ನಮ್ಮನ್ನು ಆಲಿಸುತ್ತಿದ್ದರು. ನಮ್ಮ ಹಾಡುಗಳು ಕಡಲಿನಂತೆ ಆಳವಾಗಿ, ಅಪರಿಚಿತ ನೆನಪುಗಳ ಮಧುರ ದನಿಯಾಗಿದ್ದವು.

ನಾವು ಒಟ್ಟಿಗೇ ನಡೆದಾಗ, ಜನ ಮೃದುವಾದ ನೋಟದಿಂದ ನಮ್ಮೆಡೆ ನೋಡುತ್ತಿದ್ದರು, ಅತಿಮಧುರ

ದನಿಯಿಂದ ಪಿಸುನುಡಿಗಳನಾಡುತ್ತಿದ್ದರು. ನಮ್ಮ ಕಡೆ ಅಸೂಯೆಯಿಂದ ನೋಡುವವರೂ ಇದ್ದರು, ಏಕೆಂದರೆ ದುಃಖ ಮಹಾನ್ ಮತ್ತು ನಾನು ದುಃಖದೊಂದಿಗೆ ಹೆಮ್ಮೆಯಿಂದಿದ್ದೆ.

ಆದರೆ ನನ್ನ ದುಃಖ ತೀರಿಕೊಂಡಿತು, ಎಲ್ಲ ಜೀವಿಗಳಂತೇ, ನಾನೊಬ್ಬನೇ ಉಳಿದೆ ಚಿಂತಿಸುತ್ತಾ, ಧ್ಯಾನಿಸುತ್ತಾ.

ಈಗ ನಾನು ಮಾತನಾಡಿದರೆ ಆಡಿದ ಪದ ಕಿವಿಯ ಮೇಲೆ ಭಾರವಾಗಿ ಬೀಳುತ್ತದೆ.

ನಾನು ಹಾಡುವಾಗ ನೆರೆಯವರು ಬಂದು ಕೇಳುವುದಿಲ್ಲ.

ನಾನು ಹಾದಿಯಲಿ ನಡೆವಾಗ ಯಾರೂ ನನ್ನತ್ತ ದೃಷ್ಟಿ ಹರಿಸುವುದಿಲ್ಲ.

ನನ್ನ ನಿದ್ರೆಯಲ್ಲಿ ಮಾತ್ರ ಮರುಕ ತುಂಬಿದ ದನಿಗಳು ಪಿಸುಗುಡುವುದು ಕೇಳುತ್ತವೆ, 'ನೋಡಲ್ಲಿ, ಇವನೇ, ಅವನ ದುಃಖ ಸತ್ತುಹೋಗಿದೆ.'

*(ದಿ ಮ್ಯಾಡ್ ಮ್ಯಾನ್)*

## ೩
## ನನ್ನ ಖುಷಿ ಹುಟ್ಟಿದಾಗ

ನನ್ನ ಖುಷಿ ಹುಟ್ಟಿದಾಗ ಅದನ್ನು ನನ್ನ ತೋಳಿನಲ್ಲಿ ಎತ್ತಿ ಹಿಡಿದು ಮನೆ ಮೇಲೆ ಹತ್ತಿ ಕೂಗಿದೆ, 'ಎಲ್ಲ ಬನ್ನಿ, ನನ್ನ ನೆರೆಹೊರೆಯ ಬಂಧುಗಳೇ, ಬಂದು ನೋಡಿ. ಈ ದಿನ ಖುಷಿ ನನ್ನಲ್ಲಿ ಹುಟ್ಟಿದೆ. ಎಳೆ ಬಿಸಿಲಿನಲಿ ನಗುವ ಈ ಆನಂದದಾಯಿಯ ಎತ್ತಿಕೊಳ್ಳಿ.'

ಆದರೆ ನನ್ನ ಅಕ್ಕಪಕ್ಕದ ಮನೆಯ ಯಾರೊಬ್ಬರೂ ಖುಷಿ ನೋಡಲು ಬರಲಿಲ್ಲ. ನನಗೆ ಪರಮಾಶ್ಚರ್ಯ.

ಪ್ರತಿದಿನ, ಏಳು ಮಾಸ, ನನ್ನ ಮನೆ ಮೇಲೆ ನಿಂತು ಖುಷಿಯ ಬಗೆಗೆ ಕೂಗಿ ಹೇಳಿದೆ, ಆದರೂ ಯಾರೊಬ್ಬರೂ ಗಮನ ಹರಿಸಲಿಲ್ಲ. ನಾನು ನನ್ನ ಖುಷಿ ಒಂಟಿಯಾಗಿದ್ದೆವು, ಯಾರೂ ನೋಡದೇ, ಭೇಟಿಯಾಗುವವರು ಬರದೇ.

ಆಗ ನನ್ನ ಖುಷಿ ಪೇಲವವಾಗುತ್ತ, ಬಳಲುತ್ತ ಹೋಯಿತು. ಏಕೆಂದರೆ ನನ್ನ ಹೃದಯದ ಹೊರತಾಗಿ ಮತ್ತಾರೂ ಅದರ ಲವಲವಿಕೆಯ ನೋಡಲಿಲ್ಲ. ನನ್ನ ತುಟಿಯ ಹೊರತಾಗಿ ಮತ್ತಾರೂ ಚುಂಬಿಸಲಿಲ್ಲ.

ನನ್ನ ಖುಷಿ ಬೇರ್ಪಟ್ಟ ಏಕಾಂಗಿತನದಲ್ಲಿ ತೀರಿಕೊಂಡಿತು.

ಈಗ ನಾನು ಸತ್ತ ಖುಷಿಯನ್ನು ಸತ್ತ ದುಃಖ ದೊಂದಿಗೆ ನೆನೆಯುತ್ತೇನೆ. ಆದರೆ ನೆನಪು ಶರತ್ಕಾಲದ ಉದುರುವ ಎಲೆ. ಉದುರುವಾಗ ಗಾಳಿಯಲ್ಲಿ ಕೊಂಚ ಸದ್ದು ಮಾಡುತ್ತದೆ. ನಂತರ ಎಂದೆಂದೂ ನಿಶ್ಶಬ್ದ.

*(ದಿ ಮ್ಯಾಡ್ ಮ್ಯಾನ್)*

## ೪
## ಕಣ್ಣು

ಒಂದು ದಿನ ಕಣ್ಣು ಹೇಳಿತು, 'ನಾನು ಈ ಬೆಟ್ಟ ಕಣಿವೆ ಗಳಾಚೆ ನೀಲ ಮಂಜಿನಲ್ಲಿ ಮುಚ್ಚಿ ಹೋಗಿರುವುದನ್ನೂ ಕಾಣುತ್ತಿರುವೆ. ಎಂಥ ಸೌಂದರ್ಯ ಅಲ್ಲವೇ ?'

ಕಿವಿ ಕೊಂಚ ಹೊತ್ತು ಗಮನವಿಟ್ಟು ಕೇಳಿ ಹೇಳಿತು, 'ಆದರೆ ಎಲ್ಲಿದೆ ಅಂಥ ಯಾವುದಾದರೂ ಬೆಟ್ಟ ? ನನಗೇನೂ ಕೇಳಿಸುತ್ತಿಲ್ಲ.'

ನಂತರ ಕೈ ಮಾತನಾಡಿತು, 'ಅದನ್ನು ಮುಟ್ಟಬೇಕೆಂದು ನಾನು ವೃಥಾ ಪ್ರಯತ್ನಿಸುತ್ತಿರುವೆ. ಯಾವ ಬೆಟ್ಟವನ್ನೂ ಸ್ಪರ್ಶಿಸಲಾಗುತ್ತಿಲ್ಲವಲ್ಲ ?'

ಮೂಗು ಹೇಳಿತು, 'ಯಾವ ಬೆಟ್ಟವೂ ಇಲ್ಲ, ನನಗ್ಯಾವ ಪರಿಮಳವೂ ಬರುತ್ತಿಲ್ಲ.'

ಆಗ ಕಣ್ಣು ಆಚೆ ತಿರುಗಿತು, ಉಳಿದವರೆಲ್ಲ ಕಣ್ಣಿಗೆ ಹಿಡಿದ ವಿಚಿತ್ರ ಭ್ರಮೆಯ ಕುರಿತು ಮಾತನಾಡ ತೊಡಗಿದರು, 'ಈ ಕಣ್ಣಿಗೆ ಏನೋ ಆಗಿಹೋಗಿದೆ...'

## ೫
## ಗರಿಕೆಯೆಸಳು ಹೇಳಿತು

ಶರತ್ಕಾಲದ ಎಲೆಗೆ ಗರಿಕೆಯೆಸಳು ಹೇಳಿತು : 'ಬೀಳುವಾಗ ಅದೆಷ್ಟು ಸಪ್ಪಳ ಮಾಡುತ್ತೀ ? ನನ್ನ ಮಾಗಿಯ ಕನಸುಗಳನೆಲ್ಲ ಚಲ್ಲಾಪಿಲ್ಲಿಯಾಗಿಸುತ್ತೀ.'

ಎಲೆ ಮುನಿಸಿನಿಂದ ಹೇಳಿತು, 'ಎಲ ಎಲಾ, ಕೆಳಗೇ ಹುಟ್ಟಿ ಕೆಳಗೇ ಬದುಕುವ ಜೀವವೇ, ಹಾಡಿಲ್ಲ ಹಸೆಯಿಲ್ಲ, ನೀನು ಗಾಳಿಯಲ್ಲಿ ಬದುಕುವುದಿಲ್ಲ, ನಿನಗೆ ಹಾಡಿನ ಶಬ್ದ ಏನೆಂದು ಹೇಳುವುದು ಸಾಧ್ಯವಿಲ್ಲ.'

ಹೇಳುತ್ತ ಹೇಳುತ್ತ ಶರತ್ಕಾಲದ ಎಲೆ ನೆಲಕೆ ಉದುರಿ ಮಲಗಿತು. ವಸಂತ ಬಂದಾಗ ಅವಳು ಎದ್ದಳು, ಎಲೆಯಾಗಿದ್ದ ಅವಳು ಗರಿಕೆಯೆಸಳಾಗಿದ್ದಳು.

ಮತ್ತೆ ಶರತ್ಕಾಲ ಬಂದಿತು. ಚಳಿಗಾಲದ ನಿದ್ರೆ ಅವಳ ಕಂಗಳಲ್ಲಿತ್ತು. ಅವಳ ತಲೆ ಮೇಲೆ ಗಾಳಿ ತುಂಬಾ ಹರಡಿಕೊಂಡ ಎಲೆಗಳು ಉದುರುತ್ತಿದ್ದವು. ತನ್ನಲ್ಲಿ ತಾನೇ ಗೊಣಗಿಕೊಂಡಳು, 'ಈ ಶರತ್ಕಾಲದ ಎಲೆಗಳೋ ! ಎಷ್ಟು ಸದ್ದು ಮಾಡುತ್ತವೆ ! ನನ್ನ ಮಾಗಿಯ ಕನಸುಗಳನೆಲ್ಲ ಚದುರಿಸಿಬಿಡುತ್ತವೆ.'

## ೬
## ಶಾಂತಿ ಮತ್ತು ಯುದ್ಧ

ಮೂರು ನಾಯಿಗಳು ಬಿಸಿಲು ಕಾಯಿಸುತ್ತ ಮಾತನಾಡುತ್ತಿದ್ದವು.

ಮೊದಲನೆ ನಾಯಿ ಕನಸಿನಲ್ಲೆಂಬಂತೆ ಹೇಳಿತು : 'ನಾಯಿ ಸಾಮ್ರಾಜ್ಯದ ಈ ದಿನಗಳಲ್ಲಿ ನಾವು ಬದುಕು ತ್ತಿರುವುದು ಅದ್ಭುತ. ನೋಡು ನಾವೀಗ ಸುಲಭವಾಗಿ ನೀರ ಕೆಳಗೂ ಓಡಾಡಬಲ್ಲೆವು, ನೆಲ ಆಕಾಶಗಳಲ್ಲೂ ಅಷ್ಟೇ ಸುಲಭವಾಗಿ ಸಂಚರಿಸಬಲ್ಲೆವು. ನಾಯಿಗಳ ಸುಖಕ್ಕಾಗಿಯೇ, ನಮ್ಮ ಕಣ್ಣು, ಕಿವಿ, ಮೂಗುಗಳಿ ಗಾಗೆಂದೇ, ಬಂದಿರುವ ಸಾಧನಗಳ ಮೇಲೆ ಕೆಲಕಾಲ ಕಣ್ಮುಚ್ಚಿ ಧ್ಯಾನ ಮಾಡಬಲ್ಲೆವು.'

ಎರಡನೆಯ ನಾಯಿ ಮಾತನಾಡುತ್ತ ಹೇಳಿತು, 'ನಾವೀಗ ಕಲೆಯ ಬಗ್ಗೆಯೂ ಸೂಕ್ಷ್ಮವಾಗಿದ್ದೇವೆ. ನಮ್ಮ ಪೂರ್ವಪಿತರಿಗಿಂತ ಲಯಬದ್ಧವಾಗಿ ಚಂದ್ರನನ್ನು ನೋಡಿ ಬೊಗಳುತ್ತೇವೆ. ನೀರಿನಲ್ಲಿ ನಮ್ಮ ಬಿಂಬ ನೋಡಿಕೊಂಡಾಗ ನಮ್ಮ ಚಹರೆಗಳು ನಿನ್ನೆಯದಕ್ಕಿಂತ ಸ್ಪಷ್ಟವಾಗಿರುವುದು ಕಂಡುಬರುತ್ತದೆ.'

ಮೂರನೇ ನಾಯಿ ಹೇಳಿತು, 'ಆದರೆ ನನಗೆ ತುಂಬ ಆಸಕ್ತಿದಾಯಕವಾಗಿ ಕಾಣಿಸುವುದು ಹಾಗೂ ಮಂತ್ರಮುಗ್ಧ ನಾಗಿಸುವುದು ಏನೆಂದರೆ ನಾಯಿ ಸಾಮ್ರಾಜ್ಯಗಳ ನಡುವಿನ ಶಾಂತಿ ಒಪ್ಪಂದ ಮತ್ತು ತಿಳುವಳಿಕೆ.'

ಅವು ಹೀಗೆ ಹೇಳಿಕೊಂಡು ನೋಡುತ್ತಿರುವಾಗಲೇ ತಗೋ, ನಾಯಿ ಹಿಡಿಯುವವ ಬಂದೇ ಬಿಟ್ಟ.

ಮೂರೂ ನಾಯಿಗಳು ಚಂಗನೆ ನೆಗೆದು ಬೀದಿ ಕಡೆ ಓಟಕಿತ್ತವು. ಅವು ಓಡುತ್ತಿರುವಾಗ ಮೂರನೇ ನಾಯಿ ಕೂಗಿತು, 'ದೇವರಾಣೆ, ಪ್ರಾಣ ಉಳಿಸಿ ಕೊಳ್ಳಲು ಓಡಿ. ನಾಗರಿಕತೆ ನಮ್ಮ ಹಿಂದೆ ಬಿದ್ದಿದೆ.'

## ೭
## ಬಟ್ಟೆ

ಒಂದು ದಿನ ಕುರೂಪ ಮತ್ತು ಚೆಲುವು ಎರಡೂ ಕಡಲದಂಡೆಯಲ್ಲಿ ಭೇಟಿಯಾದವು. ಅವು ತಂತಮ್ಮಲ್ಲೇ ಹೇಳಿಕೊಂಡವು – ನಾವು ಕಡಲಲ್ಲಿ ಮೀಯೋಣ.

ನಂತರ ಅವು ಬಟ್ಟೆ ಕಳಚಿ ಕಡಲ ನೀರಿನಲ್ಲಿ ಈಜಾಡತೊಡಗಿದವು. ಸ್ವಲ್ಪ ಹೊತ್ತಾದ ನಂತರ ಕುರೂಪವು ದಂಡೆಗೆ ಬಂದು ಚೆಲುವಿನ ಬಟ್ಟೆಯನ್ನು ಧರಿಸಿ ನಡೆದುಹೋಯಿತು.

ಚೆಲುವೂ ಕಡಲಿನಿಂದ ದಡಕ್ಕೆ ಬಂದು, ತನ್ನ ಬಟ್ಟೆ ಕಾಣದೇ, ಬೆತ್ತಲಾಗಿ ಹೋಗಲು ನಾಚಿ, ಕುರೂಪದ ಬಟ್ಟೆ ಧರಿಸಿದಳು. ತನ್ನ ದಾರಿ ಹಿಡಿದುಹೋದಳು.

ಇವತ್ತಿನವರೆಗೂ ಸ್ತ್ರೀಪುರುಷರು ಅವರಿಬ್ಬರನ್ನು ತಪ್ಪಾಗಿ ಗುರುತಿಸುತ್ತಾರೆ.

ಆದರೂ ಕೆಲವರಿದ್ದಾರೆ; ಚೆಲುವನ್ನು ಅವಳ ಮುಖದಿಂದ, ಅವಳ ಬಟ್ಟೆಯಿಂದಲ್ಲ, ಗುರುತಿಸುತ್ತಾರೆ. ಮತ್ತೆ ಕೆಲವರು ಕುರೂಪವನ್ನು ಅವನ ಮುಖದಿಂದ, ತೊಟ್ಟ ಬಟ್ಟೆ ಅವರ ಕಣ್ತಪ್ಪಿಸಲಾರದಂತೆ, ಗುರುತು ಹಿಡಿಯುತ್ತಾರೆ.

*(ದಿ ವಾಂಡರರ್)*

## ೮
## ಕಣ್ಣೀರು ಮತ್ತು ನಗು

ನೈಲ್ ನದಿಯ ದಂಡೆಯ ಮೇಲೆ, ಒಂದು ಇಳಿತದ ದಿನ, ಮೊಸಳೆ ಮತ್ತು ಕಿರುಬ ಎದುರಾದವು. ಕ್ಷಣ ನಿಂತು ಒಂದರೊಡನೊಂದು ಕುಶಲ ಮಾತಾಡಿಕೊಂಡವು.

ಕಿರುಬ ಮಾತನಾಡುತ್ತಾ ಕೇಳಿತು : 'ನಿನ್ನ ದಿನಗಳು ಹೇಗೆ ಕಳೆಯುತ್ತಿವೆ ಅಣ್ಣಾ ?'

ಮೊಸಳೆ ಉತ್ತರಿಸಿತು, 'ನನ್ನ ದಿನಗಳು ಚೆನ್ನಾಗಿಲ್ಲ. ಎಷ್ಟೋ ಸಲ ನನ್ನ ನೋವು ಮತ್ತು ದುಃಖದ ಕಾರಣದಿಂದ ನಾನು ಅಳುತ್ತೇನೆ, ಆದರೆ ಈ ಜೀವಿಗಳು

---

**ಗುರಿ**

ಗುರಿ ಒಂದೇ
ಅಧಿಕಾರ, ಹಣಕೆ
ಒಂದಾಗುವುದು

ಬೆಪ್ಪನಾಗ
ಮತದಾರ ಪ್ರಭು
ಒಪ್ಪಿಕೊಳ್ಳುವುದು

ದ್ವಾರನಕುಂಟೆ ಪಾತಣ್ಣ
ಬೆಂಗಳೂರು – ೫೬೦ ೦೭೩

---

ಯಾವಾಗಲೂ 'ಅವನದು ಬಿಡು, ಮೊಸಳೆ ಕಣ್ಣೀರು' ಎಂದುಬಿಡುತ್ತಾರೆ. ನನಗೆ ಹೇಳಿಕೊಳ್ಳಲಾಗದಂಥ ನೋವಿನ ಗಾಯ ಇದು.'

ಕಿರುಬ ಹೇಳಿತು, 'ನಿನ್ನ ನೋವು ಮತ್ತು ದುಃಖದ ಬಗ್ಗೆ ನೀನು ಹೇಳಿದೆ, ನನ್ನದನ್ನೂ ಯೋಚಿಸಿ ನೋಡು. ಈ ಭೂಮಿಯ ಚೆಲುವು, ಅದ್ಭುತಗಳು ಪವಾಡಗಳು ಅವನ್ನೆಲ್ಲ ನಾನು ಗಮನಿಸುತ್ತೇನೆ. ಎಷ್ಟು ಖುಷಿಗೊಳ್ಳುತ್ತೇನೆಂದರೆ ದಿನವು ನಗುವಾಗ ನೆಲದ ನಗುವಿನ ಜೊತೆಗೆ ನನ್ನ ನಗುವನ್ನೂ ಸೇರಿಸಿ ಕೇಕೆ ಹಾಕುತ್ತೇನೆ. ಆದರೆ ಈ ಕಾಡು ಜನರಾದರೋ, 'ಅದು ಕಿರುಬನ ಕೇಕೆ ಅಷ್ಟೇ ಬಿಡು' ಎಂದುಬಿಡುತ್ತಾರೆ.'

*(ದಿ ವಾಂಡರರ್)*

## ೯
## ಋಷಿ ಮತ್ತು ಪ್ರಾಣಿಗಳು

ಹಚ್ಚಹಸಿರಿನ ಬೆಟ್ಟಗಳ ತಪ್ಪಲಲ್ಲಿ ಒಬ್ಬ ಋಷಿ ವಾಸಿಸುತ್ತಿದ್ದ. ಅವನ ಆತ್ಮ, ಹೃದಯ ಶುದ್ಧವಾಗಿದ್ದವು. ನೆಲದ ಮೇಲಿನ ಎಲ್ಲ ಪ್ರಾಣಿಗಳು, ಆಗಸದಲ್ಲಿ ಹಾರುವ ಹಕ್ಕಿಗಳೂ ಜೊತೆಜೊತೆಯಲ್ಲಿ ಬಂದು ಕುಳಿತು ಅವನು ಹೇಳುವುದನ್ನು ಕೇಳುತ್ತಿದ್ದವು. ಅವನ ಸುತ್ತ ಕುಳಿತು, ಸಂತಸದಿಂದ ಅವನನ್ನಾಲಿಸುತ್ತಾ, ರಾತ್ರಿ ಕಳೆದರೂ ಅವನ ಬಳಿಯಿಂದ ಎದ್ದುಹೋಗದೇ ಉಳಿಯುತ್ತಿದ್ದವು. ಅವನೇ ಅವರನ್ನು ಭೂಮಿಗೂ, ಆಗಸಕ್ಕೂ ಒಪ್ಪಿಸಿ ವಿದಾಯ ಹೇಳಿ ಕಳಿಸುತ್ತಿದ್ದನು.

ಒಂದು ಸಂಜೆ ಅವನು ಪ್ರೇಮದ ಕುರಿತು ಮಾತನಾಡುತ್ತಿದ್ದ. ಒಂದು ಚಿರತೆ ತನ್ನ ತಲೆಯೆತ್ತಿ ಅವನನ್ನು ಕೇಳಿತು, 'ಪ್ರೇಮಿಸುವ ಬಗ್ಗೆ ನೀನು ನಮಗೆ ಹೇಳುತ್ತಿದ್ದೀ, ಹೇಳು ಮುನಿಯೇ, ನಿನ್ನ ಸಂಗಾತಿ ಎಲ್ಲಿ?'

'ನನಗೆ ಸಂಗಾತಿಯಿಲ್ಲ', ಅವನೆಂದ.

ಅಚ್ಚರಿಯ ದೊಡ್ಡ ಉದ್ಗಾರ ಎಲ್ಲ ಪ್ರಾಣಿಗಳ ಬಾಯಿಯಿಂದಲೂ ಹೊರಟಿತು. ಅವು ತಂತಮ್ಮಲ್ಲೇ ಮಾತನಾಡಿಕೊಳ್ಳತೊಡಗಿದವು, 'ತಾನು ಮಾಡಿ ಗೊತ್ತಿಲ್ಲದೇ ಇರುವಾಗ ಅವನು ಪ್ರೇಮಿಸುವ ಮತ್ತು ಕಾಮಿಸುವ ಕುರಿತು ನಮಗೆ ಹೇಗೆ ತಾನೇ ಹೇಳಬಲ್ಲನು?' ನಿರಾಸೆಯಿಂದ, ಅಸಮಾಧಾನದಿಂದ ಗೊಣಗಿಕೊಳ್ಳುತ್ತ ಅವನನ್ನು ಒಬ್ಬಂಟಿ ಉಳಿಸಿ ಹೋದವು.

ಆ ರಾತ್ರಿ ಋಷಿಯು ತನ್ನ ಚಾಪೆಯ ಮೇಲೆ ಬೋರಲಾಗಿ ಮಲಗಿ ನೆಲಕ್ಕೆ ಮುಖ ಮಾಡಿ ಭೋರಾಡಿ ಅತ್ತ. ತನ್ನ ಕೈಗಳಿಂದಲೇ ತನ್ನೆದೆ ಬಡಿಬಡಿಸಿಕೊಂಡು ಅತ್ತ.

## ೧೦
## ಸಿಡಿಲು

ಒಂದು ಬಿರುಗಾಳಿ, ಮಳೆಯ ದಿನ. ಬಿಷಪ್ ತಮ್ಮ ಕ್ಯಾಥೆಡ್ರಲ್‌ನಲ್ಲಿ ಕುಳಿತಿದ್ದರು. ಕ್ರೈಸ್ತಳಲ್ಲದ ಒಬ್ಬಾಕೆ ಅಲ್ಲಿ ಬಂದಳು. ಅವರೆದುರು ನಿಂತು, 'ನಾನು ಕ್ರೈಸ್ತಳಲ್ಲ, ನನಗೆ ನರಕದ ಉರಿ ಜ್ವಾಲೆಯಿಂದ ಮೋಕ್ಷ ಇಲ್ಲವೆ ?' ಎಂದು ಕೇಳಿದಳು.

ಅವಳೆಡೆ ನೋಡಿ ಬಿಷಪ್ ಹೇಳಿದರು : 'ಇಲ್ಲಿ ಮೋಕ್ಷ ಸಿಗುವುದು ಯಾರು ಪವಿತ್ರಾತ್ಮನ ಪವಿತ್ರ ಜಲದ ತೀರ್ಥದಿಂದ ಶುದ್ಧಿಯಾಗಿರುತ್ತಾರೋ ಅವರಿಗೆ ಮಾತ್ರ.'

ಅವರು ಇಷ್ಟು ಹೇಳುತ್ತಿರುವಾಗಲೇ ಆಕಾಶದಿಂದ ಗುಡುಗು, ಮಿಂಚಿನೊಂದಿಗೆ ಸಿಡಿಲು ಬಂದು ಎರಗಿತು. ಕ್ಯಾಥೆಡ್ರಲ್‌ಗೆ ಬೆಂಕಿ ಹೊತ್ತಿಕೊಂಡಿತು. ಊರ ಜನ ಓಡೋಡಿ ಬಂದರು, ಆ ಮಹಿಳೆಯನ್ನು ರಕ್ಷಿಸಿದರು. ಬಿಷಪ್ ಉರಿಯ ಜ್ವಾಲೆಗೆ ಆಹಾರವಾದರು.

## ೧೧
## ಹದ್ದು ಮತ್ತು ಅಂಬರಗುಬ್ಬಿ

ಒಂದು ದೊಡ್ಡ ಬೆಟ್ಟದ ಬಂಡೆಯ ಮೇಲೆ ಹದ್ದು ಮತ್ತು ಅಂಬರಗುಬ್ಬಿ ಭೇಟಿಯಾದವು. ಅಂಬರಗುಬ್ಬಿ ಹೇಳಿತು, 'ಶುಭ ದಿನ ನಿಮಗೆ.' ಕೆಳಗೆ ನೋಡುತ್ತ ಮೆಲುದನಿಯಲ್ಲಿ ಹದ್ದು ಹೇಳಿತು, 'ಶುಭ ದಿನ.'

'ಎಲ್ಲ ಸರಿಯಿದೆ ಅಲ್ಲವೆ ?'

'ಏಯ್, ಎಲ್ಲ ಸರಿಯಿದೆ. ಆದರೆ ನಿನಗೆ ಗೊತ್ತಿಲ್ಲವೆ, ನಾವು ಪಕ್ಷಿರಾಜರು. ನಾವು ಮಾತನಾಡಿಸುವುದಕ್ಕಿಂತ ಮೊದಲು ನೀನು ಮಾತನಾಡಿಸಬಾರದು.'

'ನಾನು ನಾವೆಲ್ಲ ಒಂದೇ ಕುಟುಂಬದವರು ಎಂದು ತಿಳಿದಿದ್ದೇನೆ.'

ತಿರಸ್ಕಾರದಿಂದ ನೋಡಿದ ಹದ್ದು ಹೇಳಿತು, 'ನಾವಿಬ್ಬರೂ ಒಂದೇ ಕುಟುಂಬದವರು ಅಂತ ಅವನ್ಯಾವನು ನಿನಗೆ ಹೇಳಿದ್ದು ?'

'ನಿಮಗೆ ನೆನಪಿಸಲೇ, ನಾನೂ ನಿಮ್ಮಷ್ಟೇ ಎತ್ತರ ಹಾರಬಲ್ಲೆ. ಈ ಭೂಮಿ ಮೇಲಿನ ಜೀವಿಗಳಿಗೆ ನನ್ನ ಇಂಪಾದ ಸ್ವರದಿಂದ ಖುಷಿ ಮತ್ತು ನೆಮ್ಮದಿ ನೀಡಬಲ್ಲೆ. ನಿನ್ನ ಧ್ವನಿ ಖುಷಿ, ನೆಮ್ಮದಿ ನೀಡಲಾರದೆಂದು ನೆನಪಿಸಬಯಸುತ್ತೇನೆ.'

ಹದ್ದು ಸಿಟ್ಟಿಗೆದ್ದು ಹೇಳಿತು, 'ಖುಷಿ ಮತ್ತು ನೆಮ್ಮದಿ! ಪುಟಗೋಸಿ ಜೀವಿಯೇ ! ನನ್ನ ಬಲಿಷ್ಠ ಕೊಕ್ಕಿನಿಂದ ಒಮ್ಮೆ ಕುಕ್ಕಿ ನಿನ್ನ ನಾಶ ಮಾಡಿಬಿಡಬಲ್ಲೆ. ನನ್ನ ಪಾದದಷ್ಟು ದೊಡ್ಡವೂ ಇಲ್ಲ ನೀನು.'

ಅದು ಹೀಗೆ ಹೇಳಿದ ಕೂಡಲೇ ಅಂಬರಗುಬ್ಬಿ ಎತ್ತರಕ್ಕೆ ಹಾರಿತು. ಹದ್ದಿನ ಕುತ್ತಿಗೆಯ ಹಿಂದೆ ಬೆನ್ನ ಮೇಲೆ ಕುಳಿತು ಅದರ ರೆಕ್ಕೆಗಳನ್ನು ಕುಕ್ಕತೊಡಗಿತು. ಹದ್ದಿಗೆ ಸಿಟ್ಟು ಬಂದು ಅತ್ಯಂತ ವೇಗವಾಗಿ, ಮೇಲೆಮೇಲೆ, ಅಡ್ಡಾದಿಡ್ಡಿ ಹಾರಿ ಅಂತೂ ಆ ಪುಟ್ಟ ಹಕ್ಕಿಯನ್ನು ಬೆನ್ನ ಮೇಲಿಂದ ಬೀಳಿಸಲು ಯತ್ನಿಸಿತು. ಸಾಧ್ಯವಾಗಲಿಲ್ಲ. ಕೊನೆಗೆ ಎಂದೆಂದೂ ಹೆದರದಷ್ಟು ಹೆದರುತ್ತ, ತನ್ನ ಬೆನ್ನ ಮೇಲೆ ಕುಕ್ಕುವ ಆ ಪುಟ್ಟ ಹಕ್ಕಿಯನ್ನು ಹೊತ್ತು, ಆ ಕ್ಷಣದ ತನ್ನ ವಿಧಿಗಾಗಿ ಹಳಿದುಕೊಳ್ಳುತ್ತ ಮೊದಲು ಕುಳಿತಿದ್ದ ಎತ್ತರ ಬೆಟ್ಟದ ಬಂಡೆಯ ಮೇಲೆ ಬಂದು ಕುಳಿತಿತು.

ಅದೇ ಹೊತ್ತಿಗೆ ಪುಟ್ಟ ಆಮೆಯೊಂದು ಆ ದಾರಿಯಲ್ಲಿ ಬಂತು. ಅದು ಅಲ್ಲಿನ ದೃಶ್ಯ ನೋಡಿ ಗಹಗಹಿಸಿ ನಗಲಾರಂಭಿಸಿತು. ಅದಕ್ಕೆ ಎಷ್ಟು ನಗು ಬಂತು ಎಂದರೆ ನಗುನಗುತ್ತ ಬೋರಲಾಗಿ ಮಲಗಿ ಹೊರಳಾಡತೊಡಗಿತು.

ಕೆಳಗೆ ನೋಡಿದ ಹದ್ದು ಆಮೆಯತ್ತ ತಿರುಗಿ ಹೇಳಿತು, 'ನಿಧಾನ ತೆವಳುವಂಥವನೇ, ನೆಲದ ಮೇಲೆ ನೀನೊಬ್ಬನೇ ಇರಬೇಕು ಅಂಥವನು, ಏನು ನೋಡಿ ಅಷ್ಟು ನಗುತ್ತಿರುವೆ ?'

ಆಮೆ ಹೇಳಿತು, 'ನೀನು ಕುದುರೆಯಾಗಿ ಬದಲಾಗಿದ್ದೀ, ಆ ಪುಟ್ಟ ಅಂಬರಗುಬ್ಬಿ ಸವಾರನಾಗಿ ನಿನ್ನ ನಡೆಸುತ್ತಿದೆ, ಆದರೆ ಪುಟ್ಟ ಹಕ್ಕಿಯೇ ನಿನಗಿಂತ ಉತ್ತಮ ಎಂದಾಯಿತು.'

ಹದ್ದು ಅದಕ್ಕೆ ಉತ್ತರಿಸಿತು, 'ನಿನ್ನ ಕೆಲಸ ನೀನು ನೋಡಿಕೊಂಡು ತೊಲಗು ಇಲ್ಲಿಂದ. ಇದು ನಾನು ಮತ್ತು ನನ್ನ ಸೋದರನ ನಡುವಿನ ಮನೆಜಗಳ. ಇದಕ್ಕೂ ನಿನಗೂ ಸಂಬಂಧವಿಲ್ಲ.'

*(ದಿ ವಾಂಡರರ್)*

## ೧೨
## ಹುಚ್ಚ

ಒಮ್ಮೆ ಹುಚ್ಚರ ಧಾಮದ ಉದ್ಯಾನದಲ್ಲಿ ನಾನಿದ್ದೆ. ಕುತೂಹಲದ ಕಣ್ಣುಗಳ ಸುಂದರ, ಪೇಲವ ಮುಖದ ಒಬ್ಬ ತರುಣ ಅಲ್ಲಿಗೆ ಬಂದ.

ಬೆಂಚಿನ ಮೇಲೆ ನಾನು ಅವನ ಪಕ್ಕ ಕುಳಿತುಕೊಂಡೆ. 'ನೀನು ಇಲ್ಲೇಕೆ ಇದ್ದೀ ?' ಎಂದು ಕೇಳಿದೆ.

ನನ್ನೆಡೆಗೆ ಆಶ್ಚರ್ಯಚಕಿತನಾಗಿ ನೋಡಿ ಹೇಳಿದ, 'ಇದೊಂಥರಾ ಊಹಿಸದ ಪ್ರಶ್ನೆಯಾಯಿತಲ್ಲ ? ಆದರೂ ಉತ್ತರ ಹೇಳುತ್ತೇನೆ ಕೇಳಿ. ನನ್ನ ತಂದೆಗೆ ನನ್ನನ್ನು ತನ್ನ ಪುನಸೃಷ್ಟಿ ಎನ್ನುವಂತೆ ಮಾಡುವ ಹಂಬಲವಿತ್ತು. ನನ್ನ ಚಿಕ್ಕಪ್ಪನಿಗೂ ಅದೇ ಆಸೆಯಿತ್ತು. ನನ್ನಮ್ಮನಿಗಾದರೋ ತನ್ನ ಪ್ರಖ್ಯಾತ ತಂದೆಯ ರೀತಿ ಬೆಳೆಸಲು ಆಸೆಯಿತ್ತು. ನನ್ನ ಅಕ್ಕನಾದರೋ ಕಡಲಲ್ಲಿ ವ್ಯಾಪಾರ ಮಾಡುತ್ತ ತಿರುಗುವ ತನ್ನ ಗಂಡ ನನ್ನ ನಿಖರ ಆದರ್ಶವಾಗಬೇಕೆಂದು ನಂಬಿದ್ದಳು. ನನ್ನಣ್ಣ ನಾನು ಅವನಂತೇ ಒಬ್ಬ ಉತ್ತಮ ಕ್ರೀಡಾಪಟುವಾಗಬೇಕೆಂದು ಬಯಸಿದ್ದ.

ಹಾಗೇ ನನ್ನ ಗುರುಗಳೂ ಸಹ – ತತ್ವಶಾಸ್ತ್ರ, ಸಂಗೀತದ ಗುರುಗಳು, ತರ್ಕಶಾಸ್ತ್ರ ಪಂಡಿತರು ಕೂಡ ನಾನು ಅವರ ಕನ್ನಡಿಯ ಬಿಂಬದಂತೆ ಆಗಬೇಕೆಂಬ ನಿಶ್ಚಯವನ್ನು ಹೊಂದಿದ್ದರು.

'ಅದಕ್ಕೇ ನಾನು ಈ ಜಾಗಕ್ಕೆ ಬಂದೆ. ಇದು ವಿವೇಕಯುತ ಸ್ಥಳವಾಗಿ ನನಗೆ ತೋರಿದೆ. ಕೊನೆ ಪಕ್ಷ ಇಲ್ಲಿ ನಾನು ನಾನಾಗಿರಬಹುದು.'

ನಂತರ ಇದ್ದಕ್ಕಿದ್ದಂತೆ ಅವನು ನನ್ನತ್ತ ತಿರುಗಿ ಕೇಳಿದ : 'ಆದರೆ ಹೇಳು, ನೀನೂ ಕೂಡಾ ಉತ್ತಮ ಶಿಕ್ಷಣ ಮತ್ತು ಬೋಧನೆಯ ಕಾರಣದಿಂದಲೇ ಇಲ್ಲಿಗೆ ಬಂದೆಯೇನು ?'

ನಾನು ಉತ್ತರಿಸಿದೆ, 'ಇಲ್ಲ, ನಾನು ಒಬ್ಬ ಭೇಟಿ ನೀಡುವವ ಅಷ್ಟೇ.'

ಅವನೆಂದ, 'ಓಹ್, ಹಾಗಾದರೆ ಈ ಗೋಡೆಯಾಚೆಯ ಹುಚ್ಚರ ಧಾಮದಲ್ಲಿ ಬದುಕುತ್ತಿರುವವನೇ ನೀನು ?'

*(ದಿ ವಾಂಡರರ್)*

**ಖಲೀಲ್ ಗಿಬ್ರಾನ್**
ಕನ್ನಡಕ್ಕೆ : **ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ
ಕಾವಲಕ್ಕಿ ಅಂಚೆ – ೫೮೧೩ ೩೪೧
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ,



ಸೆಪ್ಟೆಂಬರ್ ತಿಂಗಳಲ್ಲಿ ಶಿಕ್ಷಕರ ದಿನಾಚರಣೆ ಮಹತ್ವ ಪಡೆದುಕೊಳ್ಳುತ್ತದೆ. 'ಗುರು' ಎಂಬ ಶಬ್ದಕ್ಕೆ ಎಲ್ಲಿಲ್ಲದ ಗೌರವ. ಇದೇ ಸಂದರ್ಭದಲ್ಲಿ ನಮ್ಮ ರಾಜ್ಯದಲ್ಲಿ 'ಅತಿಥಿ' ಉಪನ್ಯಾಸಕರೆಂಬ ದಿನಗೂಲಿ 'ಗುರು'ಗಳಿದ್ದಾರೆ. ಮನೆಗೂ ಸಲ್ಲದ ಕಾಲೇಜ್‌ಗೂ ಸಲ್ಲದ ಅತಂತ್ರ ಬದುಕು ನಡೆಸುತ್ತಿರುವ ಇವರನ್ನಿಟ್ಟುಕೊಂಡೇ ನಮ್ಮ ಸರಕಾರಗಳು 'ಶಿಕ್ಷಕರ ದಿನಾಚರಣೆ'ಯನ್ನಾಚರಿಸುವದು ಎಂಥ ವಿಪರ್ಯಾಸ.

–ಸಂ.

# ಅರೆಹೊಟ್ಟೆಯಲ್ಲಿ ಅತಿಥಿ ಉಪನ್ಯಾಸಕರು

**ನ**ಮ್ಮ ರಾಜ್ಯದ ಸರಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿರುವ ೧೦,೫೦೦ಕ್ಕೂ ಹೆಚ್ಚು ಸಂಖ್ಯೆಯಲ್ಲಿರುವ ಅತಿಥಿ ಉಪನ್ಯಾಸಕರ ಬದುಕು ಅತಂತ್ರ ಸ್ಥಿತಿಯಲ್ಲಿದೆ. ಎಂ.ಎ., ಎಂ.ಫಿಲ್., ಪಿಹೆಚ್.ಡಿ., ಉಪನ್ಯಾಸಕರ ಅರ್ಹತಾ ಪರೀಕ್ಷೆಗಳಾದ ಎನ್. ಇ. ಟಿ ಹಾಗೂ ಎಸ್. ಎಲ್. ಇ. ಟಿ. ಪರೀಕ್ಷೆಗಳನ್ನು ಪಾಸು ಮಾಡಿದವರು, ಇವುಗಳ ಜೊತೆಗೆ ವಿ. ವಿ. ಗಳಿಂದ ಬಂಗಾರದ ಪದಕ ಪಡೆದುಕೊಂಡವರು ಸಹ ಹೊಟ್ಟೆಯ ಹಿಟ್ಟಿಗಾಗಿ ಅರೆ ಹೊಟ್ಟೆಯಿಂದ ದುಡಿಯುತ್ತಿದ್ದಾರೆ. ಎಂ.ಎ. ಮಾತ್ರ ಮಾಡಿಕೊಂಡವರಿಗೆ ರೂ. ೮೦೦೦/– ಹಾಗೂ ಪಿಎಚ್.ಡಿ., ಎಂ.ಫಿಲ್., ಎಸ್. ಎಲ್. ಇ. ಟಿ., ಎನ್. ಇ. ಟಿ ಮಾಡಿ ಕೊಂಡವರಿಗೆ ರೂ. ೧೦,೦೦೦/–ಗಳ ತಿಂಗಳ ಗೌರವ ಧನವನ್ನಾಗಿ ಸರಕಾರ ನೀಡುತ್ತಿದೆ. ಈ ಗೌರವಧನವೂ ಪ್ರತಿ ತಿಂಗಳು ಕೈ ಸೇರುವುದಿಲ್ಲ. ಬಹಳಷ್ಟು ಸಂದರ್ಭ ಗಳಲ್ಲಿ ಹಸಿದ ಹೊಟ್ಟೆಯಲ್ಲಿ ಪಾಠ ಮಾಡುವ ಸ್ಥಿತಿಯನ್ನು ರಾಜ್ಯ ಸರಕಾರ ಹಾಗೂ ಉನ್ನತ ಶಿಕ್ಷಣ ಇಲಾಖೆ ನಿರ್ಮಾಣ ಮಾಡಿದೆ. ವಿಶ್ವವಿದ್ಯಾಲಯ ಅನುದಾನ ಆಯೋಗ (ಯು.ಜಿ.ಸಿ) ಹಾಗೂ ಕಾಲೇಜು ಶಿಕ್ಷಣ ಇಲಾಖೆ ಬಯಸುವ ಎಲ್ಲ ಅರ್ಹತೆಗಳಿದ್ದರೂ ಸೇವಾ ಭದ್ರತೆ ಹಾಗೂ ಸಾಮಾಜಿಕ ನ್ಯಾಯದಿಂದ ವಂಚಿತರಾಗಿದ್ದಾರೆ. ಹೀಗಾಗಿ ಉಪನ್ಯಾಸಕರು ಆತಂಕದಲ್ಲಿ ಜೀವಿಸುವ ಪರಿಸ್ಥಿತಿಯನ್ನು ಆಳುವ ಸರ್ಕಾರಗಳು ಸೃಷ್ಟಿಮಾಡುತ್ತಾ ಬಂದಿವೆ. ಸರಕಾರಿ ಪ್ರ. ದ. ಕಾಲೇಜುಗಳಲ್ಲದೆ ಅನುದಾನಿತ ಖಾಸಗಿ ಕಾಲೇಜುಗಳಲ್ಲಿ ಹಾಗೂ ವಿಶ್ವವಿದ್ಯಾಲಯದ ಕಾಲೇಜುಗಳಲ್ಲಿ ಮತ್ತು ಅನುದಾನ ರಹಿತ ಖಾಸಗಿ ಕಾಲೇಜುಗಳಲ್ಲಿ ಮಾನವಿಕ, ವಿಜ್ಞಾನ, ಸಮಾಜವಿಜ್ಞಾನ ಅಲ್ಲದೆ ತಾಂತ್ರಿಕ ವಿಷಯಗಳಲ್ಲಿಯೂ ಕೂಡ ಅತಿಥಿ ಉಪನ್ಯಾಸಕರಿಂದಲೇ ಉಪನ್ಯಾಸಗಳು ನಡೆಯುತ್ತವೆ. ಈ ಎಲ್ಲ ವರ್ಗದ ಉಪನ್ಯಾಸಕರು ಒಂದೇ ದೋಣಿಯ ಪಯಣಿಗರು.

ಬಹಳಷ್ಟು , ಉಪನ್ಯಾಸಕರನ್ನು ಮಾತನಾಡಿಸಿದರೆ ಕರಾಳ ಕಥೆಗಳು ಬಿಚ್ಚಿಕೊಳ್ಳುತ್ತವೆ. ಕೊಡುವ ಅಲ್ಪ ಹಣಕಾಸಿನಲ್ಲಿ ದುಬಾರಿ ದಿನಮಾನದಲ್ಲಿ ದಿನಗಳನ್ನು ದಾಟಿಸುವದು ದೊಡ್ಡ ಸವಾಲಾಗಿದೆ. ತಾಲೂಕು ಹಾಗೂ ನಗರದಲ್ಲಿರಲಾಗದೆ ಹಾಗೂ ಸುತ್ತ ಇರುವ ತಮ್ಮ ಗ್ರಾಮಗಳಿಂದ ಬಂದುಹೋಗಲಾಗದೆ ದಿನನಿತ್ಯ ಒದ್ದಾಡುತ್ತಿದ್ದಾರೆ. ಕಾಲೇಜು ಇರುವ ನಗರಗಳಲ್ಲಿದ್ದರೆ, ಬಾಡಿಗೆ ಮನೆ ಅಥವಾ ಕೊಠಡಿಗೆ ಬಾಡಿಗೆ ಕೊಡಲಾಗುವುದಿಲ್ಲ. ಹಳ್ಳಿಗಳಿಂದ ಬಸ್ಸು ಅಥವಾ ಇನ್ನಾವುದೆ ವಾಹನದಲ್ಲಿ ಅಥವಾ ಬೈಕ್‌ಗಳಲ್ಲಿ ಓಡಾಡಬೇಕಾದರೆ ಅವರ ಸಂಬಳದ ಅರ್ಧ ಹಣ ಬಾಡಿಗೆ ಅಥವಾ ಸಾರಿಗೆಗೆ ಕೊಡಬೇಕಾಗುತ್ತದೆ. ಇದು ಗಂಭೀರ. ಇದು ಬ್ಯಾಚುಲರ್‌ಗಳ ಕಥೆಯಾದರೆ ಮದುವೆಯಾಗಿ ಮಕ್ಕಳಿದ್ದವರ ಪಾಡು ಇನ್ನೂ

ಸರಕಾರಿ ಪ್ರ. ದ. ಕಾಲೇಜುಗಳಲ್ಲದೆ ಅನುದಾನಿತ ಖಾಸಗಿ ಕಾಲೇಜುಗಳಲ್ಲಿ ಹಾಗೂ ವಿಶ್ವವಿದ್ಯಾಲಯದ ಕಾಲೇಜುಗಳಲ್ಲಿ ಮತ್ತು ಅನುದಾನ ರಹಿತ ಖಾಸಗಿ ಕಾಲೇಜುಗಳಲ್ಲಿ ಮಾನವಿಕ, ವಿಜ್ಞಾನ, ಸಮಾಜವಿಜ್ಞಾನ ಅಲ್ಲದೆ ತಾಂತ್ರಿಕ ವಿಷಯಗಳಲ್ಲಿಯೂ ಕೂಡ ಅತಿಥಿ ಉಪನ್ಯಾಸಕರಿಂದಲೇ ಉಪನ್ಯಾಸಗಳು ನಡೆಯುತ್ತವೆ. ಈ ಎಲ್ಲ ವರ್ಗದ ಉಪನ್ಯಾಸಕರು ಒಂದೇ ದೋಣಿಯ ಪಯಣಿಗರು. ಬಹಳಷ್ಟು , ಉಪನ್ಯಾಸಕರನ್ನು ಮಾತನಾಡಿಸಿದರೆ ಕಥೆಗಳು ಬಿಚ್ಚಿಕೊಳ್ಳುತ್ತವೆ. ಕೊಡುವ ಅಲ್ಪ ಹಣಕಾಸಿನಲ್ಲಿ ದುಬಾರಿ ದಿನಮಾನದಲ್ಲಿ ದಿನಗಳನ್ನು ದಾಟಿಸುವದು ದೊಡ್ಡ ಸವಾಲಾಗಿದೆ. ತಾಲೂಕು ಹಾಗೂ ನಗರದಲ್ಲಿರಲಾಗದೆ, ಸುತ್ತ ಇರುವ ತಮ್ಮ ಗ್ರಾಮಗಳಿಂದ ಬಂದುಹೋಗಲಾಗದೆ ದಿನನಿತ್ಯ ಒದ್ದಾಡುತ್ತಿದ್ದಾರೆ.

**ಕೆ. ಎಸ್. ಜನಾರ್ಧನ**

ಗಂಭೀರ. ಹೇಳಿಕೊಳ್ಳುವುದಕ್ಕೆ ಡಿಗ್ರಿ ಕಾಲೇಜ್ ಲೆಕ್ಚರರ್ ಜೇಬು ಮಾತ್ರ ಖಾಲಿ. ಹೆಚ್ಚಾಗಿ ಗ್ರಾಮಗಳಿಂದ ಅದರಲ್ಲೂ ದಲಿತ, ಹಿಂದುಳಿದ ಹಾಗೂ ಎಲ್ಲ ಜಾತಿಯ, ಧರ್ಮದ, ಬಡವರು ಹಾಗೂ ಭೂ ಹೀನರ ಮಕ್ಕಳು, ಸರಕಾರಿ ಹಾಗೂ ಸಂಘ–ಸಂಸ್ಥೆಗಳ ಅಥವಾ ದಾಸೋಹ ಮಠಗಳಲ್ಲಿ ಇದ್ದುಕೊಂಡು ಓದಿದವರು, ಸರಕಾರಿ ಶಿಷ್ಯ ವೇತನದಲ್ಲಿ ಓದಿ ಪದವಿಗಳನ್ನು ಪಡಕೊಂಡವರು, ಸರಕಾರದ ಹಾಗೂ ಖಾಸಗಿ ಕಾಲೇಜುಗಳ ನೇಮಕಾತಿ ಸಂದರ್ಭದಲ್ಲಿ ಲಂಚ, ಡೊನೇಶನ್ ಕೊಡಲಾಗದ ಅಸಹಾಯಕರು ಅತಿ ಹೆಚ್ಚು ಅತಿಥಿ ಉಪನ್ಯಾಸಕರಾಗಿದ್ದಾರೆ. ಹಳ್ಳಿಗಳಿಗೆ ಹೋದರೆ ಜಮೀನು ಇಲ್ಲ. ಇವರಿಗೆ ಬೇರೆ ಕೆಲಸ ಬರುವುದಿಲ್ಲ. ಎಂ.ಎ., ಪಿಎಚ್.ಡಿ ಪಡೆದವರು ಇತರ ಕೆಲಸಗಳಿಗೆ ಹೋಗುವುದಕ್ಕಾಗದೆ ಆಶ್ರಯಿಸಿದ್ದು ಈ ಅತಿಥಿ ಉಪನ್ಯಾಸಕ ವೃತ್ತಿಯನ್ನು. ಯಾವ ಶಿಕ್ಷಣ, ಈ ಪದವೀಧರರಿಗೆ ಸ್ವಾವಲಂಬಿ ಬದುಕನ್ನು ರೂಪಿಸಬೇಕಿತ್ತೋ, ಆ ಜಾಗದಲ್ಲಿ ಪರತಂತ್ರದಲ್ಲಿ, ಪರಾವಲಂಬಿಯನ್ನಾಗಿಸುವ ಅತಂತ್ರ ಸ್ಥಿತಿಯನ್ನು ಸೃಷ್ಟಿ ಮಾಡಿದೆ.

ಶಿಕ್ಷಣಕ್ಕೆ ಪ್ರಸಿದ್ಧವಾದ ಒಂದು ಘೋಷಿತ ಉದ್ದೇಶವಿದೆ, ಅಕ್ಷರ ಕಲಿಸುವುದು, ಅಕ್ಷರದ ಮೂಲಕ ಓದಲು ಬರೆಯಲು ಕಲಿಸುವುದು ಆ ಮೂಲಕ ಶಿಕ್ಷಣ ಪಡೆಯುವವರಿಗೆ ಅರಿವನ್ನು, ತಿಳಿವನ್ನು ನೀಡುವುದು. ಜ್ಞಾನವನ್ನು ನೀಡುವುದರ ಜೊತೆಗೆ ಸ್ವಾವಲಂಬಿ ಬದುಕನ್ನು ಕಟ್ಟಿಕೊಳ್ಳಲು ಸನ್ನದ್ಧರನ್ನಾಗಿಸುವುದು ಶಿಕ್ಷಣದ ಹಲವು ಉದ್ದೇಶಗಳಲ್ಲಿ ಮುಖ್ಯವಾದುದು. ಇಂದು ನಾವು ಪಡೆದ ಶಿಕ್ಷಣ ಅಥವಾ ನೀಡಿದ ಶಿಕ್ಷಣ, ಸ್ವಾವಲಂಬಿ ಬದುಕನ್ನು ಕಟ್ಟಲು ಪೂರಕವಾಗಿದೆಯೋ ಎಂಬುದು ಚರ್ಚೆಯ ವಿಷಯ. ಕೆಲಸ ಮಾಡುವ ಕಾಲೇಜುಗಳಲ್ಲಿ ಈ ಅತಿಥಿ ಉಪನ್ಯಾಸಕರು ತಾತ್ಸಾರಕ್ಕೆ ಒಳಗಾಗಿದ್ದಾರೆ. ಖಾಯಂ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರನ್ನು ದಿನಗೂಲಿ ಕೆಲಸಗಾರರಂತೆ ನಡೆಸಿಕೊಳ್ಳುತ್ತಾರೆ. ಕಾಲೇಜಿಗೆ ಬಂದು, ಅವರಿಗೆ ಕೊಟ್ಟ ಕ್ಲಾಸ್‌ಗಳನ್ನು ಮುಗಿಸಿಕೊಂಡು ಹೋಗಬೇಕು. ಕಾಲೇಜಿನಲ್ಲಿ ನಡೆಯುವ ಪಠ್ಯೇತರ ಚಟುವಟಿಕೆ ಹಾಗೂ ಇನ್ನಿತರ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಇವರಿಗೆ ಯಾವುದೇ ರೀತಿಯಾದ ಪಾಲು ಹಾಗೂ ಮಹತ್ವ ಕಡಿಮೆ. ವಿದ್ಯಾರ್ಥಿಗಳಿಗೂ ಅತಿಥಿ ಉಪನ್ಯಾಸಕರೆಂದರೆ ಅಷ್ಟಕ್ಕಷ್ಟೇ. ಕಾರಣ ವಾರಕ್ಕೆ ಕೆಲವೇ ಕ್ಲಾಸ್‌ಗಳು, ಈ ವರ್ಷ ಈ ಕಾಲೇಜಿನಲ್ಲಿದ್ದವರು ಮುಂದಿನ ವರ್ಷ ಇನ್ನಾವುದೋ ಕಾಲೇಜಿನಲ್ಲಿ ಇರುತ್ತಾರೆ. ಹೀಗಾಗಿ ವಿದ್ಯಾರ್ಥಿ ಉಪನ್ಯಾಸಕರ ಮಧ್ಯೆ ಇರುವ 'ಗುರು – ಶಿಷ್ಯ'ಬಾಂಧವ್ಯ ಏರ್ಪಡುವುದಿಲ್ಲ. ಇದರ ನೇರ ಪರಿಣಾಮ ಉನ್ನತ ಶಿಕ್ಷಣದ ಮೇಲಾಗುತ್ತದೆ. ಹೀಗಾಗಿ ಶಿಕ್ಷಣದ ಮೂಲ ಉದ್ದೇಶಗಳಾದ ವೈಯಕ್ತಿಕ ಮೌಲ್ಯಗಳು, ಸಮುದಾಯ ಮೌಲ್ಯಗಳು, ಸಹೋದರತ್ವ, ಸಹಬಾಳ್ವೆಯಂಥ ಮೌಲ್ಯಗಳು ಅಪಮೌಲ್ಯಕ್ಕೆ ತುತ್ತಾಗುತ್ತವೆ.

**ಅತಿಥಿ ಉಪನ್ಯಾಸಕರ ಇತಿಹಾಸ**

ಎಪ್ಪತ್ತರ ದಶಕದ ಕೊನೆಯಲ್ಲಿ ಖಾಯಂ ಉಪನ್ಯಾಸಕರು ಹೆಚ್ಚಿನ ಅಧ್ಯಯನಕ್ಕೆ ಅಥವಾ ಸಂಶೋಧನೆಗೆ ಹಾಗೂ ವಿದೇಶಗಳಿಗೆ ಹೋದಾಗ ಅಲ್ಲದೆ ಉಪನ್ಯಾಸಕಿಯರು ಹೆರಿಗೆ ರಜೆಗೆ ಹೋದ ಸಂದರ್ಭದಲ್ಲಿ ಪಾಠ, ಪ್ರವಚನಗಳನ್ನು ಪೂರ್ಣಗೊಳಿಸಲು ಆ ಜಾಗದಲ್ಲಿ ನಿವೃತ್ತಿ ಹೊಂದಿದ ಅಥವಾ ಬೇರೆ ಕಡೆಯಿಂದ ಡೆಪ್ಯೂಟೇಶನ್ ಮೂಲಕ ಪಾಠ, ಪ್ರವಚನ ಪೂರ್ಣಗೊಳಿಸುವ ಪರಿಪಾಠ ಇತ್ತು. ನಂತರ ಆ ಜಾಗದಲ್ಲಿ ಲೋಕಲ್ ಸ್ಟಾಫ್ ೧೯೭೬–೧೯೮೩, ಸ್ಟಾಪ್ ಗ್ಯಾಪ್ ೧೯೮೩–೧೯೮೬ ಎಂದು ಸಂಬಂಧಿಸಿದ ವಿಷಯದಲ್ಲಿ ಉನ್ನತ ಪದವಿಯನ್ನು ಪಡೆದವರನ್ನು ತಾತ್ಕಾಲಿಕವಾಗಿ ನೇಮಕಮಾಡಲಾಯಿತು. ಸರಕಾರ ಹಾಗೂ ಶಿಕ್ಷಣ ಇಲಾಖೆ ಅಗತ್ಯ ಉಪನ್ಯಾಸಕರನ್ನು ಭರ್ತಿ ಮಾಡದೆ ಕಡಿಮೆ ಸಂಬಳದಲ್ಲಿ ದುಡಿಸಿಕೊಳ್ಳಲು ದಾರಿ ಕಂಡುಕೊಂಡಿತು. ಇದರ ಭಾಗವಾಗಿಯೇ ಮುಂದೆ ಕಾಂಟ್ರ್ಯಾಕ್ಟ್ ಬೇಸಿಸ್, ಅರೆಕಾಲಿಕ, ಅಂಶಕಾಲಿಕ, ಅತಿಥಿ ಉಪನ್ಯಾಸಕ, ಬಾಡಿಗೆ ಉಪನ್ಯಾಸಕ (ಬಿ.ಜೆ.ಪಿ. ಸರಕಾರದಲ್ಲಿ 'ಸಿ. ಟಿ. ರವಿ' ಅವರು ಉನ್ನತ ಶಿಕ್ಷಣ ಸಚಿವರಾದ ನಂತರ ಅತಿಥಿ ಉಪನ್ಯಾಸಕರನ್ನು ಬಾಡಿಗೆ ಉಪನ್ಯಾಸಕರೆಂದು ನಾಮಕರಣ ಮಾಡಲು ಹೊರಟಾಗ, ಅತಿಥಿ ಉಪನ್ಯಾಸಕರು ಪ್ರತಿಭಟನೆ, ಕಾಲ್ನಡಿಗೆ ಜಾಥದಂತಹ ಚಳುವಳಿಗಳನ್ನು ನಡೆಸಿದರು. ಸರಕಾರ ಬಾಡಿಗೆ ಪದವನ್ನು ಹಿಂಪಡೆಯಿತು). ಹೀಗೆ ಥರಾವರಿ ಹೆಸರುಗಳ ಮೇಲೆ ದುಡಿಸಿಕೊಳ್ಳುತ್ತ ಬಂದಿತು. ಅರೆಕಾಲಿಕ ಉಪನ್ಯಾಸಕರ ಖಾಯಂ ನೇಮಕಾತಿಗಾಗಿ ಚಳುವಳಿ ಹಾಗೂ ಮಂತ್ರಿ ಮಹೋದಯರ ಜೊತೆ ಮಾತುಕತೆಗಳನ್ನು ನಡೆಸಲಾಯಿತು. ಸುಪ್ರಿಂ ಕೋರ್ಟ್ ಆದೇಶದ ಮೇರೆಗೆ ಮಾನವೀಯತೆಯ ಆಧಾರದ ಮೇಲೆ ಒಂದು ಸಾರಿ ಕೆಲವೇ ಅರೆಕಾಲಿಕ ಉಪನ್ಯಾಸಕರನ್ನು ಖಾಯಂಗೊಳಿಸಲಾಯಿತು. ನಂತರದ ದಿನಗಳಲ್ಲಿ ನಿವೃತ್ತಿ ಹೊಂದಿದ ಜಾಗದಲ್ಲಿ ಹಾಗೂ ಅಗತ್ಯಕ್ಕೆ ತಕ್ಕಷ್ಟು ನೇಮಕಾತಿ ಮಾಡಿಕೊಳ್ಳಲಿಲ್ಲ. ಪಾರ್ಟ್ ಟೈಮಿಗೆ ಬದಲಾಗಿ ಅತಿಥಿ ಉಪನ್ಯಾಸಕರೆಂದು ಹೆಸರಿಸಲಾಯಿತು. ಆಗ ಇವರ ಸಂಬಳ (೧೯೯೦) ಕೇವಲ ರೂ. ೬೦೦ ರೂಪಾಯಿ. ೧೯೯೫ ರಿಂದ ೨೦೦೪–೦೫ರವರೆಗೆ ರೂ. ೧೨೦೦/– ಗಳಿಗೆ ದುಡಿದಿದ್ದಾರೆ. ಈ ಕಡಿಮೆ ಸಂಬಳವನ್ನು ವಿರೋಧಿಸಿ ಗುಲಬರ್ಗಾ ವಿಭಾಗದಲ್ಲಿ ಎ.ಐ.ಎಸ್.ಎಫ್. ಹಾಗೂ ಎ.ಐ.ವೈ.ಎಫ್. ಹಾಗೂ ಪ್ರಗತಿಪರ ಸಂಘಟನೆಗಳ ನೇತೃತ್ವದಲ್ಲಿ ಚಳುವಳಿಯನ್ನು ಪ್ರಾರಂಭಿಸಿದಾಗ ಧರ್ಮಸಿಂಗ್ ಸರಕಾರ ಅತಿಥಿ ಉಪನ್ಯಾಸಕರ ಸಂಬಳವನ್ನು ರೂ. ೫೦೦೦/–ಕ್ಕೆ ಹೆಚ್ಚಿಸಿತು. ನಂತರ ಬಂದ ಸರಕಾರದಲ್ಲಿ ರೂ. ೮೦೦೦ ರಿಂದ ೧೦೦೦೦/– ವರೆಗೆ ಹೆಚ್ಚಿಸಲಾಯಿತು. ಈ ಮಧ್ಯೆ ಆಗೊಮ್ಮೆ ಈಗೊಮ್ಮೆ ಕೆ.ಪಿ.ಎಸ್.ಸಿ. ಮೂಲಕ ಕೆಲ ಹುದ್ದೆಗಳನ್ನು ತುಂಬಲಾಯಿತು. ಅದು ಮೆರಿಟ್ ಹಾಗೂ ಸಂದರ್ಶನವೆಂಬ ಪ್ರಹಸನದ ಮೂಲಕ. ನಂತರ ಬಿ. ಜೆ. ಪಿ. ಸರಕಾರದಲ್ಲಿ ಉನ್ನತ ಶಿಕ್ಷಣ ಸಚಿವ ಅರವಿಂದ ಲಿಂಬಾವಳಿಯವರು ಕೆ.ಪಿ.ಎಸ್.ಸಿ. ಮೂಲಕ ೨೫೦೦ ಉಪನ್ಯಾಸಕರ ಹುದ್ದೆಗಳನ್ನು ಭರ್ತಿ ಮಾಡಿದರು. ಈ ನೇಮಕಾತಿಯಲ್ಲಿ ಕರ್ನಾಟಕದ ವಿ.ವಿ.ಗಳಲ್ಲಿ ಎಂ.ಫಿಲ್., ಪಿಎಚ್.ಡಿ. ಹಾಗೂ ನೆಟ್/ಸ್ಲೆಟ್ ಮತ್ತು ಗೋಲ್ಡ್ ಮೆಡಲ್ ಪಡೆದವರು ಸಹ ಆಯ್ಕೆಯಾಗದೆ, ಹೊರರಾಜ್ಯಗಳಿಂದ ದೂರಶಿಕ್ಷಣದ ಮೂಲಕ ಎಂ.ಫಿಲ್. ಪಡೆದವರು ಹೆಚ್ಚಿನ ಸಂಖ್ಯೆಯಲ್ಲಿ ಆಯ್ಕೆಯಾದರು. ಇದನ್ನು ವಿರೋಧಿಸಿ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ ಹಾಗೂ ಅಖಿಲ ಭಾರತ ಯುವಜನ ಫೆಡರೇಶನ್ ನೇತೃತ್ವದಲ್ಲಿ ರಾಜ್ಯಾದ್ಯಂತವಾಗಿ ಚಳುವಳಿ ನಡೆಸಲಾಯಿತು. ಹಾಗೂ ಬೆಳಗಾವಿಯಲ್ಲಿ ನಡೆದ ವಿಶೇಷ ಅಧಿವೇಶನ ಸಂದರ್ಭದಲ್ಲಿ ರೈಲು ನಿಲ್ದಾಣದಿಂದ ಜಿಲ್ಲಾಧಿಕಾರಿ ಕಛೇರಿಯವರೆಗೆ ತೆರಳಿ ಅಹೋರಾತ್ರಿ ಅರೆಬೆತ್ತಲೆ ಚಳುವಳಿ ನಡೆಸಲಾಯಿತು. ಅಧಿವೇಶನದಲ್ಲಿ ಬಿಸಿ ಬಿಸಿ ಚರ್ಚೆಯೂ ಆಯಿತು. ಹಲವಾರು ಆಡಳಿತ ಪಕ್ಷದ ಮಂತ್ರಿಗಳು ಹಾಗೂ ವಿರೋಧ ಪಕ್ಷದ ನಾಯಕರು ಚಳುವಳಿ ನಡೆದ ಜಾಗಕ್ಕೆ ಬಂದು ತಪ್ಪು ಸರಿಪಡಿಸುವುದಾಗಿ ಆಶ್ವಾಸನೆ ಕೊಟ್ಟರು. ಆಶ್ವಾಸನೆ ಹಾಗೆಯೇ ಉಳಿಯಿತು. ಈ ನೇಮಕಾತಿಯ ಕುರಿತು ಸರ್ವೋಚ್ಚ ನ್ಯಾಯಾಲಯದಲ್ಲಿ ಕೇಸು ನಡೆಯುತ್ತಿದೆ. ೨೦೧೪ ರಲ್ಲಿ ಧಾರವಾಡದ ಜಿಲ್ಲಾಧಿಕಾರಿ ಕಛೇರಿಯ ಮುಂದೆ ಅತಿಥಿ ಉಪನ್ಯಾಸಕರಿಂದ ತಮ್ಮ ಹಲವಾರು ಬೇಡಿಕೆಗಳ ಈಡೇರಿಕೆಗಾಗಿ ಒಂದು ವಾರ ಕಾಲ ಅಹೋರಾತ್ರಿ ಧರಣಿ ನಡೆಸಲಾಯಿತು. ಸರಕಾರದ ಜೊತೆ ಮಾತುಕತೆ ನಡೆದು ಹಲವು ಬೇಡಿಕೆಗಳನ್ನು ಈಡೇರಿಸುವುದಾಗಿ ಸರಕಾರ ಆಶ್ವಾಸನೆ ಕೊಟ್ಟಿತು. ಅದರಲ್ಲಿ, ಕೆಲಸ ಮಾಡುವ ಕಾಲೇಜುಗಳಲ್ಲೇ ಉಪನ್ಯಾಸಕರನ್ನು ಅತಿಥಿ ಉಪನ್ಯಾಸಕರನ್ನಾಗಿ ಮುಂದುವರಿಸುವ ಬೇಡಿಕೆಯನ್ನು ಈಡೇರಿಸಿದೆ. ಇನ್ನೂ ಹಲವು ಬೇಡಿಕೆಗಳು ಹಾಗೆಯೇ ಉಳಿದಿವೆ. ಕಾಂಗ್ರೆಸ್ ಸರಕಾರ ಕೆಲವು ಹುದ್ದೆಗಳನ್ನು ತುಂಬಿಕೊಳ್ಳಲು ಹೊರಟಿರುವದು ಸ್ವಾಗತಾರ್ಹ. ಆದರೆ, ಅದು ವಿಸ್ತೃತವಾಗಿ ಜಾರಿಗೆ ಬರಬೇಕು. ಉನ್ನತ ಶಿಕ್ಷಣ ಸಚಿವರು ಇತ್ತೀಚಿನ ಹೇಳಿಕೆಯಲ್ಲಿ ೫೭ ಲಕ್ಷ ವಿದ್ಯಾರ್ಥಿಗಳು ಉನ್ನತ ಶಿಕ್ಷಣ ಪಡೆಯಬೇಕಾದವರು ಕಾಲೇಜುಗಳಿಂದ ಹೊರ ಉಳಿದಿದ್ದಾರೆಂದು ಹೇಳಿದ್ದಾರೆ. ಇದಕ್ಕನುಗುಣವಾಗಿ ಕಾಲೇಜುಗಳನ್ನು ತೆರೆಯುವದು ಹಾಗೂ ಉಪನ್ಯಾಸಕರನ್ನು ಭರ್ತಿ ಮಾಡಲು ಸರಕಾರ

## ಅಭಿನಂದನೆ

ಕರ್ನಾಟಕ ಲೇಖಕಿಯರ ಸಂಘವು ೨೦೧೧–೨೦೧೩ರಲ್ಲಿ ಪ್ರಕಟಿತ ಅನುವಾದಿತ ಕೃತಿಗಾಗಿ ನೀಡುವ ಎಚ್.ವಿ.ಸಾವಿತ್ರಮ್ಮ ಪ್ರಶಸ್ತಿಯನ್ನು ಡಾ॥ ಆರ್. ಪೂರ್ಣಿಮಾ ಅನುವಾದಿಸಿದ 'ಒಂದು ಜೀವನ ಸಾಲದು' ಕೃತಿಗಾಗಿ ನೀಡಿ ಗೌರವಿಸಿದೆ. ಈ ಪುಸ್ತಕದ ಪ್ರಕಾಶಕರಾದ ನವಕರ್ನಾಟಕ ಹಾಗೂ ಹೊಸತು ಪತ್ರಿಕಾ ಬಳಗ ಡಾ॥ ಪೂರ್ಣಿಮಾ ಅವರನ್ನು ಅಭಿನಂದಿಸುತ್ತದೆ.

ಕ್ರಿಯಾಶೀಲವಾಗಬೇಕು. ಆದರೆ, ಯಾವ ಸರಕಾರಗಳೂ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ನೀಡುತ್ತಿಲ್ಲ. ಶಿಕ್ಷಣ ಹಾಗೂ ಆರೋಗ್ಯ ಕ್ಷೇತ್ರಗಳನ್ನು ಕಡೆಗಣಿಸಿದ ಯಾವುದೇ ದೇಶ ಅಭಿವೃದ್ಧಿ ಹೊಂದಲು ಸಾಧ್ಯವಿಲ್ಲ. ಭಾರತ ದೇಶದ ಶಿಕ್ಷಣ ಕ್ಷೇತ್ರಕ್ಕೆ ಒಟ್ಟು ರಾಷ್ಟ್ರೀಯ ಉತ್ಪನ್ನದ ಶೇ. ೬ರಷ್ಟು ಹಣವನ್ನು ಮೀಸಲಿಡಬೇಕೆಂಬ ಬೇಡಿಕೆ ಹಲವು ದಶಕಗಳಿಂದ ಹಾಗೇ ಉಳಿದಿದೆ. ೧೯೬೦ ದಶಕದಲ್ಲಿ ಕೇಂದ್ರ ಸರಕಾರವೇ ನೇಮಿಸಿದ್ದ ಕೊಠಾರಿ ಆಯೋಗದ ಶಿಫಾರಸ್ಸು ಇದನ್ನೇ ಹೇಳಿದೆ. ಜಗತ್ತಿನ ಇತರ ದೇಶಗಳಾದ ಕ್ಯೂಬಾ ತನ್ನ ಒಟ್ಟು ರಾಷ್ಟ್ರೀಯ ಉತ್ಪನ್ನ (ಜಿಡಿಪಿ)ಯ ಶೇ. ೧೮.೭ರಷ್ಟು ಹಣವನ್ನು ಶಿಕ್ಷಣಕ್ಕೆ ವ್ಯಯಿಸುತ್ತಿದೆ. ಅದೇ ರೀತಿ ಕೀನ್ಯಾ ಶೇ. ೭ರಷ್ಟು, ಮಲೇಷ್ಯಾ ಶೇ. ೮.೧, ದಕ್ಷಿಣ ಆಫ್ರಿಕಾ ಶೇ. ೫.೩ರಷ್ಟನ್ನು ವ್ಯಯಿಸುತ್ತಿವೆ. ಆದರೆ ಭಾರತ ಕೇವಲ ೨.೧ರಷ್ಟನ್ನು ಮಾತ್ರ ನೀಡುತ್ತಿದೆ. ೧೯೯೧ರ ನಂತರ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಹಾಗೂ ಬಿ. ಜೆ. ಪಿ. ನೇತೃತ್ವದ ಎಲ್ಲ ಕೇಂದ್ರ ಸರಕಾರಗಳು ಜಾರಿಗೊಳಿಸಿದ ಉದಾರೀಕರಣ, ಜಾಗತೀಕರಣ ನೀತಿಗಳ ಪರಿಣಾಮ ನಿರಂತರವಾಗಿ ಶಿಕ್ಷಣಕ್ಕೆ ನೀಡುತ್ತಿರುವ ಹಣವನ್ನು ಕಡಿಮೆಗೊಳಿಸಿವೆ. ಬದಲಾಗಿ ಶ್ರೀಮಂತರಿಗೆ ತೆರಿಗೆ ವಿನಾಯಿತಿ ನೀಡುತ್ತಿವೆ. ದೇಶದಲ್ಲಿ ಶಿಕ್ಷಣ ವ್ಯಾಪಾರೀಕರಣ ಹಾಗೂ ಖಾಸಗೀಕರಣ ನೀತಿಗಳನ್ನು ತೀವ್ರಗೊಳಿಸಲಾಗಿದೆ. ಇದರ ಪರಿಣಾಮ ದೇಶದಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳ ಸಂಖ್ಯೆ ಶೇ. ೫೮ರಿಂದ ೬೩.೮೮ರಷ್ಟು ಹೆಚ್ಚಳವಾಗಿವೆ. ಕೇಂದ್ರದ ಯುಪಿಎ ೨ ಸರ್ಕಾರ ಅಧಿಕಾರಕ್ಕೆ ಬಂದ ನಂತರ ಉನ್ನತ ಶಿಕ್ಷಣದ ಮೇಲೆ ಹೊಸ ದಾಳಿಯನ್ನು ಪ್ರಾರಂಭಿಸಿತು. ಉನ್ನತ ಶಿಕ್ಷಣದ ನೀತಿ ನಿರೂಪಕ ಸಂಸ್ಥೆಗಳಾದ ಯು.ಜಿ.ಸಿ, ಎ.ಐ.ಸಿ.ಟಿ.ಇ., ಎಂ.ಸಿ.ಐ. ಗಳನ್ನು ಶಕ್ತಿಹೀನಗೊಳಿಸಿತು. ಬಿ. ಜೆ. ಪಿ. ಸರಕಾರ ಅದನ್ನು ಹಾಗೇ ಮುಂದುವರಿಸಿದೆ. ಈಗ ಉಳಿದಿರುವ ದಾರಿ ಅತಿಥಿ ಉಪನ್ಯಾಸಕರು, ವಿದ್ಯಾರ್ಥಿಗಳು, ಪ್ರಗತಿಪರ ಸಂಘಟನೆಗಳು ಹಾಗೂ ಜನಸಾಮಾನ್ಯರು ಈ ನೀತಿಗಳ ವಿರುದ್ಧ ಸಂಘಟಿತ, ಐಕ್ಯ ಹೋರಾಟವನ್ನು ನಡೆಸಬೇಕಾಗಿದೆ. ಅತಿಥಿ ಉಪನ್ಯಾಸಕರ ಸಮಸ್ಯೆಗಳು ಮಾತ್ರವಲ್ಲ ಶಿಕ್ಷಣದಲ್ಲಿರುವ ಹಲವು ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳಲು ಸಾಧ್ಯವಾಗಬಹುದು.

**ಕೆ. ಎಸ್. ಜನಾರ್ಧನ**
ಘಾಟೆ ಭವನ, ವೈಯ್ಯಾಲಿಕಾವಲ್
ಬೆಂಗಳೂರು - ೫೬೦ ೦೦೩

## ಸುಪಾರಿ

ಸುಪಾರಿ
ಹಂತಕರಿಗೆ
ಹಣ ಕೊಟ್ಟರೆ
ಅವರ ಕೆಲಸ ಮುಗಿಸುವರು.

ಆದರೆ
ಈ ಸುಪಾರಿ ಹಂತಕರಿಗಿಂತ
ಸುಪಾರಿ ಚಿಂತಕರು
ಅಪಾಯಕಾರಿಯಾಗಿ
ಕಾಣುವರು.

**ದ್ವಾರನಕುಂಟೆ ಪಾತಣ್ಣ**
ಎಚ್.ಎಂ.ಟಿ. ಲೇಔಟ್, ನಾಗಸಂದ್ರ ಅಂಚೆ
ಬೆಂಗಳೂರು - ೫೬೦ ೦೭೩




# ಆ(ರ)ದ ಗಾಯಗಳು



**ರಾ**ತ್ರಿ ಚಿಮಿಣಿ ದೀಪದ
ಮಂದ ಬೆಳಕು
ಮುರುಕು ಗುಡಿಸಿಲಿನಲಿ
ತುಂಡು ಬಟ್ಟೆಯ ದೇಹಕೆ
ಹರಕು ಚಾದರ್ ಹೊದ್ದರೂ
ಮೈ ಕೊರೆಯುವ ಚಳಿ
ಗಂಜಿ ಒಲೆಯ ಬೆಂಕಿಗೆ
ಕರಿ ಕೈ-ಕಾಲುಗಳ ಕಾಸುತ್ತ
ಗುಳಿಬಿದ್ದ ಕಣ್ಣಿನಲಿ
ಏನೇನೋ ಆಸೆಗಳು
ತಲೆಯ ತಪ್ಪಲೆಯಲ್ಲಿ
ಚಿಂತೆಗಳದೇ ಸಂತೆ
ರಾಗ-ವಿರಾಗ, ತಾಳ-ಹರತಾಳ
ಬಾಣಲೆಯ ಮುಚ್ಚಳ ತೆರೆದಾಗ
ಅಪಮಾನದ ಬದುಕಿನ
ಜ್ವಾಲೆಯ ಕಿಡಿಗಳು ಭುಗಿಲೆದ್ದು
ಕೊತಕೊತನೆ ಕುದಿಯುವ
ಶೋಷಣೆಯ ಕಥೆಗಳು
ಉಕ್ಕಿ ಉಕ್ಕಿ ಬರುತ್ತವೆ
ಗಂಗಾಳದಲ್ಲಿ ಬಿಸಿಗಂಜಿ ಹಾಕಿ
ನಿಧಾನ ಕುಡಿದು
ಹರಿದ ಗೋಣಿಗೆ ಒರಗಿ
ಕಣ್ಣು ಮುಚ್ಚಿದರೂ

ರಾತ್ರಿಯೆಲ್ಲಾ ನಿದ್ದೆಕೆಡಿಸಿ
ಪೀಡಿಸಿ ಕಾಡುವ
ಆಸ್ತಮರೋಗದ ಕಫದಂತೆ
ಮೈಯೆಲ್ಲಾ ಕಜ್ಜಿ ತುರಿಕೆಯ

ಯಮಯಾತನೆ ಸಹಿಸಲಾಗದೆ
ಮೈಪರಚಿಕೊಳ್ಳುವಂತೆ
ಕಟ್ಟಿರುವೆಗಳ ಹಿಂಡು
ಒಟ್ಟಿಗೆ ಕಚ್ಚಿದಂತೆ
ಎಷ್ಟೊಂದು ಹಿಂಸೆಗಳು
ಅಂತರಂಗದ ಆಳದಿಂದ
ಸ್ವಾಭಿಮಾನ ಹೆಡೆ ಎತ್ತಿದಾಗ
ಕುಲುವೆಯ ತಿದಿ
ಬುಸುಗುಡುವಂತೆ
ಬುಸುಗುಡುತ್ತೇನೆ
ಕಣ್ಣುಗಳು ಕೆಂಡದುಂಡೆಯಾದರೂ
ಬೆಳಕಿನ ಹಂಬಲಕ್ಕಾಗಿ
ಪರಿತಪಿಸುತ
ಅವುಗಳನ್ನೆಲ್ಲಾ ಕಲ್ಲಾಗಿ
ಅಹಲ್ಯೆಯಂತೆ - ಸಹಿಸುತ್ತೇನೆ
ರೆಪ್ಪೆ ಮುಚ್ಚಿದರೆ
ಪುನಃ ಪುನಃ ಆವರಿಸುವ
ಅದೇ ಅದೇ ಕಹಿ ನೆನಪಿನ
ಆಘಾತಗಳು
ಮರೆತುಬಿಡಲೂ ಆಗದ
ಮೈಮನ ಹಿಂಸಿಸುವ
ಎಂದಿಗೂ ಮಾಸದ
ಆರದ ಗಾಯಗಳು

**ಮೇಟಿ ಮುದಿಯಪ್ಪ**
ಪ್ರಾಂಶುಪಾಲರು
ಸರಕಾರಿ ಪದವಿ ಪೂರ್ವ ಕಾಲೇಜು
ಮಲ್ಪೆ - ೫೭೬ ೧೦೮

# ಹಿಂದೂಧರ್ಮದ ವೈಲಕ್ಷಣ್ಯಗಳು

ವೇದಗಳಲ್ಲಿ ಉಕ್ತವಾಗಿರುವ ಧರ್ಮವನ್ನೇ ವೈದಿಕಧರ್ಮ ಎಂದು ಕರೆಯುತ್ತಾರೆ. ಸಾವಿರಾರು ವರ್ಷಗಳಷ್ಟು ಪುರಾತನವಾದ ಇದನ್ನು ಸನಾತನಧರ್ಮ ಎಂದೂ ಕರೆಯುತ್ತಾರೆ. ಸನಾತನ ಎನ್ನುವುದಕ್ಕೆ ಶಾಶ್ವತ ಎಂಬ ಇನ್ನೊಂದು ಅರ್ಥ ಇದೆಯಾದರೂ ಅದನ್ನು ಇದಕ್ಕೆ ಅನ್ವಯಿಸಬೇಕಾಗಿಲ್ಲ. ಏಕೆಂದರೆ ಯಾವ ಧರ್ಮವೂ ಅಮರ ಅಲ್ಲದಿರುವುದರಿಂದ ಸನಾತನಧರ್ಮವೂ ಶಾಶ್ವತವಲ್ಲ. ಅಲ್ಲದೆ, ವೇದವು ನಿರ್ದಿಷ್ಟವಾಗಿ ಧರ್ಮವೊಂದನ್ನು ಬೋಧಿಸುವ ಗ್ರಂಥವಲ್ಲ.

ಭಾರತಕ್ಕೆ ಬಂದ ವಲಸಿಗರು ಮತ್ತು ಆಕ್ರಮಣಕಾರರು ವೈದಿಕಧರ್ಮವನ್ನು 'ಹಿಂದೂಧರ್ಮ' ಎಂದು ಕರೆದರು. ಹಿಂದೂಧರ್ಮವನ್ನು ಅನುಸರಿಸುವ ಮಂದಿ ಹಿಂದುಗಳೆನಿಸಿಕೊಂಡರು. ಆ ಕಾಲಕ್ಕೆ ಜೈನರು ಮತ್ತು ಬೌದ್ಧರನ್ನು ಹೊರತುಪಡಿಸಿ, ಬಹುಸಂಖ್ಯಾತರಾಗಿದ್ದ ಹಿಂದುಗಳು ವಾಸಿಸುವ ದೇಶ ಹಿಂದೂ ದೇಶ ಎನಿಸಿಕೊಂಡಿತು. ಈ ದೇಶದ ಚರಿತ್ರೆಯನ್ನು 'ಹಿಂದೂ ದೇಶದ ಚರಿತ್ರೆ' ಎಂದೂ ಕರೆಯಲಾಯಿತು. ಮಧ್ಯಯುಗದಲ್ಲಿ ಸೃಷ್ಟಿಯಾದ ಹಿಂದೂಧರ್ಮವು ಸ್ವಾತಂತ್ರ್ಯಾನಂತರ ಒಂದು ರೀತಿಯ ಚುಂಬಕ ಶಕ್ತಿಯನ್ನು ಪಡೆದುಕೊಂಡು, ಒಂದು ವರ್ಗದವರಿಗೆ ಅಫೀಮು ರೀತಿಯಲ್ಲಿ ಮಾದಕವಾಗಿ 'ಹಿಂದುತ್ವ' ಎಂಬ ಗುಣವಾಚಕದೊಂದಿಗೆ ಉಗ್ರತ್ವವನ್ನು ಪಡೆದುಕೊಳ್ಳುತ್ತಿದೆ. ಪ್ರಪಂಚದಲ್ಲಿ ಅಸ್ತಿತ್ವದಲ್ಲಿರುವ ಬೇರೆ ಬೇರೆ ಧರ್ಮಗಳಿಗೆ ಆಯಾ ಧರ್ಮದ 'ಪ್ರವರ್ತಕ'ರಿದ್ದಾರೆ. ಆದರೆ ವೈದಿಕಧರ್ಮ ಉರುಫ್ ಹಿಂದೂಧರ್ಮಕ್ಕೆ ಯಾವ ಪ್ರವರ್ತಕನೂ ಇಲ್ಲ.

ವೇದಗಳನ್ನು 'ಅಪೌರುಷೇಯ' – ಎಂದರೆ ಮಾನವನಿರ್ಮಿತವಲ್ಲ ಎಂದು ಹೇಳುತ್ತಾರೆ. ಬೇರೆ ರೀತಿಯಲ್ಲಿ ಹೇಳುವುದಾದರೆ ವೇದವು 'ದೇವವಾಣಿ' ಎಂದು ನಂಬುತ್ತಾರೆ. ಅದನ್ನು ದೇವವಾಣಿ ಎಂದೇಕೆ ಸಮರ್ಥಿಸುತ್ತಾರೆಂದರೆ, ವೇದಗಳಲ್ಲಿ ಉಕ್ತವಾಗಿರುವುದು ಭಗವದ್ವಾಣಿಯಾಗಿರುವುದರಿಂದ ಅದನ್ನು ಯಾರೂ ಪ್ರಶ್ನಿಸದೆ ಶ್ರದ್ಧಾಪೂರ್ವಕವಾಗಿ ನಂಬಿ, ಅದರಂತೆ ನಡೆದುಕೊಳ್ಳಲಿ ಎಂಬ ಉದ್ದೇಶದಿಂದ. ಇದು ಹಿಂದೂಧರ್ಮದ ಮೊದಲ ವೈಲಕ್ಷಣ್ಯ.

ಯಾರೂ ಏಕೆ ಪ್ರಶ್ನಿಸಬಾರದು ? ಈ ಕುರಿತು ಸ್ವಲ್ಪ ವಿಶ್ಲೇಷಣೆ ಅನಿವಾರ್ಯ. ಋಗ್ವೇದದ 'ಪುರುಷಸೂಕ್ತ' ಎಂಬ ಭಾಗದಲ್ಲಿ ಚಾತುರ್ವರ್ಣ್ಯದ ಬೀಜಾಂಕುರವಾಗಿದೆ. ವಿರಾಟ್ ಸ್ವರೂಪನಾದ

**ಎ. ಆರ್. ನಾರಾಯಣಘಟ್ಟ**

ವಿಶ್ವಂಭರನ ಮುಖದಿಂದ ಬ್ರಾಹ್ಮಣ, ಬಾಹುಗಳಿಂದ ಕ್ಷತ್ರಿಯ, ಊರುಗಳಿಂದ ವೈಶ್ಯ ಹಾಗೂ ಪಾದಗಳಿಂದ ಶೂದ್ರ ಉದ್ಭವಿಸಿದರೆಂದು ಹೇಳಲಾಗಿದೆ. ಈ ಚಾತುರ್ವರ್ಣ್ಯ ವಿಭಜನೆ ಅತಿಮುಖ್ಯವಾದುದೆಂದು ಭಾವಿಸಿದ್ದರಿಂದ ಅದು ಮುಂದಿನ ಮೂರೂ ವೇದಗಳಲ್ಲಿ ಪುನರಾವರ್ತನೆಯಾಗಿದೆ. ವೇದಮಂತ್ರಗಳು ದೇವವಾಣಿಯಾದಂತೆಯೇ ಚಾತುರ್ವರ್ಣ್ಯವೂ ದೇವಪ್ರಣೀತ ಎಂದು ಎಲ್ಲರೂ ತಿಳಿದುಕೊಂಡು ಅದರಂತೆ ತಮ್ಮ ಆಚರಣೆಗಳನ್ನು ರೂಪಿಸಿಕೊಳ್ಳಬೇಕು ಎನ್ನುವುದೇ ಅದರ ಆಶಯ.

ವೈದಿಕಧರ್ಮವನ್ನು ನಾಲ್ಕೂ ವರ್ಣದವರು ಯಾವಯಾವ ರೀತಿಯಲ್ಲಿ ಆಚರಿಸಬೇಕು ಎನ್ನುವುದನ್ನು ಸ್ಮೃತಿಗಳು ಅತ್ಯಂತ ವ್ಯಾಪಕವಾಗಿ ನಿರೂಪಿಸಿವೆ. ಸ್ಮೃತಿ ವಾಕ್ಯಗಳನ್ನೂ ಶ್ರುತಿ (ವೇದ) ವಾಕ್ಯಗಳ ರೀತಿಯಲ್ಲಿಯೇ ಯಾರೂ ಟೀಕಿಸದೆ ಮೌನಸಮ್ಮತಿಯಿಂದ ಅವುಗಳಲ್ಲಿ ಉಕ್ತವಾಗಿರುವುದನ್ನು ಚಾಚೂತಪ್ಪದೆ ಅನುಷ್ಠಾನದಲ್ಲಿ ತರಬೇಕೆನ್ನುವುದೇ ಇದರ ಹಿಂದಿರುವ ಹುನ್ನಾರ.

ಅನ್ಯಧರ್ಮಗಳಲ್ಲಿ ಇಲ್ಲದಿರುವ ವರ್ಣವ್ಯವಸ್ಥೆ ಹಿಂದೂಧರ್ಮದ ಒಂದು ವೈಲಕ್ಷಣ್ಯವಾಗಿದೆ. ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿನ ನಾಲ್ಕೂ ವರ್ಣಗಳು ಒಂದಕ್ಕೊಂದು ಸಮವಲ್ಲ. ಶೂದ್ರನು ಕನಿಷ್ಠನಾದರೆ ಬ್ರಾಹ್ಮಣ ಜ್ಯೇಷ್ಠ ಮತ್ತು ಶ್ರೇಷ್ಠ. ವರ್ಣಗಳು ವರ್ತುಲಾಕಾರದಲ್ಲಾಗಲೀ, ಸಮತಲವಾಗಿಯಾಗಲೀ ಇರದೆ, ಒಂದರಮೇಲೊಂದರಂತೆ ಲಂಬಾಕಾರವಾಗಿವೆ. ಅಂದರೆ, ಅತ್ಯಂತ ತಳದಲ್ಲಿ ಶೂದ್ರ, ಅವನ ಮೇಲೆ ವೈಶ್ಯ, ಅವನ ಮೇಲೆ ಕ್ಷತ್ರಿಯ ಹಾಗೂ ಅವನ ಮೇಲೆ ಬ್ರಾಹ್ಮಣ. ತುತ್ತತುದಿಯಲ್ಲಿರುವ ಇವನು ಸರ್ವಶ್ರೇಷ್ಠ. ಇದು ಸ್ಮೃತಿ ನಿರ್ವಚನ. ಇದು ವೈಲಕ್ಷಣ್ಯದೊಳಗಿನ ವೈಲಕ್ಷಣ್ಯವಾಗಿದೆ.

ಎಲ್ಲ ಧರ್ಮಗಳಲ್ಲಿ ಸಾಮಾನ್ಯವಾಗಿ ಅಪರಾಧ ವೆಸಗಿದವರಿಗೆ ಅಪರಾಧಕ್ಕೆ ತಕ್ಕ ಶಿಕ್ಷೆಯಾಗುತ್ತದೆ. ಸಮಾನ ಅಪರಾಧಕ್ಕೆ ಸಮಾನ ಶಿಕ್ಷೆ ಎನ್ನುವುದೇ ನಾಗರಿಕ ಪ್ರಪಂಚದ ನೀತಿ. ಆದರೆ ಹಿಂದೂ ಧರ್ಮದಲ್ಲಿ, ಬ್ರಿಟಿಷ್ ಪ್ರಭುತ್ವ ರೂಪಿಸಿದ ದಂಡ ಪ್ರಕ್ರಿಯಾಸಂಹಿತೆ ಜಾರಿಗೆ ಬರುವ ತನಕ ಒಂದೇ ರೀತಿಯ ಅಪರಾಧಕ್ಕೆ ಬೇರೆ ಬೇರೆ ವರ್ಣದವರಿಗೆ ಬೇರೆ ಬೇರೆ ರೀತಿಯ ಶಿಕ್ಷೆಯನ್ನು ಧರ್ಮಶಾಸ್ತ್ರದ ಅನುಸಾರ ಕೊಡಲಾಗುತ್ತಿತ್ತು. ಶೂದ್ರನೋರ್ವ ಮಾಡಿದ ಯಾವುದೋ ಘೋರ ಅಪರಾಧವೊಂದಕ್ಕೆ ಮರಣದಂಡನೆಯನ್ನು ವಿಧಿಸಿದರೆ, ಅದೇ ರೀತಿಯ ಅಪರಾಧವನ್ನೆಸಗಿದ ಬ್ರಾಹ್ಮಣನಿಗೆ ಮರಣದಂಡನೆಯಿಂದ ವಿನಾಯಿತಿ ನೀಡಿ, ಕೇವಲ ಸಾಮಾಜಿಕ ಬಹಿಷ್ಕಾರವನ್ನು ಮಾತ್ರ ವಿಧಿಸಲಾಗುತ್ತಿತ್ತು.

ಹಿಂದೂಧರ್ಮದ ಇನ್ನೊಂದು ವೈಲಕ್ಷಣ್ಯವೆಂದರೆ ಅಸ್ಪೃಶ್ಯತೆ. ಅನ್ಯಧರ್ಮಗಳಲ್ಲಿಲ್ಲದ ಅಸ್ಪೃಶ್ಯತೆ

**ಹಿಂದೂಧರ್ಮದ ವೈಲಕ್ಷಣ್ಯಗಳಲ್ಲಿ ಕೂಡಲೇ ಎದ್ದುಕಾಣುವಂಥದು ಎಂದರೆ, ಶ್ರೇಣೀಕೃತವೂ ವಂಶಪಾರಂಪರ್ಯವೂ ಆಗಿರುವ ಜಾತಿಪದ್ಧತಿ. ಇದು ವರ್ಣವ್ಯವಸ್ಥೆ ಎಂಬ ಭ್ರಷ್ಟಗರ್ಭದಿಂದ ಜನಿಸಿದ 'ಶನಿಸಂತಾನ'ವೆಂದು ವಿಚಾರವಾದಿಗಳು ಹೇಳುತ್ತಾರೆ. ಆದರೂ ಇದು 'ಪಾಪದ ಕೂಸು' ಎಂಬ ಅರಿವು ಇನ್ನೂ ಅನೇಕರಿಗೆ ಬಂದಿಲ್ಲ. ಶಿಕ್ಷಣದಿಂದ ಜಾತಿಗಳು ನಾಶವಾಗುತ್ತವೆ ಎಂಬ ಅಭಿಪ್ರಾಯವೊಂದು ಚಾಲ್ತಿಯಲ್ಲಿದೆ. ಆದರೂ ಶಿಕ್ಷಣ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಮಂದಿ, ಅದರಲ್ಲೂ ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿರುವ ಉನ್ನತ ವಿದ್ಯಾವಂತರೂ ಜಾತಿಯ 'ವಜ್ರಬಂಧ'ದಿಂದ ತಮ್ಮನ್ನು ಬಿಡಿಸಿಕೊಳ್ಳಲಾರದವರಾಗಿ ಗಾಣದ ಎತ್ತುಗಳ ರೀತಿಯಲ್ಲಿ ಜಾತಿ ಪರಿಭ್ರಮಣದಲ್ಲಿ ನಿರತರಾಗಿದ್ದಾರೆ. ಹಿಂದೂಧರ್ಮದಲ್ಲಿರುವ ವಿಶಿಷ್ಟವಾದ ವೈಲಕ್ಷಣ್ಯವೆಂದರೆ, ಅವೈದಿಕ ಧರ್ಮಗಳಲ್ಲಿ ಕಾಣಿಸದಂಥ ಕರ್ಮಸಿದ್ಧಾಂತ. ವ್ಯಕ್ತಿಯೋರ್ವ ತನ್ನ ಪ್ರಸ್ತುತ ಜನ್ಮದಲ್ಲಿ ಏನಾಗಿರುವನೋ ಅದಕ್ಕೆ ಪ್ರಾರಬ್ಧವೇ ಕಾರಣ; ಪ್ರಸ್ತುತ ಜನ್ಮದ ಸಂಚಿತವೇ ಮುಂದಿನ ಜನ್ಮದ ಬುತ್ತಿ – ಎನ್ನುತ್ತದೆ ಈ ಸಿದ್ಧಾಂತ. ಇದು ಕೇವಲ ಭಾವನಾತ್ಮಕವೋ ಅಥವಾ ವಸ್ತುನಿಷ್ಠವೋ ಎನ್ನುವುದು ಅವರವರ ನಂಬಿಕೆಗೆ ಬಿಟ್ಟ ವಿಚಾರವಾಗಿದೆಯಾದರೂ ಆಧ್ಯಾತ್ಮಿಕ ಗೋಪುರದ ಕಳಶ ಎಂದು ಖ್ಯಾತಿ ಪಡೆದಿರುವ ಗೀತೆಯೂ ಸಹ ಕರ್ಮಸಿದ್ಧಾಂತವನ್ನು ಸಮರ್ಥಿಸುವುದರಿಂದ ವೈಚಾರಿಕತೆಯ ಸೋಂಕಿಲ್ಲದ ಜನಸಾಮಾನ್ಯರು ಅದರ ಬಂಧನಕ್ಕೆ ಒಳಗಾಗುತ್ತಾರೆ.**



ನಿರ್ವಹಿಸುತ್ತಿರುವ ಉನ್ನತ ವಿದ್ಯಾವಂತರೂ ಜಾತಿಯ 'ವಜ್ರಬಂಧ'ದಿಂದ ತಮ್ಮನ್ನು ಬಿಡಿಸಿಕೊಳ್ಳಲಾರದವರಾಗಿ ಗಾಣದ ಎತ್ತುಗಳ ರೀತಿಯಲ್ಲಿ ಜಾತಿ ಪರಿಭ್ರಮಣದಲ್ಲಿ ನಿರತರಾಗಿದ್ದಾರೆ.

ಹಿಂದೂಧರ್ಮದಲ್ಲಿರುವ ವಿಶಿಷ್ಟವಾದ ವೈಲಕ್ಷಣ್ಯವೆಂದರೆ, ಅವೈದಿಕ ಧರ್ಮಗಳಲ್ಲಿ ಕಾಣಿಸದಂಥ ಕರ್ಮಸಿದ್ಧಾಂತ. ವ್ಯಕ್ತಿಯೋರ್ವ ತನ್ನ ಪ್ರಸ್ತುತ ಜನ್ಮದಲ್ಲಿ ಏನಾಗಿರುವನೋ ಅದಕ್ಕೆ ಪ್ರಾರಬ್ಧವೇ ಕಾರಣ; ಪ್ರಸ್ತುತ ಜನ್ಮದ ಸಂಚಿತವೇ ಮುಂದಿನ ಜನ್ಮದ ಬುತ್ತಿ – ಎನ್ನುತ್ತದೆ ಈ ಸಿದ್ಧಾಂತ. ಇದು ಕೇವಲ ಭಾವನಾತ್ಮಕವೋ ಅಥವಾ ವಸ್ತುನಿಷ್ಠವೋ ಎನ್ನುವುದು ಅವರವರ ನಂಬಿಕೆಗೆ ಬಿಟ್ಟ ವಿಚಾರವಾಗಿದೆಯಾದರೂ ಆಧ್ಯಾತ್ಮಿಕ ಗೋಪುರದ ಕಳಶ ಎಂದು ಖ್ಯಾತಿ ಪಡೆದಿರುವ ಗೀತೆಯೂ ಸಹ ಕರ್ಮಸಿದ್ಧಾಂತವನ್ನು ಸಮರ್ಥಿಸುವುದರಿಂದ ವೈಚಾರಿಕತೆಯ ಸೋಂಕಿಲ್ಲದ ಜನಸಾಮಾನ್ಯರು ಅದರ ಬಂಧನಕ್ಕೆ ಒಳಗಾಗುತ್ತಾರೆ.

ಅನ್ಯಧರ್ಮಗಳಲ್ಲಿ ಪುಣ್ಯ–ಪಾಪಗಳ ಪರಿಕಲ್ಪನೆ ಮತ್ತು ನಾಕ–ನರಕಗಳ ನಂಬಿಕೆ ಉಂಟಷ್ಟೆ. ಪುಣ್ಯಕ್ಕೆ ಸ್ವರ್ಗವೂ ಪಾಪಕ್ಕೆ ನರಕವೂ ಪ್ರಾಪ್ತವಾಗುತ್ತದೆ ಎಂಬ ನಂಬಿಕೆಯನ್ನು ಆಯಾ ಧರ್ಮಗಳು ಪ್ರತಿಪಾದಿಸುತ್ತಿವೆಯಾದರೂ ಆ ಧರ್ಮಗಳಿಗೆ ಪುನರ್ಜನ್ಮದಲ್ಲಿ ನಂಬಿಕೆ ಇಲ್ಲ. ಅದಕ್ಕೆ ಭಿನ್ನವಾಗಿ ಹಿಂದೂಧರ್ಮ ಪುನರ್ಜನ್ಮವನ್ನು ಸೃಷ್ಟಿಸಿದೆ. ಅದರ ಪ್ರಕಾರ ವ್ಯಕ್ತಿಯೋರ್ವ ತನ್ನ ಮರಣಾನಂತರ ತನ್ನ ಪ್ರಾರಬ್ಧಕ್ಕೆ ಅನುಸಾರವಾಗಿ ಪುನರ್ಜನ್ಮವನ್ನು ಪಡೆದು, ಪಾಪ–ಪುಣ್ಯಗಳಿಗೆ ಅನುಸಾರವಾಗಿ ದುಃಖ–ಸುಖವನ್ನು ಕಡ್ಡಾಯವಾಗಿ ಅನುಭವಿಸಬೇಕು. ಹಿಂದೂಧರ್ಮಕ್ಕೆ ಪರ್ಯಾಯವಾಗಿ ಜನಿಸಿದಂಥ ಜೈನ ಮತ್ತು ಬೌದ್ಧಧರ್ಮಗಳು ಹಿಂದೂ ಪ್ರಭಾವದಿಂದ ಪಾರಾಗಲಾರದೆ ಪುನರ್ಜನ್ಮ ಸಿದ್ಧಾಂತವನ್ನು ಸ್ವಲ್ಪಮಟ್ಟಿಗೆ ಅನುಮೋದಿಸುತ್ತವೆ. ಅನ್ಯಧರ್ಮಗಳಲ್ಲಿಲ್ಲದ 'ಆತ್ಮ'ದ ಪರಿಕಲ್ಪನೆ ಹಿಂದೂಧರ್ಮದಲ್ಲಿದೆ. ಆತ್ಮ, ಪರಮಾತ್ಮನ ಅಂಶ ಎನ್ನುತ್ತವೆ ಉಪನಿಷತ್ತುಗಳು. ಆತ್ಮಕ್ಕೆ ಮರಣವಿಲ್ಲ; ಅದನ್ನು ಗಾಳಿ ನೂಕಲಾರದು, ನೀರು ತೋಯಿಸಲಾರದು, ಬೆಂಕಿ ಸುಡಲಾರದು, ಅದು ಅಮರ ಎನ್ನುತ್ತದೆ ಗೀತೆ. ಮುಪ್ಪು ಮತ್ತು ಮರಣ ಕೇವಲ ದೇಹಕ್ಕೆ ಮಾತ್ರವೇ; ಆತ್ಮ ಅಜರಾಮರ ಎಂಬ ಭರವಸೆಯನ್ನು ಕೊಡುವುದು ಹಿಂದೂಧರ್ಮದ ಒಂದು ವಿಶಿಷ್ಟ ಲಕ್ಷಣ.

ವೇದಗಳಲ್ಲಿ ಇಂದ್ರ, ಅಗ್ನಿ, ವರುಣ, ವಾಯು ಮುಂತಾದ ದೇವತೆಗಳಿದ್ದಾರೆ. ಅವರನ್ನು ಆರಾಧಿಸಿ, ಜೀವನ ನಿರ್ವಹಣೆಗೆ ಬೇಕಾದ ಪರಿಕರಗಳನ್ನು ಪಡೆಯುವುದು ವೇದಕಾಲೀನರ ಉದ್ದೇಶವಾಗಿತ್ತು. ಒಳ್ಳೆಯ ಮಳೆ, ಉತ್ತಮ ಬೆಳೆ, ಗೋವುಗಳ ಸಮೃದ್ಧಿ, ಉತ್ತಮ ಸಂತಾನ ಇವು ಅವರ ಮುಖ್ಯವಾದ ಬೇಡಿಕೆಗಳಾಗಿದ್ದವು. ಅವುಗಳನ್ನು ಪಡೆಯಬೇಕಾದರೆ ದೇವತೆಗಳನ್ನು ತೃಪ್ತಿಪಡಿಸಬೇಕು. ಅದಕ್ಕಾಗಿ ಯಜ್ಞದ ಮೂಲಕ ಅವರಿಗೆ ಹವಿಸ್ಸನ್ನು ಅರ್ಪಿಸಬೇಕು; ಅದನ್ನು ತಲುಪಿಸುವ ಮಧ್ಯವರ್ತಿ ಎಂದರೆ ಅಗ್ನಿ.

ಉಪನಿಷತ್ತುಗಳ ಕಾಲಕ್ಕೆ 'ಈಶ'ನ ಸೃಷ್ಟಿಯಾಯಿತು. 'ಈಶ ಜಗತ್ತನ್ನೆಲ್ಲ ಆವರಿಸಿಕೊಂಡಿದ್ದಾನೆ; ಜಗತ್ತೇ ಅವನಾಗಿದ್ದಾನೆ' ಎಂದು ಘೋಷಿಸಿತು ಈಶೋಪನಿಷತ್ತು. ಈಶನನ್ನು ಒಲಿಸಿಕೊಳ್ಳಲು ಧ್ಯಾನ ಮತ್ತು ತಪಸ್ಸು ಪ್ರಾಧಾನ್ಯತೆ ಪಡೆದು, ಯಜ್ಞದ ಪ್ರಾಮುಖ್ಯತೆ ಕಡಿಮೆಯಾಯಿತು. ಆಗ ಈಶ ಪ್ರಧಾನನಾಗಿ, ಇಂದ್ರಾದಿಗಳು ವಿಶ್ವಂಭರ (ಈಶ)ನ ಅಧೀನ ದೇವತೆಗಳಾದರು. ಆದರೂ ಪುರೋಹಿತರ ತಂತ್ರದಿಂದ ಯಜ್ಞವೂ ಅಸ್ತಿತ್ವದಲ್ಲಿದೆ. ಇದೂ ಸಹ ಹಿಂದೂಧರ್ಮದ ಒಂದು ವೈಲಕ್ಷಣ್ಯವೆ !

ಹಿಂದೂಧರ್ಮದ ಮತ್ತೊಂದು ವೈಲಕ್ಷಣ್ಯವೆಂದರೆ, ಬೇರೆ ಯಾವ ಧರ್ಮದಲ್ಲಿಯೂ ಇಲ್ಲದ 'ಸ್ವಧರ್ಮ' ಸಿದ್ಧಾಂತ. ಆಯಾ ವರ್ಣಕ್ಕೆ ಅನುಗುಣವಾಗಿ ಮನುಧರ್ಮಶಾಸ್ತ್ರ ನಿಯೋಜಿಸಿರುವ ಕರ್ಮವನ್ನೇ ಸ್ವಧರ್ಮ ಎನ್ನಲಾಯಿತು. ಬ್ರಾಹ್ಮಣರಿಗೆ ವಿದ್ಯಾಬೋಧನೆ – ಪೌರೋಹಿತ್ಯ, ಕ್ಷತ್ರಿಯರಿಗೆ ಸಮರ – ಪ್ರಭುತ್ವ, ವೈಶ್ಯರಿಗೆ ವ್ಯಾಪಾರ – ವಾಣಿಜ್ಯ ಮತ್ತು ಶೂದ್ರರಿಗೆ ಕೃಷಿ – ಪಶುಪಾಲನೆ ಮೊದಲಾದ ಕರ್ಮಗಳನ್ನು ಕರ್ತವ್ಯಗಳೆಂದು ಆದೇಶಿಸಿ, ಅವುಗಳನ್ನು ವಂಶಪಾರಂಪರ್ಯವಾಗಿ ಆಚರಿಸುವುದನ್ನೇ ಸ್ವಧರ್ಮ ಎಂದು ಕರೆದು, ಪ್ರತಿಯೊಂದು ವರ್ಣದವರೂ ತಮಗಾಗಿ ನಿಯೋಜಿಸಲ್ಪಟ್ಟಿರುವ ಕರ್ಮವನ್ನು ಪರಮಕರ್ತವ್ಯ ಎಂದು ಭಾವಿಸಿ ಆಚರಿಸಬೇಕೆಂದು ಆದೇಶಿಸುತ್ತದೆ ಹಿಂದೂಧರ್ಮ.

ಪರಧರ್ಮ ಎಷ್ಟೇ ಚೆನ್ನಾಗಿದ್ದರೂ ಅದನ್ನು ಇಚ್ಛಿಸದೆ, ಸ್ವಧರ್ಮ ಚೆನ್ನಾಗಿಲ್ಲದಿದ್ದರೂ ಅದನ್ನೇ ಆಚರಿಸಬೇಕು ಎನ್ನುತ್ತದೆ ಧರ್ಮಶಾಸ್ತ್ರ . ಗೀತೆಯೂ ಇದನ್ನು ಸಮರ್ಥಿಸುತ್ತದೆ.

*ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।*
*ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥* *(೩–೩೫)*

ಅಂದರೆ : ಗುಣವಿಲ್ಲದ ಸ್ವಧರ್ಮವು ಚೆನ್ನಾಗಿ ಅನುಷ್ಠಾನ ಮಾಡಿದ ಪರಧರ್ಮಕ್ಕಿಂತಲೂ ಶ್ರೇಯಸ್ಕರವಾದುದು. ಸ್ವಧರ್ಮದಲ್ಲಿ ಮರಣವೂ ಒಳ್ಳೆಯದು; ಪರಧರ್ಮವು ಭಯಂಕರವಾದುದು.

ಇದರ ಆಂತರ್ಯವೇನೆಂದರೆ : ಗುಣವಿಲ್ಲದ ಮತ್ತು ಶ್ರಮಯುಕ್ತವಾದ 'ಜಲಗಾರಿಕೆ'ಯು ದಲಿತನ ಸ್ವಧರ್ಮ. ಆತನಿಗೆ ಅತ್ಯುತ್ತಮವಾಗಿ ಕೃಷಿ ಮಾಡುವ ಯೋಗ್ಯತೆ ಇದ್ದರೂ ಅದು ಪರಧರ್ಮವಾದುದರಿಂದ ಅದನ್ನು ಬಯಸದೆ, ಸ್ವಧರ್ಮವೆಂದು ನಿಯೋಜಿಸಲ್ಪಟ್ಟಿರುವ ಜಲಗಾರಿಕೆಯನ್ನೇ ಮಾಡಬೇಕು. ಅದನ್ನು ನಿರ್ವಹಿಸುತ್ತ ಮರಣಿಸಿದರೆ ಅದು ಆತನಿಗೆ

ಹಿಂದೂಧರ್ಮದಲ್ಲಿ ಸೇರಿಕೊಂಡಿದೆ. ಸಮಾಜ ವಿಜ್ಞಾನಿಗಳು ಇದನ್ನು 'ಧಾರ್ಮಿಕ ಮಾಲಿನ್ಯ' ಎಂದೇ ಕರೆಯುತ್ತಾರೆ. ವೇದಗಳಲ್ಲಿ ಅಸ್ಪೃಶ್ಯತೆಯ ಪ್ರಸ್ತಾಪ ಇಲ್ಲದಿದ್ದರೂ ಧರ್ಮಶಾಸ್ತ್ರಗಳು ಅದನ್ನು ಸೃಷ್ಟಿಸಿ, ಸವರ್ಣೀಯರಲ್ಲದ ಅಂತ್ಯಜರೆನ್ನುವ ಪಂಚಮರ ಮೇಲೆ ಹೇರಿ, ಅವರನ್ನು ಗುಲಾಮರಂತೆ ನಡೆಸಿಕೊಳ್ಳಲಾಯಿತು. ಅಸ್ಪೃಶ್ಯತೆಯನ್ನು ಅಮಾನುಷವೆಂದು ಪರಿಗಣಿಸಿದ ಗಾಂಧೀಜಿ, ತಮ್ಮನ್ನು 'ಹಿಂದೂ ಸನಾತನಿ' ಎಂದು ಕರೆದುಕೊಂಡರೂ ಅಸ್ಪೃಶ್ಯತೆಯ ನಿರ್ಮೂಲನಕ್ಕಾಗಿ ಚಳವಳಿಯನ್ನೇ ಪ್ರಾರಂಭ ಮಾಡಿ ಸ್ವಲ್ಪಮಟ್ಟಿಗೆ ಯಶಸ್ಸನ್ನು ಕಂಡರು. ಇದೇ ಸಂದರ್ಭದಲ್ಲಿ ತಮ್ಮನ್ನು ಶ್ರದ್ಧಾವಂತ ಹಿಂದುಗಳೆಂದು ಕರೆದುಕೊಂಡ ವೈದಿಕ ಮಠಗಳ ಧರ್ಮಗುರುಗಳು ಅಸ್ಪೃಶ್ಯತೆಯನ್ನು ಸಮರ್ಥಿಸಿ, ತಮ್ಮ ಮಠಗಳ ವೇದಿಕೆಗಳಲ್ಲಿ ಗಾಂಧೀಜಿಯನ್ನು ನಿಂದಿಸಿದರು. ಸ್ವತಃ ಗಾಂಧೀಜಿಯಲ್ಲಿದ್ದ ವೈರುಧ್ಯಗಳನ್ನು ಡಾ॥ ಅಂಬೇಡ್ಕರ್ ಕಟುವಾಗಿ ಟೀಕಿಸಿದರು. ಭಾರತೀಯ ಸಂವಿಧಾನ ಅಸ್ಪೃಶ್ಯತೆಯ ಆಚರಣೆಯನ್ನು ಅಪರಾಧವೆಂದು ಸಾರುತ್ತಿದ್ದರೂ ಬ್ರಾಹ್ಮಣರಾದಿಯಾಗಿ ಎಲ್ಲ ಸವರ್ಣೀಯರೂ ಅದನ್ನು ರಹಸ್ಯವಾಗಿ ಅನುಷ್ಠಾನದಲ್ಲಿ ಇಟ್ಟುಕೊಂಡಿದ್ದಾರೆ. ಈ ರೀತಿಯ ವಿಚಿತ್ರ ವರ್ತನೆಗೆ ಹಿಂದೂಧರ್ಮ ಅವಕಾಶ ಕೊಟ್ಟಿದೆ.

ಹಿಂದೂಧರ್ಮದ ವೈಲಕ್ಷಣ್ಯಗಳಲ್ಲಿ ಕೂಡಲೇ ಎದ್ದುಕಾಣುವಂಥದು ಎಂದರೆ, ಶ್ರೇಣೀಕೃತವೂ ವಂಶಪಾರಂಪರ್ಯವೂ ಆಗಿರುವ ಜಾತಿಪದ್ಧತಿ. ಇದು ವರ್ಣವ್ಯವಸ್ಥೆ ಎಂಬ ಭ್ರಷ್ಟಗರ್ಭದಿಂದ ಜನಿಸಿದ 'ಶನಿಸಂತಾನ'ವೆಂದು ವಿಚಾರವಾದಿಗಳು ಹೇಳುತ್ತಾರೆ. ಆದರೂ ಇದು 'ಪಾಪದ ಕೂಸು' ಎಂಬ ಅರಿವು ಇನ್ನೂ ಅನೇಕರಿಗೆ ಬಂದಿಲ್ಲ. ಶಿಕ್ಷಣದಿಂದ ಜಾತಿಗಳು ನಾಶವಾಗುತ್ತವೆ ಎಂಬ ಅಭಿಪ್ರಾಯವೊಂದು ಚಾಲ್ತಿಯಲ್ಲಿದೆ. ಆದರೂ ಶಿಕ್ಷಣ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಮಂದಿ, ಅದರಲ್ಲೂ ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕರಾಗಿ ಕಾರ್ಯ

ಶ್ರೇಯಸ್ಕರ. ಕೃಷಿಕನಾಗಬೇಕೆಂಬ ಆತನ ಆಕಾಂಕ್ಷೆಯು ಭಯಂಕರವಾದುದು !

ಅವೈದಿಕ ಧರ್ಮಗಳಲ್ಲಿ ಸ್ವಧರ್ಮ ಸಿದ್ಧಾಂತ ಕಂಡುಬರುವುದಿಲ್ಲ. ಯಾಕೆಂದರೆ ಆ ಧರ್ಮಗಳಲ್ಲಿ ವರ್ಣವ್ಯವಸ್ಥೆ ಇಲ್ಲದಿರುವುದರಿಂದ ಯಾರು ಯಾವ ಕರ್ಮವನ್ನಾದರೂ ತಮ್ಮ ಅಭಿರುಚಿ ಮತ್ತು ಯೋಗ್ಯತಾನುಸಾರ ಮಾಡುವ 'ಕರ್ಮಸ್ವಾತಂತ್ರ್ಯ' ಇದೆ.

ಹಿಂದೂಧರ್ಮದ ಸ್ವಧರ್ಮ ಸಿದ್ಧಾಂತದಲ್ಲಿ ಬಹಿರಂಗಗೊಳಿಸಲಾಗದ ಒಂದು ರಹಸ್ಯವಿದೆ. ಅದೇ ವರ್ಣಧರ್ಮ ಪರಿಪಾಲನೆ. ವಿದ್ಯೆಯನ್ನು ಕಲಿಸುವುದು, ಯಜ್ಞವನ್ನು ನೆರವೇರಿಸುವುದು ಬ್ರಾಹ್ಮಣನಿಗೆ ಮೀಸಲು; ಯಾವುದೇ ಕಾರಣಕ್ಕೂ ಶೂದ್ರಾದಿಗಳು




ಆ ಕರ್ಮವನ್ನು ಮಾಡಬಾರದು. ಕೃಷಿ–ಪಶುಪಾಲನೆ ಶೂದ್ರನಿಗೆ ಮೀಸಲು; ಅದನ್ನು ಬ್ರಾಹ್ಮಣನಿಂದ ಮಾಡಿಸಬಾರದು. ಸತ್ತವರಿಗೆ ಸಮಾಧಿ ನಿರ್ಮಿಸುವುದು ದಲಿತರಿಗೆ ಮೀಸಲು; ಅದನ್ನು ಸವರ್ಣೀಯರಿಂದ ಮಾಡಿಸಬಾರದು. ಯಾವ ಕರ್ಮಗಳಿಗೆ ದೈಹಿಕ ಶ್ರಮ ಅಗತ್ಯವಿದೆಯೋ ಅದರಿಂದ ಬ್ರಾಹ್ಮಣರಿಗೆ ವಿನಾಯತಿ ನೀಡುವ ತಂತ್ರಗಾರಿಕೆಯಿಂದ ಸ್ವಧರ್ಮ ಸಿದ್ಧಾಂತ ರೂಪುಗೊಂಡಿದ್ದರೆ ಆಶ್ಚರ್ಯವಿಲ್ಲ.

ಪ್ರತಿಯೊಬ್ಬರಿಗೂ ಅವರು ಗಳಿಸುವ ವಿದ್ಯೆ, ಅವರಿರುವ ಸನ್ನಿವೇಶ, ಅವರಲ್ಲಿ ರೂಪುಗೊಂಡಿರುವ ಮನೋಧರ್ಮ, ಅವರ ಮೇಲಾಗುವ ಪ್ರಭಾವ ಮೊದಲಾದ ಅಂಶಗಳಿಂದ ರೂಪುಗೊಳ್ಳುವ ಮನೋಧರ್ಮವನ್ನು ಮತ್ತು ವಂಶಪಾರಂಪರ್ಯ ನಿಯಮಕ್ಕೆ ಬಂಧಿಸುವ ವೈಖರಿಯನ್ನು ಯಾರೂ ಸಮ್ಮತಿಸಲಾಗುವುದಿಲ್ಲ.

ಮಹಿಳೆಯರಿಗೆ ಸಂಬಂಧಿಸಿದಂತೆ ಅನ್ಯಧರ್ಮಗಳಲ್ಲಿಲ್ಲದ ವೈಲಕ್ಷಣ್ಯವೊಂದು ಹಿಂದೂಧರ್ಮದಲ್ಲಿದೆ. ಇಸ್ಲಾಂ, ಈಸಾಯಿ ಮೊದಲಾದ ಧರ್ಮಗಳಲ್ಲಿ ವಿಧವೆಯರನ್ನು ನಿಕೃಷ್ಟವಾಗಿ ಕಾಣುವುದಿಲ್ಲ ಮತ್ತು ಅವರಿಗೆ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಯಾವುದೇ ರೀತಿಯ ನಿಷೇಧವಿಲ್ಲ. ಆದರೆ ಹಿಂದೂಧರ್ಮದಲ್ಲಿ ಅವರನ್ನು ನಿಕೃಷ್ಟವಾಗಿ ಕಂಡು, ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ನಿಷೇಧವನ್ನು ಹೇರಲಾಗಿದೆ. ಗಂಡನಿರುವ ಮಹಿಳೆಯರನ್ನು ಸಧವೆ ಎಂದು ಕರೆದು, 'ಸುಮಂಗಲಿ' ಎಂಬ ಭಾವನೆಯಿಂದ ವಿಶೇಷ ಗೌರವವನ್ನು ನೀಡಲಾಗುವುದು; ಗಂಡನನ್ನು ಕಳೆದುಕೊಂಡ ಮಹಿಳೆಯನ್ನು ವಿಧವೆ ಎಂದು ಕರೆದು 'ಅಮಂಗಲಿ' ಎಂಬ ಭಾವನೆಯಿಂದ ವಿಶೇಷ ಗೌರವದಿಂದ ವಂಚಿಸಲಾಗಿದೆ. 'ಮುತ್ತೈದೆ' ಎಂಬ ಯೋಗ್ಯತೆಯನ್ನು ಕಳೆದುಕೊಂಡ ವಿಧವೆಯನ್ನು ಯಾವುದನ್ನು ಹಿಂದೂಧರ್ಮದಲ್ಲಿ 'ಮಂಗಳ ಕಾರ್ಯ' ಎಂದು ಭಾವಿಸಲಾಗಿದೆಯೋ ಅದರಿಂದ ದೂರವಿರಿಸಿ, ಆಕೆಯ ಅಂತರಂಗಕ್ಕೆ ವೇದನೆಯನ್ನು ಉಂಟುಮಾಡಲಾಗುತ್ತಿದೆ. ತನ್ನಲ್ಲಿ ಇಂಥದೊಂದು ವೈಲಕ್ಷಣ್ಯವಿದೆಯೆಂದು ಹಿಂದೂಧರ್ಮ ಬೀಗಬಹುದೆ ? ಎಲ್ಲಿ ಸ್ತ್ರೀಯರು ಗೌರವಿಸಲ್ಪಡುವರೋ ಅಲ್ಲಿ ದೇವತೆಗಳು ರಮಿಸುತ್ತಾರೆ ಎನ್ನುವ ಹಿಂದೂಧರ್ಮ,

# ಒಳಕೋಣೆಯ ಹಣತೆ




ಬದುಕಿನ ಬಣ್ಣಗಳು ಬಯಲಿಗೆ ಬೀಳುತ್ತವೆ
ಒಳಕೋಣೆಯ ಹಣತೆಯೇ
ನೀನೂ ಹೀಗಾಗುವುದು ಯಾವಾಗ ?

(೧)

**ಕೋ**ಣೆಗಷ್ಟೇ ಬೆಳಕುಣಿಸುವ ಹಣತೆಗೆ
ಗಾಳಿಯ ಭಯವಿಲ್ಲ ನೀರಿನ ಅಳುಕಿಲ್ಲ
ಮಿತತೃಪ್ತ ಜೀವಿಗೆ ಅಪಾಯದ ಅರಿವಿಲ್ಲ
ಗೋಡೆಗಳಾಚೆಗೂ ಚಲಿಸುವ ಕನಸಿಲ್ಲ.
ಎಷ್ಟೊಂದು ಹೊಣೆಗಳ ಹೊತ್ತು
ಹೊರ ಬಿದ್ದಿದ್ದಾನೆ ಸೂರ್ಯ !
ಹೂಬೀಜಮರನದಿಗಾಳಿ ಜೀವ ಸಂಕುಲ
ಬೆಳಕಿನಗುಂಟ ಗೆಳೆತನಕೆ ನಿಂತಿವೆ
ಸ್ಫಟಿಕದ ಎದೆಕವಾಟವ ಹೊಕ್ಕರೆ ಸಾಕು

(೨)

ಹಣತೆ ಹಚ್ಚಬೇಕು ಬಟಾಬಯಲಿನಲಿ,
ಸುಳಿವ ಗಾಳಿ, ಸರಿವ ನೀರು ರೇಜಿಗೆಗಳ
ಮೆಟ್ಟಿ ಎದೆಗಾರಿಕೆ ಬತ್ತಿ ಹೊಸೆಯಲಿಕೆ.
ಒಳಕೋಣೆಯಲಷ್ಟೇ ಉಳಿವ ಬೆಳಕಿಗೆ
ಹೊರಹೊಳೆವಕಲೆಯ ಸವರಬೇಕು
ಬಯಲಲಿ ನಿಂತರೇ ಬಿಡುಗಡೆ,
ಅಡೆತಡೆಗಳ ಮೆಟ್ಟಿ ಸಾಗುವ ಹಾದಿ...
ಒಳಗೇ ಮುಗುಮ್ಮಾಗಿ ತುಯ್ದಾಡಿ
ಗೋಡೆಗಳ ನಡುವೆ ತೆವಳುವ ಬೆಳಕಿಗೆ
ಬೆಳಕನ್ನುವುದಾದರೂ ಹೇಗೆ ?

(೩)

ಒಳ ಕೋಣೆಯ ಹಣತೆಗಳ ಹೊತ್ತು
ಹೊರತಂದರು ಕೆಲವರು, ಬೀದಿ ಬೀದಿಗೂ
ಬೆಳಕು ಚೆಲ್ಲಿ, ಹಬ್ಬಿಸಿ ಬೆಳಕ ಬಳ್ಳಿ
ಹೊಸ್ತಿಲಾಚೆಗೂ ಚಾಚಿದ ಹಣತೆ
ಗಾಳಿಮಳೆಹೊಗೆಧೂಳು ಕುಟುಕು ಕಂಪನ
ಗಳ ದಾಟಿ ಬೊಗಸೆಯೊಡ್ಡಿದವರಿಗೆಲ್ಲ ಸುರಿದು
ಒಳಕೋಣೆಯ ಹಣತೆ ಹೊರಕ್ಕೂ ತಂದವರು
ಹಿರಿಯರಾದರು...

(೪)

ಒಳಕೋಣೆಯ
ಹಣತೆ
ಬೀದಿಗೆ ಬಂದು
ಪಳಗುವುದು
ಸರಳ ಮಾತಲ್ಲ ...

**ವಾಸುದೇವ ನಾಡಿಗ್**
ಕೇರಾಫ್. ಶುಭ ಎ. ಆರ್., ಬಾಲಕರ ಸರಕಾರಿ ಪ್ರೌಢಶಾಲೆ, ಚಿಂತಾಮಣಿ

**ರೈಲ್ವೆಗೆ ರಾಜ್ಯದ ಭೂಮಿ–ಕಾಸು ಅಲಭ್ಯ**



**ರೈಲ್ವೆ ಅಭಿವೃದ್ಧಿಯಲ್ಲಿ ಹಿಂದೆ ಉಳಿಯುತ್ತೇವೆ ಎಂಬ ಆತಂಕ ಬೇಡ, ನಾವು ಹಳಿ ಇಲ್ಲದೆಯೂ 'ರೈಲು' ಬಿಡುತ್ತೇವೆ !**

ವಿಧವಾ ಸ್ತ್ರೀಯನ್ನು ಅಮಂಗಳೆ ಎಂದು ಕರೆಯುವುದು ಅದರ ಇಬ್ಬಂದಿತನವನ್ನು ತೋರಿಸುತ್ತದೆ.

ಹಿಂದೂಧರ್ಮದಲ್ಲಿ 'ಷೋಡಶದಾನ' ಎಂಬ ಪ್ರಕ್ರಿಯೆಯೊಂದುಂಟು. ಅವುಗಳಲ್ಲಿ 'ಕನ್ಯಾದಾನ'ವೂ ಒಂದು. ಅವೈದಿಕ ಧರ್ಮಗಳಲ್ಲಿ ಕನ್ಯೆಯನ್ನು 'ವ್ಯಕ್ತಿ' ಎಂದು ಪರಿಗಣಿಸಿ, ವರನಿಗೆ 'ಮದುವೆ' ಮಾಡಿಕೊಡಲಾಗುವುದು. ಆದರೆ ಹಿಂದೂಧರ್ಮದಲ್ಲಿ ಆಕೆಯನ್ನು 'ವಸ್ತು' ಎಂದು ಪರಿಗಣಿಸಿ, ವರನಿಗೆ 'ದಾನ' ಮಾಡಲಾಗುವುದು. ವರನಿಗೆ ವಧುವನ್ನು ದಾನವಾಗಿ 'ಧಾರೆ' ಎರೆದುಕೊಡುವುದನ್ನೇ ಕನ್ಯಾದಾನ ಎಂದು ಕರೆಯಲಾಗುವುದು. ಇದೂ ಸಹ ಹಿಂದೂಧರ್ಮದ ಒಂದು ವೈಲಕ್ಷಣ್ಯವಾಗಿದೆ !

ಅವೈದಿಕ ಧರ್ಮಗಳ ಅನುಯಾಯಿಗಳು ಏಕದೇವೋಪಾಸಕರು. ಆದರೆ ಹಿಂದುಗಳು ಬಹುದೇವೋಪಾಸಕರು. ಹಿಂದೂಧರ್ಮದಲ್ಲಿ ಪ್ರಧಾನವಾಗಿ ಶೈವಪಂಥ ಮತ್ತು ವೈಷ್ಣವಪಂಥ ಎಂಬೆರಡು ಶಾಖೆಗಳು ಅಸ್ತಿತ್ವದಲ್ಲಿವೆ. ಶೈವಪಂಥದವರು (ಶೈವರು) ಶಿವನ ವಿನಾ ಬೇರಾವ ದೇವರನ್ನೂ ಪೂಜೆ ಮಾಡುವುದಿಲ್ಲ. ವೈಷ್ಣವ ಪಂಥದವರು (ವೈಷ್ಣವರು) ವಿಷ್ಣುವಿನ ವಿನಾ ಬೇರಾವ ದೇವರನ್ನೂ ಪೂಜಿಸುವುದಿಲ್ಲ. ಶಿವನೇ ದೊಡ್ಡವನೆಂದು ಶೈವರು ಸಾರಿದರೆ, ವಿಷ್ಣುವೇ ದೊಡ್ಡವನೆಂದು ವೈಷ್ಣವರು ಘೋಷಿಸುತ್ತಾರೆ. ಈ ಜ್ಯೇಷ್ಠತ್ವವನ್ನು ಸಮರ್ಥಿಸುವುದಕ್ಕೆ ಉಭಯಪಂಥದವರೂ ಪುರಾಣಗಳೆಂಬ ಕಟ್ಟುಕಥೆಗಳನ್ನು ನಿರ್ಮಿಸಿ, ಅವುಗಳ ಸುತ್ತ ಪವಾಡಗಳನ್ನು ಲಗತ್ತಿಸಿ ಮೌಢ್ಯದ ಮೆರವಣಿಗೆ ಮಾಡುತ್ತಿದ್ದಾರೆ. ವೈದಿಕರಲ್ಲಿನ ಕೆಲ ಚಿಂತಕರು ಶಿವ ಮತ್ತು ವಿಷ್ಣು ಅವರಲ್ಲಿನ ಪ್ರತ್ಯೇಕತೆಯನ್ನು ತೊಡೆದುಹಾಕಿ ಏಕತೆಯನ್ನು ತೋರಿಸುವ 'ಹರಿಹರ' ಸಮನ್ವಯತೆಯ ಸಿದ್ಧಾಂತವನ್ನು ಪ್ರತಿಪಾದಿಸುತ್ತಾರೆ.

ಶಿವ ಮತ್ತು ವಿಷ್ಣುವಿಗೆ ಬೇರೆ ಬೇರೆ ಹೆಸರುಗಳನ್ನು ಆರೋಪಿಸಿ, ಆ ಹೆಸರುಗಳ ಮೂರ್ತಿಗಳನ್ನು ನಿರ್ಮಿಸಿ ಉಪಾಸನೆ ಮಾಡುವ ವೈಖರಿಯೂ ನಡೆಯುತ್ತಿದೆ. ಮನೆದೇವರು, ಕುಲದೇವರು, ಊರದೇವರು ಮೊದಲಾದ ಹೆಸರುಗಳಲ್ಲಿ ಬೇರೆ ಬೇರೆ ದೇವರುಗಳನ್ನು ಪೂಜಿಸುವ ಸಂಪ್ರದಾಯವೂ ಇದೆ. ಈ ದೇವರುಗಳಿಗೆ ನಾನಾ ರೀತಿಯ ಮಂದಿರಗಳು ನಿರ್ಮಿಸಲ್ಪಟ್ಟು, ಇನಾಂತಿ(ಮಾನ್ಯ)ಗಳನ್ನು ಕೊಡಲಾಗಿದೆ. ಇದು ಹಿಂದೂಧರ್ಮದ ಇನ್ನೊಂದು ರೀತಿಯ ವೈಲಕ್ಷಣ್ಯ !

ಇನ್ನೊಂದು ಸೂಕ್ಷ್ಮರೀತಿಯ ವೈಲಕ್ಷಣ್ಯವುಂಟು ಹಿಂದೂಧರ್ಮದಲ್ಲಿ : ಅದೆಂದರೆ ವೈದಿಕರಲ್ಲಿ ಪ್ರಧಾನವಾಗಿ ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತ ಎಂಬ ಮೂರು ಶಾಖೆಗಳುಂಟು. ಶಂಕರಾಚಾರ್ಯರು ಅದ್ವೈತ ಪ್ರತಿಪಾದಕರು. ಸ್ಮೃತಿಗಳ ಸಂರಕ್ಷಕರಾದ ಅದ್ವೈತಿಗಳನ್ನು ಸ್ಮಾರ್ತರೆಂದು ಕರೆಯುತ್ತಾರೆ. ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ಪ್ರತಿಪಾದಕರು. ವಿಷ್ಣು ಪಾರಮ್ಯವನ್ನು ಎತ್ತಿ ಹಿಡಿಯುವ ಇವರ ಅನುಯಾಯಿಗಳನ್ನು ಶ್ರೀವೈಷ್ಣವರು ಎಂದು ಕರೆಯುತ್ತಾರೆ. ಮಧ್ವಾಚಾರ್ಯರು ದ್ವೈತ ಪ್ರತಿಪಾದಕರು. ಹರಿಸರ್ವೋತ್ತಮ ಸಿದ್ಧಾಂತ ಸ್ಥಾಪಕರಾದ ಇವರ ಅನುಯಾಯಿಗಳನ್ನು ಮಾಧ್ವರೆಂದು ಕರೆಯುತ್ತಾರೆ. ಈ ಮೂರೂ ಪಂಥದವರು ಆಂತರಿಕವಾಗಿ ಬೇರೆ ಬೇರೆಯಾದರೂ, ತಮ್ಮ ತತ್ತ್ವ–ಸಿದ್ಧಾಂತಗಳನ್ನು ಪ್ರಚುರಪಡಿಸಲು ತಮ್ಮದೇ ಮಠಗಳನ್ನು ಸ್ಥಾಪಿಸಿಕೊಂಡಿದ್ದರೂ ಒಟ್ಟು ಹಿಂದೂ ಸಮುದಾಯದಲ್ಲಿ ಅಲ್ಪಸಂಖ್ಯಾತರಾಗಿರುವ ಬ್ರಾಹ್ಮಣರು. ತಮ್ಮ ರಕ್ಷಣೆ ಮತ್ತು ಅಭಿವೃದ್ಧಿಗಾಗಿ ಸಾಮೂಹಿಕ ಸಂಘಟನೆಯ ದೃಷ್ಟಿಯಿಂದ ಬಾಹ್ಯದಲ್ಲಿ ಒಂದೇ ಬ್ರಾಹ್ಮಣ ಸಂಘವನ್ನು ಸಂಘಟಿಸಿಕೊಂಡಿದ್ದಾರೆ. ಹಿಂದೂಧರ್ಮದ ಸಂಘಟನೆ ಮತ್ತು ಸಂರಕ್ಷಣೆಗಾಗಿಯೇ ಹುಟ್ಟಿಕೊಂಡಿರುವ 'ರಾಷ್ಟ್ರೀಯ ಸ್ವಯಂ ಸೇವಕಸಂಘ' ಮತ್ತು 'ವಿಶ್ವ ಹಿಂದೂ ಪರಿಷತ್' ಮೊದಲಾದ ಸಂಘಪರಿವಾರ ಸಂಘಟನೆಗಳ ಮುಖಂಡರು ಮತ್ತು ಹಿಂದೂಧರ್ಮದ ವಿವಿಧ ಮಠಗಳ ಅಧ್ವರ್ಯುಗಳು ಹಿಂದೂ ಧರ್ಮದಲ್ಲಿನ ಲೋಪ ದೋಷಗಳನ್ನು ಮರೆಮಾಚುವ ದೃಷ್ಟಿಯಿಂದ, 'ಹಿಂದೂಧರ್ಮವೊಂದು ಧರ್ಮವಲ್ಲ, ಅದೊಂದು ಜೀವನಶೈಲಿ' ಎಂದು ಹೇಳುತ್ತಿದ್ದಾರೆ. ಯಾವುದು ಆ ಜೀವನಶೈಲಿ ಎಂದು ಪ್ರಶ್ನಿಸಿದರೆ ಉತ್ತರಿಸುವ ಭೂಪರೇ ಇಲ್ಲ. ಇದೂ ಸಹ ಹಿಂದೂಧರ್ಮದ ಒಂದು ವೈಲಕ್ಷಣ್ಯವಲ್ಲವೆ ?

ಜೀವನಶೈಲಿ ಎಂದರೆ ಬಹುಶಃ ಹೀಗಿರಬೇಕು :

ವರ್ಣವ್ಯವಸ್ಥೆಯನ್ನು ಪೋಷಿಸುವುದು ಮತ್ತು ಅದನ್ನು ಬಲಗೊಳಿಸುವುದು; ಸಾಮಾಜಿಕವಾಗಿ ವಿಪ್ರಪ್ರಾಧಾನ್ಯವನ್ನು ಪ್ರಶ್ನಿಸದೆ ಒಪ್ಪಿಕೊಳ್ಳುವುದು ಮತ್ತು ಪೌರೋಹಿತ್ಯಕ್ಕೆ ಮಾನ್ಯತೆಯನ್ನು ನೀಡುವುದು; ಹಿಂದೂಧರ್ಮದ ಜಾಯಮಾನಕ್ಕೆ ಒಗ್ಗದ ಜಾತ್ಯತೀತ ತತ್ವವನ್ನು ಗಡೀಪಾರು ಮಾಡಿ ಜಾತಿಪದ್ಧತಿಯನ್ನು ಊರ್ಜಿತಗೊಳಿಸುವುದು; ಸಮಾನ ಭ್ರಾತೃತ್ವವನ್ನು ಸಮಾಧಿ ಮಾಡಿ, ಸಾಮಾಜಿಕ ತಾರತಮ್ಯವನ್ನು ಉಳಿಸಿಕೊಳ್ಳುವುದು; ಅಸ್ಪೃಶ್ಯತೆಯನ್ನು ಅದರ ಪಾಡಿಗೆ ಬಿಟ್ಟು, ದಲಿತರ ಮೇಲಿನ ದೌರ್ಜನ್ಯಗಳನ್ನು ಅಲಕ್ಷ್ಯ ಮಾಡುವುದು; ಪ್ರಚ್ಛನ್ನ ರೀತಿಯಲ್ಲಿ ಭಾರತೀಯ ಸಂವಿಧಾನಕ್ಕೆ ಸಮಾನಾಂತರವಾಗಿ ಮನುಧರ್ಮ ಶಾಸ್ತ್ರವನ್ನು ಆಚರಣೆಯಲ್ಲಿ ಇಟ್ಟುಕೊಳ್ಳುವುದು.

ಅಲ್ಲದೆ ಪೌರೋಹಿತ್ಯ ಬ್ರಾಹ್ಮಣರಿಗೆ ಮೀಸಲು; ಜಲಗಾರಿಕೆ ದಲಿತರಿಗೆ ಮೀಸಲು. ಶೂದ್ರರಿಗೆ ಉಪನಯನವಿಲ್ಲ; ಉಪವೀತಧಾರಣೆಯೂ ಇಲ್ಲ. ಪತ್ನಿಗೆ ಪತಿಯೇ ಪರದೈವ; ಪಾತಿವ್ರತ್ಯವೇ ಪತ್ನಿಗೆ ಪರಮ ಭಾಗ್ಯ. ಭರ್ತ, ಭಾರ್ಯೆಯ ಯಜಮಾನ; ಪತ್ನಿಯು ಪತಿಯ ಚರಣದಾಸಿ. ಇದೇ ಇರಬೇಕು ಹಿಂದೂ ಜೀವನಶೈಲಿ ! ವೈದಿಕರ ಪಂಕ್ತಿಯಲ್ಲಿ ಶೂದ್ರರನ್ನು ಸೇರಿಸುವುದಿಲ್ಲ. ಏಕೆಂದರೆ ಅವರಿಗೆ ಉಪನಯನವಿಲ್ಲ, ಆದರೆ ಹಿಂದುಗಳ ಯಾದಿಯಲ್ಲಿ ಶೂದ್ರರನ್ನು ಸೇರಿಸಿಕೊಂಡು, 'ನಾವೆಲ್ಲ ಹಿಂದು – ನಾವೆಲ್ಲ ಒಂದು' ಎಂದು ಎತ್ತರದ ಏಕಧ್ವನಿಯಲ್ಲಿ ತಾನು ನಡೆಸುವ ರ್‍ಯಾಲಿಗಳಲ್ಲಿ ಆರ್‌ಎಸ್‌ಎಸ್ ಘೋಷಿಸುತ್ತಿದೆ. ಹಿಂದುಗಳ ಸಂಖ್ಯಾ ಬಾಹುಳ್ಯ ವೃದ್ಧಿಗಾಗಿ ದಲಿತರನ್ನೂ ಹಿಂದುಗಳೆಂದೇ ಪರಿಗಣಿಸಲಾಗುತ್ತಿದೆ. ಆದರೂ ದಲಿತರಲ್ಲಿ ಶೂದ್ರರಾದಿಯಾಗಿ ಯಾವ ಹಿಂದುವೂ ಸ್ವಾಭಾವಿಕ ರೀತಿಯಲ್ಲಿ ವೈವಾಹಿಕ ಸಂಬಂಧವನ್ನು ಬೆಳೆಸಲಿಚ್ಛಿಸುವುದಿಲ್ಲ.

ವೈದಿಕ ಧರ್ಮಪ್ರಚಾರಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟು ಅದಕ್ಕಾಗಿ ಅಹೋರಾತ್ರಿ ಕೆಲಸ ಮಾಡಿದರೂ ತಾತ್ವಿಕವಾಗಿ ವಿಗ್ರಹಾರಾಧನೆಯನ್ನು ವಿರೋಧಿಸಿದ ದಯಾನಂದ ಸರಸ್ವತಿ ಅವರನ್ನು ಹಿಂದೂ ಪುರೋಹಿತಶಾಹಿ ವಿಷಪ್ರಯೋಗದ ಮೂಲಕ ಹತ್ಯೆ ಮಾಡಿತು. ಸತ್ಯವೇ ದೇವರು, ಅಹಿಂಸೆಯೇ ಪರಮಧರ್ಮ ಎಂದು ನಂಬಿ, ತನ್ನನ್ನು ಸನಾತನ ಹಿಂದು ಎಂದು ಕರೆದುಕೊಂಡ ಗಾಂಧೀಜಿಯನ್ನು ಮತ್ತೊಬ್ಬ ಸಂಕುಚಿತ ಹಿಂದು ಗುಂಡು ಹಾರಿಸಿ ಕೊಂದ. ಈ ರೀತಿಯ ಪ್ರತಿಗಾಮಿ ಲಕ್ಷಣಗಳೂ ಹಿಂದೂಧರ್ಮದಲ್ಲಿವೆ.

ಚಿಂತನೆ, ಮಾತು ಮತ್ತು ಕೃತಿಗಳಲ್ಲಿ ವೈರುಧ್ಯಗಳನ್ನು ಹೊಂದಿರುವ ಈ ಹಿಂದೂಧರ್ಮವನ್ನು ಪರಿವರ್ತಿಸಲು ಯಾರಿಗೂ ಸಾಧ್ಯವಿಲ್ಲ. ಅಂದಮೇಲೆ ಇದರ ಅಸ್ತಿತ್ವಕ್ಕೆ ಏನಾದರೂ ಅರ್ಥವಿದೆಯೆ ? ಪ್ರಾಜ್ಞ ವಿಚಾರವಂತರು ಗಂಭೀರವಾಗಿ ಚಿಂತಿಸಬೇಕು : ಅದಕ್ಕೆ ಅರ್ಥ ತುಂಬಬೇಕೆ ಮತ್ತು ಹಾಗಿದ್ದರೆ ಹೇಗೆ ಎಂಬುದನ್ನು ಕುರಿತಂತೆ.

**ಎ. ಆರ್. ನಾರಾಯಣಘಟ್ಟ**
ನಂ. ೧೬೮, ವಿಠಲನಗರ ಲೇಔಟ್
ಕುಮಾರಸ್ವಾಮಿ ಬಡಾವಣೆ
೨ನೇ ಹಂತ, ಬೆಂಗಳೂರು – ೫೬೦ ೦೭೮




'ಬ್ರಿಕ್ಸ್' ಬ್ಯಾಂಕ್ ಸ್ಥಾಪನೆ ೨೦೧೪

## 'ಬ್ರಿಕ್ಸ್ ' ಬ್ಯಾಂಕ್ ಸ್ಥಾಪನೆ – ಮಹತ್ವಪೂರ್ಣ ಬೆಳವಣಿಗೆ

'ಬ್ರಿಕ್ಸ್ ' – BRICS ಇಂಗ್ಲಿಷ್ ಅಕ್ಷರಗಳು ಐದು ರಾಷ್ಟ್ರಗಳ ಹೆಸರುಗಳನ್ನು ಸೂಚಿಸುವ ಹ್ರಸ್ವರೂಪ. ಈ ಐದು ರಾಷ್ಟ್ರಗಳು – ಬ್ರೆಜಿಲ್, ರಷ್ಯ, ಇಂಡಿಯ, ಚೀಣ ಮತ್ತು ದಕ್ಷಿಣ ಆಫ್ರಿಕ. ತೀವ್ರಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ಈ ಸಮಾನಮನಸ್ಕ ದೇಶಗಳು ಇದೀಗ ಹೊಸ ಅಭಿವೃದ್ಧಿ ಬ್ಯಾಂಕ್ ಒಂದನ್ನು ಸ್ಥಾಪಿಸಲು ಕೈಗೊಂಡಿರುವ ನಿರ್ಧಾರ ಅಂತರರಾಷ್ಟ್ರೀಯ ವಿದ್ಯಮಾನದಲ್ಲಿ ಒಂದು ದಿಟ್ಟ ಹೆಜ್ಜೆ. ಆಗಾಗ ಶೃಂಗಸಭೆ ಸೇರಿ ಅಂತರರಾಷ್ಟ್ರೀಯ ವಿದ್ಯಮಾನಗಳ ಕುರಿತು ಸಮಾನ ನಿಲುವನ್ನು ಪ್ರಕಟಿಸುತ್ತಿದ್ದು, ಪರಸ್ಪರ ಸಹಕರಿಸುತ್ತಿದ್ದ ಈ ದೇಶಗಳು ಬ್ರೆಜಿಲ್‌ನಲ್ಲಿ ೨೦೧೪ರ ಜುಲೈ ೧೫ರಂದು ನಡೆದ ಶೃಂಗಸಭೆಯಲ್ಲಿ ೧೦೦ ಬಿಲಿಯ ಡಾಲರುಗಳ ಬಂಡವಾಳ ಹೂಡಿ ಬ್ಯಾಂಕ್ ಒಂದನ್ನು ಸ್ಥಾಪನೆ ಮಾಡಲು ನಿರ್ಧರಿಸಿವೆ. ಈ ಬ್ಯಾಂಕಿನ ಕೇಂದ್ರ ಕಛೇರಿ ಚೀಣಾದ ಕೈಗಾರಿಕಾ ಪ್ರಾಂತ ಶಾಂಘಾಯ್‌ನಲ್ಲಿರುವುದು. ಐದು ದೇಶಗಳು ಸಮಾನವಾಗಿ ಈ ಬಂಡವಾಳ ಹೂಡುವುದಲ್ಲದೆ, ಸಮಾನ ಮತವನ್ನು ಆಡಳಿತ ನಿರ್ವಹಣೆಯಲ್ಲಿ ಹೊಂದಿರುತ್ತವೆ.

ಎರಡನೇ ಮಹಾಯುದ್ಧದ ನಂತರ ಜಾಗತಿಕ ಆರ್ಥಿಕ ನಿರ್ವಹಣೆಗಾಗಿ ಅಮೆರಿಕದ ನೇತೃತ್ವದಲ್ಲಿ ಸ್ಥಾಪನೆಗೊಂಡ ವರ್ಲ್ಡ್ ಬ್ಯಾಂಕ್ ಮತ್ತು ಐಎಂಎಫ್‌ಗಳ ಪಾರುಪತ್ಯಕ್ಕೆ ಪ್ರತಿಸ್ಪರ್ಧಿಯಾದೀತೆ ಎಂಬ ಊಹಾಪೋಹಗಳೂ ಪಾಶ್ಚಾತ್ಯ ದೇಶಗಳಲ್ಲಿ ಬ್ರಿಕ್ಸ್ ಬ್ಯಾಂಕ್ ಬಗ್ಗೆ ಇರುವುದು ಸಹಜ. ಅಂತರರಾಷ್ಟ್ರೀಯ ಹಣಕಾಸಿನ ವ್ಯವಹಾರದಲ್ಲಿ ಬೇರೂರಿರುವ ಈ ಬ್ಯಾಂಕುಗಳಿಗೆ, ಏಶಿಯನ್ ಡೆವೆಲಪ್‌ಮೆಂಟ್ ಬ್ಯಾಂಕ್ ಕೂಡ ಸೇರಿ, ಬ್ರಿಕ್ಸ್ ಬ್ಯಾಂಕ್ ಪೈಪೋಟಿ ನೀಡುವುದೆಂದು ಕಲ್ಪಿಸಿಕೊಳ್ಳುವುದು ಸರಿಯಲ್ಲ. ಆದರೆ ಸಂಪೂರ್ಣವಾಗಿ ಅವುಗಳ ಮೇಲೆ ಅವಲಂಬನೆಯನ್ನು ತಗ್ಗಿಸುತ್ತದೆ ಎಂಬುದಂತೂ ನಿಜ. ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಇದೊಂದು ಆಸರೆಯಾಗಿ ಬೆಳೆದರೆ ಪರಿಣಾಮ ಒಳ್ಳೆಯದಾಗುವುದು ಖಚಿತ. ಮುಂದಿನ ಐದು ವರ್ಷಗಳಲ್ಲಿ ಪೂರ್ಣಪ್ರಮಾಣದ ಬಂಡವಾಳ ಹೂಡಿಕೆಯನ್ನು ಮುಟ್ಟುವ ನಿರೀಕ್ಷೆಯಿರಿಸಿಕೊಂಡಿರುವ ಬ್ರಿಕ್ಸ್ ಬ್ಯಾಂಕಿನ ಸ್ಥಾಪನೆಯಲ್ಲಿ ತೊಡಗಿರುವ ದೇಶಗಳು ಈಗಾಗಲೇ ೧೫೦ ಮಿಲಿಯ ಡಾಲರುಗಳ ಬಂಡವಾಳ ಹೂಡಿವೆ. ಮುಂದೆ ಪ್ರತಿವರ್ಷ ೧೮೫೦ ಮಿಲಿಯ ಡಾಲರುಗಳನ್ನು ಹೂಡಲಿವೆ ಬಂಡವಾಳದ ಗುರಿ ಮುಟ್ಟಲು. ಹಾಗಿರುವಾಗ ೨೨೩ ಬಿಲಿಯ ಡಾಲರ್ ಬಂಡವಾಳ ಹೊಂದಿರುವ ವರ್ಲ್ಡ್ ಬ್ಯಾಂಕ್‌ಗಾಗಲಿ, ೬೭ ಸದಸ್ಯರಾಷ್ಟ್ರಗಳನ್ನು ಹೊಂದಿದ್ದು ೧೬೨ ಬಿಲಿಯ ಡಾಲರ್ ಬಂಡವಾಳ ಇರುವ ಏಷ್ಯನ್ ಡೆವೆಲಪ್‌ಮೆಂಟ್ ಬ್ಯಾಂಕ್‌ಗಾಗಲಿ ಸಾಟಿಯಾಗದು. ಆದರೆ ಇದೊಂದು ಅಪೂರ್ವವಾದ ಗಮನಾರ್ಹ ಬೆಳವಣಿಗೆ ಎನ್ನುವುದಂತೂ ನಿಜ.

ಅಭಿವೃದ್ಧಿಶೀಲ ದೇಶಗಳ ಯೋಜನೆಗಳಿಗೆ ಸುಲಭ ಷರತ್ತುಗಳ ಮೇಲೆ ಸಾಲ ಪಡೆದುಕೊಳ್ಳಲು ಬ್ರಿಕ್ಸ್ ಬ್ಯಾಂಕಿನಿಂದ ಸಾಧ್ಯವಾದೀತು. ವರ್ಲ್ಡ್ ಬ್ಯಾಂಕ್, ಐಎಂಎಫ್ ಕಠಿಣ ಷರತ್ತುಗಳಾಗಲಿ, ಸಾಲ ಪಡೆದುಕೊಳ್ಳುವ ದೇಶ ಅನುಸರಿಸಬೇಕಾದ ನೀತಿಯ ನಿರ್ದೇಶನಗಳಾಗಲಿ ಇರುವುದು ಸಾಧ್ಯವಿಲ್ಲ. ಎಲ್ಲ ನಿರ್ಧಾರಗಳೂ ಒಮ್ಮತದಿಂದಾಗುವುದರಿಂದ ಯಾವುದೇ ಒಂದು ದೇಶದ ಪ್ರಾಧಾನ್ಯತೆ ಇರುವುದಿಲ್ಲ. ಈಗಿರುವಂತೆ ವರ್ಲ್ಡ್ ಬ್ಯಾಂಕಿನಲ್ಲಿ ಹೂಡಿರುವ ಬಂಡವಾಳದ ಆಧಾರದ ಮೇಲೆ ಮತಗಳ ಪಾಲು ಇರುತ್ತವೆ. ಯಾವುದೇ ಪ್ರಮುಖ ನಿರ್ಧಾರ ತೆಗೆದುಕೊಳ್ಳಲು ಶೇ. ೮೫ರಷ್ಟು ಮತದಾನ ಇರಬೇಕು. ಹಾಗಾಗಿ ಶೇ. ೧೬ರಷ್ಟು ಮತದಾನದ ಪಾಲು ಹೊಂದಿರುವ ಅಮೆರಿಕ ಒಂದು ಬಗೆಯಲ್ಲಿ ವೀಟೋ ಅಧಿಕಾರವನ್ನು ಪಡೆದಿದೆ. ಅದರ ಬೆಂಬಲವಿಲ್ಲದೆ ಯಾವ ನಿರ್ಧಾರವೂ ಸಾಧ್ಯವಾಗದು. ಅಂತಹ ಸ್ಥಿತಿ ಬ್ರಿಕ್ಸ್ ಬ್ಯಾಂಕ್‌ನಲ್ಲಿ ಸಾಧ್ಯವಾಗದು. ಏಕೆಂದರೆ ಭಾಗವಹಿಸಿರುವ ದೇಶಗಳು ಸಮಾನ ಹಕ್ಕುದಾರರು. ಪ್ರಪಂಚದ ಜನಸಂಖ್ಯೆಯಲ್ಲಿ ಶೇ. ೪೦ರಷ್ಟು ಪಾಲನ್ನು ಹೊಂದಿರುವ ಬ್ರಿಕ್ಸ್ ದೇಶಗಳ ಜಿಡಿಪಿ ಸುಮಾರು ೨೪ ಟ್ರಿಲಿಯನ್ ಡಾಲರುಗಳು. ಈ ದೇಶಗಳು ಸ್ಥಾಪಿಸುತ್ತಿರುವ ಹೊಸ ಅಭಿವೃದ್ಧಿ ಬ್ಯಾಂಕ್ ಯಶಸ್ವಿಯಾಗಲಿ, ಅದರ ವ್ಯವಹಾರ ವರ್ಧಿಸಿ ಅನುಕೂಲವಾಗಲಿ ಎಂದು ಹಾರೈಸೋಣ.

## ಹತ್ತಿ ಉರಿಯುತ್ತಿರುವ ಪಶ್ಚಿಮ ಏಶಿಯ

ಪಶ್ಚಿಮ ಏಶಿಯದ ದೇಶಗಳಲ್ಲಿ ಅಸ್ಥಿರತೆ, ಘರ್ಷಣೆ, ಅಂತರ್ಯುದ್ಧ, ವಿದೇಶೀ ಹಸ್ತಕ್ಷೇಪಕ್ಕೆ ಕೊನೆಯೇ ಇಲ್ಲವೇನೋ ಎನಿಸುತ್ತದೆ ಪರಿಸ್ಥಿತಿ ಅವಲೋಕಿಸಿದರೆ. ಎರಡನೇ ಮಹಾಯುದ್ಧ ಮುಗಿದ ಮೇಲೆ ಈ ಪ್ರದೇಶದಲ್ಲಿ ಇಸ್ರೇಲ್ ಸ್ಥಾಪನೆಯಾದಾಗಿನಿಂದ ಬಂದೂಕಿನ ಸದ್ದು ಅಡಗಿಯೇ ಇಲ್ಲ ಎಂದರೆ ಉತ್ಪ್ರೇಕ್ಷೆಯಲ್ಲ. ಈ ಭೂಭಾಗದಲ್ಲಿ ಅಮೆರಿಕ ನಡೆಸಿರುವಷ್ಟು ಹಸ್ತಕ್ಷೇಪ ಬೇರೆಲ್ಲೂ ಆಗಿಲ್ಲ. ಪ್ರಪಂಚದಲ್ಲೇ ಅತ್ಯಧಿಕ ತೈಲನಿಕ್ಷೇಪ ಹೊಂದಿರುವ ಈ ದೇಶಗಳನ್ನು ನಿಯಂತ್ರಿಸುವುದೇ ಅಮೆರಿಕದ ಉದ್ದೇಶ. ಇತ್ತೀಚಿನ ಬೆಳವಣಿಗೆಗಳು ಅದಕ್ಕೆ ನಿದರ್ಶನ.

ಒಂದು ಕಡೆ ಇಸ್ರೇಲ್ ನಿರಂತರವಾಗಿ ಗಾಜಾ ಪ್ರದೇಶದಲ್ಲಿ ಪ್ಯಾಲಸ್ತೀನಿಯನ್ನರ ಮೇಲೆ ದಾಳಿ ನಡೆಸುತ್ತಿದೆ. ಹಮಾಸ್ ಭಯೋತ್ಪಾದಕರನ್ನು ನಿಗ್ರಹಿಸುವ ಹೆಸರಿನಲ್ಲಿ ಇಸ್ರೇಲ್ ನಡೆಸುತ್ತಿರುವ ದಾಳಿಗೆ ಅಮೆರಿಕದ ಕುಮ್ಮಕ್ಕು ಇದ್ದೇ ಇದೆ. ಒಂದೆರಡು ಬಾರಿ ಯುದ್ಧಸ್ತಂಭನ ಒಪ್ಪಂದವಾದರೂ ಅದು ಯಾವ ಬಗೆಯಲ್ಲೂ ಪ್ರಯೋಜನ ವಾಗಲಿಲ್ಲ. ಇದುವರೆಗೆ ನಡೆದಿರುವ ಘರ್ಷಣೆಗಳಲ್ಲಿ ಎರಡು ಸಾವಿರಕ್ಕೂ ಹೆಚ್ಚು ಪ್ಯಾಲಸ್ತೀನಿಯನ್ನರು ಅಸುನೀಗಿದ್ದಾರೆ. ಈಜಿಪ್ಟ್‌ನ ಮಧ್ಯಸ್ಥಿಕೆ ಫಲಪ್ರದವಾಗುವುದು ಅನುಮಾನ. ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಇಸ್ರೇಲಿನ ವರ್ತನೆಯನ್ನು ಖಂಡಿಸಿದ್ದಾರೆ. ಯಾವುದನ್ನೂ ಲೆಕ್ಕಿಸದೆ ಇಸ್ರೇಲ್ ಹಿಂಸಾಚಾರವನ್ನು ಮುಂದುವರಿಸುತ್ತಿದೆ. ಈ ಮಧ್ಯೆ ಇರಾಕ್‌ನ ಪರಿಸ್ಥಿತಿ ಉಲ್ಬಣಿಸಿದೆ. ಉಗ್ರಗಾಮಿಗಳನ್ನು ಸದೆಬಡಿಯಲು ಅಮೆರಿಕದ ಅಧ್ಯಕ್ಷ ಒಬಾಮಾ ಬಾಂಬು ದಾಳಿ ಪ್ರಾರಂಭಿಸಿದ್ದಾರೆ. ಇಸ್ಲಾಮಿಕ್ ರಾಜ್ಯ ಸ್ಥಾಪನೆಗೆ ಹೊರಟಿರುವ ಉಗ್ರಗಾಮಿಗಳು ಇರಾಕ್‌ನ ಹಲವು ಭಾಗಗಳನ್ನು ಆಕ್ರಮಿಸಿಕೊಂಡಿದ್ದಾರೆ. ಸಿರಿಯಾದ ಬಂಡಾಯಗಾರರೂ ಇವರ ಜೊತೆ ಕೈಜೋಡಿಸಿದ್ದಾರೆ. ಅಮೆರಿಕ ನಡೆಸುತ್ತಿರುವ ಬಾಂಬು ದಾಳಿ ನೇರವಾದ ದುರಾಕ್ರಮಣವಾಗಿದೆ. ಈ ಎರಡೂ ಪ್ರಕರಣಗಳ ವಿಚಾರದಲ್ಲಿ ಭಾರತ ಸರಕಾರ ತಳೆದಿರುವ ತಟಸ್ಥ ಧೋರಣೆ ಅರ್ಥವಿಲ್ಲದ್ದಾಗಿದೆ. ನೂರಾರು ಮಂದಿ ಭಾರತೀಯರು ಇನ್ನೂ ಸಂಘರ್ಷದ ಪ್ರದೇಶದಲ್ಲಿ ಸಿಕ್ಕಿಕೊಂಡಿದ್ದಾರೆ. ಅವರನ್ನು ಸುರಕ್ಷಿತವಾಗಿ ಭಾರತಕ್ಕೆ ಕರೆತರುವುದಕ್ಕೆ ಸರಕಾರದ ಪ್ರಯತ್ನ ಸೀಮಿತಗೊಂಡಿದೆ. ಇದುವರೆಗೆ ಪ್ಯಾಲಸ್ತೀನಿಯನ್ ಜನರ ನ್ಯಾಯವಾದ ಹಕ್ಕಿಗೆ ಬೆಂಬಲ ನೀಡುತ್ತಿತ್ತು ಭಾರತ. ಆದರೆ ಈಗ ಭಾಜಪ ಸರಕಾರ ನೇರವಾಗಿ ಇಸ್ರೇಲ್ ಪರ ನೀತಿ ಅನುಸರಿಸುತ್ತಿರುವುದು ಶೋಚನೀಯ. ಪಶ್ಚಿಮ ಏಶಿಯದ ಪ್ರದೇಶದಲ್ಲಿ ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯಾಗುವವರೆಗೆ ಶಾಂತಿ ನೆಲೆಸದು ಎನ್ನುವುದನ್ನು ಈವರೆಗಿನ ವಿದ್ಯಮಾನಗಳು ಸಾಬೀತುಮಾಡಿವೆ. ಮಧ್ಯಸ್ಥಿಕೆ ವಹಿಸಲು ಹೊರಟಿರುವ ಈಜಿಪ್ಟ್‌ನಲ್ಲೇ ಅತೃಪ್ತಿಯ ಹೊಗೆಯಾಡುತ್ತಿರುವುದನ್ನು ಗಮನಿಸಬೇಕು. ಈ ಪ್ರದೇಶದಲ್ಲಿ ಅತಿ ದೊಡ್ಡದಾದ ಸಿರಿಯಾದಲ್ಲಿ ಮತ್ತು ಅದರ ನೆರೆರಾಷ್ಟ್ರ ಲಿಬಿಯದಲ್ಲಿ ಅಸ್ಥಿರತೆ ತಾಂಡವ ವಾಡುತ್ತಿದೆ. ಅಂತರ್ಯುದ್ಧದ ಪರಿಸ್ಥಿತಿ ಈ ಎರಡೂ ದೇಶಗಳಲ್ಲಿದೆ. ಈ ಬೆಳವಣಿಗೆ ಗಳನ್ನು ಪರಿಗಣಿಸಿದರೆ ಪಶ್ಚಿಮ ಏಶಿಯ ಹತ್ತಿ ಉರಿಯುತ್ತಿರುವುದು ಸ್ಪಷ್ಟವಾಗುತ್ತದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ರೊಪ್ಪದವರ ಪಾಡು

**ಪರಂಜ್ಯೋತಿ**

**ರೊ**ಪ್ಪ ಎಂದರೆ, ಕುರಿ, ದನ, ಎಮ್ಮೆ, ಹಂದಿ ಮುಂತಾದ ಸಾಕುಪ್ರಾಣಿಗಳನ್ನು ಕೂಡಿಹಾಕುವ ದೊಡ್ಡಿ ಎಂದು ಅರ್ಥ. ಪಾಪಣ್ಣನವರ ಕುರಿ ಕೊಪ್ಪ ಒಂದು ಸಾವಿರದಷ್ಟು ಕುರಿಗಳಿರುವ ವಿಸ್ತಾರವಾದ, ರಕ್ಷಣೆಗಾಗಿ ಬೇಲಿಯಿಲ್ಲದ, ತೆರೆದ ಬಯಲಿನ ಕೊಟ್ಟಿಗೆ. ಅವರದು ಅಮೆಲಾರಿ ರೊಪ್ಪ. ಇಂದು ಈ ಊರಾದರೆ ನಾಳೆ ಮತ್ತೊಂದು ಊರು.

ಮಂಡ್ಯ ಜಿಲ್ಲೆಯ ಬಸರಾಳು ಹೋಬಳಿಯ ನಂಜೇನಳ್ಳಿ ಪಾಪಣ್ಣನವರ ಊರು. ಊರಿನ ಎಲ್ಲರೂ ಸರಿಸುಮಾರು ಕುರಿಪಾಲಕರೇ. ಆರು ಜನರಿಗೆ ಸೇರಿದ ಕುರಿಗಳ ಹಿಂಡಿನ ನಿರ್ವಹಣೆ ಪಾಪಣ್ಣನವರ ಹೆಗಲಿಗೆ. ಪರಂಪರೆಯಿಂದಲೂ ಕುರಿ ಸಾಕಣೆಯೇ ಅವರ ಮುಖ್ಯ ಕಾಯಕ. ಎಲ್ಲರಿಗೂ ಅಷ್ಟಗಲ ಜಮೀನು, ಸಣ್ಣ ಮನೆಗಳಿವೆ. ಅವರನ್ನು ಸಾವಿರ ಕುರಿಗಳ ಸರದಾರರು ಎನ್ನುವಂತಿಲ್ಲ. ಸದಾ ದುಡಿಮೆಯನ್ನು ಬಯಸುವ ಕಾಯಕ ಅವರದು. ಬಡತನವೂ ತಮ್ಮ ಜೊತೆಗಿದೆ ಎಂದು ಅವರೇ ಹೇಳುತ್ತಾರೆ.

ಚಳಿಗಾಲ ಮುಗಿಯುತ್ತಿದ್ದಂತೆ, ಸ್ವಂತ ಊರುಗಳ ಕಡೆ ಮೇವು ಕಡಿಮೆಯಾಗತೊಡಗಿದಾಗ ಅವರ ತಿರುಗಾಟ ಪ್ರಾರಂಭವಾಗುತ್ತದೆ. ಇದರಿಂದ ಮೇವಿನ ಸಮಸ್ಯೆ ಪರಿಹಾರವಾಗುವುದಲ್ಲದೆ, ಆರ್ಥಿಕವಾಗಿಯೂ ಪ್ರಯೋಜನವಾಗುತ್ತದೆ. ಜಿಲ್ಲೆಯ ಮತ್ತೊಂದು ಕಡೆ ಸುಮಾರು ೫೦ ಕಿಲೋಮೀಟರುಗಳ ಆಚೆಗಿನ ಊರುಗಳಲ್ಲಿ ಸಂಚರಿಸುತ್ತಾರೆ. ರೈತರ ಬೇಡಿಕೆಯ ಮೇರೆಗೆ ಅಲ್ಲಲ್ಲಿ ರೊಪ್ಪ ಸ್ಥಾಪಿಸುತ್ತಾರೆ. ಒಂದು ಕಡೆ ಒಂದೆರಡು ದಿನಗಳಿಗಿಂತ ಹೆಚ್ಚು ಸಮಯ ಇರುವುದಿಲ್ಲ. ಮುಂದಿನ ಊರಿನ ರೈತರು ಮುಂಗಡ ನೀಡಿ ಕರೆಸಿಕೊಳ್ಳುತ್ತಾರೆ.

ಹೆಚ್ಚು ರಾಸುಗಳಿಲ್ಲದ, ತಮ್ಮ ವ್ಯವಸಾಯಕ್ಕೆ ತಿಪ್ಪೆ ಗೊಬ್ಬರದ ಅಗತ್ಯವಿರುವ ರೈತರು, ಕೊಯ್ಲಾದ ನಂತರ ತಮ್ಮ ಹೊಲ ಗದ್ದೆಗಳಲ್ಲಿ ರೊಪ್ಪ ಹೂಡಿಸಲು ಕಾಯುತ್ತಿರುತ್ತಾರೆ. ಒಂದು ಸಾವಿರದಷ್ಟು ಕುರಿಗಳಿರುವ ರೊಪ್ಪಕ್ಕೆ ಒಂದು ರಾತ್ರಿಗೆ ೩೦೦ ರೂ. ಸುತ್ತು ಐದು ಸೇರು ಅಕ್ಕಿ ಸಂಭಾವನೆ ನೀಡಬೇಕಾಗುತ್ತದೆ.

ಹಿಂದೆ ಹಳ್ಳಿಗಳಲ್ಲಿ 'ಕುರಿಕಂಬಳಿ' ಎನ್ನಿಸಿಕೊಳ್ಳುತ್ತಿದ್ದ ಒರಟಾದ, ಸ್ವಲ್ಪ ಭಾರವೂ ಆದ ಕಂಬಳಿಗಳಿಗೆ ಹೆಚ್ಚು ಬೇಡಿಕೆ ಇತ್ತು. ಇಡೀ ಕುಟುಂಬ ಒಂದು ದೊಡ್ಡ ಕಂಬಳಿಯೊಳಗೆ ತೂರಿಕೊಂಡು ಚಳಿಯಿಂದ ರಕ್ಷಣೆ ಪಡೆಯುತ್ತಿದ್ದುದುಂಟು. ಅತಿಥಿಗಳನ್ನು, ಗುರುಜನರನ್ನು 'ಕರಿಕಂಬಳಿ ಗದ್ದುಗೆ' ಹಾಸಿ ಗೌರವಿಸುವ ರಿವಾಜಿತ್ತು. ಬಯಲುಸೀಮೆಯಲ್ಲಿ ಹೆಚ್ಚು ಸಂಖ್ಯೆಗಳಲ್ಲಿ ಕುರಿಗಳನ್ನು ಸಾಕುವವರಿದ್ದರು. ಕರಿಯ ಕಂಬಳಿ ನೇಕಾರಿಕೆಯೂ ಅಭಿವೃದ್ಧಿಯಾಗಿತ್ತು. ಮೈಸೂರು ಸೀಮೆಯ ಹಿರಿಯೂರು, ತರೀಕೆರೆ ಮುಂತಾದ ಕಡೆಗಳಲ್ಲಿ ಕಂಬಳಿ ತಯಾರಿಸುವ ಫ್ಯಾಕ್ಟರಿಗಳೂ ಇದ್ದು ಆ ಕಂಬಳಿಗಳನ್ನು ನೀಲಗಿರಿಯ, ಟೀ ತೋಟಗಳ ಕೆಲಸಗಾರರ





ಬಳಕೆಗಾಗಿ ಕಳಿಸಿಕೊಡಲಾಗುತ್ತಿತ್ತಂತೆ. 'ಮಳೆ ಕಂಬಳಿ' ಎನಿಸಿಕೊಳ್ಳುತ್ತಿದ್ದ ಅವು ಮಳೆನೀರು ಒಳಕ್ಕಿಳಿಯದಷ್ಟು ಭದ್ರವಾಗಿರುತ್ತಿದ್ದವು. ಕುರಿಗಳ ಉಪ ಉತ್ಪನ್ನವಾದ ಉಣ್ಣೆಯನ್ನು ಕತ್ತರಿಸಿ, ನೇಕಾರರಿಗೆ, ಮಾರಾಟ ಮಾಡುವವರಿರುತ್ತಿದ್ದರು. ಇದರಿಂದ ಕುರಿಗಾಹಿಗಳಿಗೆ ಆದಾಯ ಬರುತ್ತಿತ್ತು. ಈಗ ಕಾಲ ಬದಲಾಗಿದೆ. ಕಂಬಳಿ ನೇಕಾರಿಕೆ ಇತಿಹಾಸಕ್ಕೆ ಸೇರಿಹೋಗಿದೆ. ಆದಾಯ ತರುತ್ತಿದ್ದ ಉಣ್ಣೆ ಕತ್ತರಿಸಲು ಕುರಿಗಳ ಒಡೆಯರೇ ಕುರಿಗೆ ೨೦ ರೂ.ನಂತೆ ತೆರಬೇಕು ! ಉಣ್ಣೆ ಸಿಕ್ಕಾಪಟ್ಟೆ ಬೆಳೆಯಲು ಬಿಟ್ಟರೆ ಕುರಿಗಳ ಮೈ ಕಟ್ಟುವುದಿಲ್ಲ. ವರ್ಷಕ್ಕೊಮ್ಮೆ ಉಣ್ಣೆ ಕತ್ತರಿಸಬೇಕು. ಕತ್ತರಿಸುವವರೇ ಉಣ್ಣೆಯನ್ನು ಪುಕ್ಕಟೆಯಾಗಿ ಒಯ್ಯುತ್ತಾರೆ.

ಪಾಪಣ್ಣನವರ ನಾಯಕತ್ವದಲ್ಲಿರುವ ಕುರಿಗಳು ನಂಜೇನಳ್ಳಿಯ ಆರು ಜನರಿಗೆ ಸೇರಿದವು. ತಿರುಗಾಟಕ್ಕೆ ಹೊರಡುವಾಗ ನಿರ್ವಹಣೆಗಾಗಿ ಪ್ರತಿ ಮಂದೆಯ ಇಬ್ಬರು ಹಿಂಡಿನೊಂದಿಗೆ ಹೊರಡುತ್ತಾರೆ. ಇನ್ನು ಮುಂಗಾರುವರೆಗೆ ಹಗಲು ರಾತ್ರಿ ಕುರಿ ಮಂದೆಯೊಂದಿಗೇ ಅವರ ಬದುಕು. ಮಂದೆಯಲ್ಲಿ ಏಳೆಂಟು ಆಡುಗಳೂ ಇವೆ. ಒಂದು ಊರಿನಿಂದ ಮತ್ತೊಂದು ಊರಿಗೆ ಇವರ ಸಾಮಾನು ಸರಂಜಾಮು ಸಾಗಿಸಲು ಕತ್ತೆಗಳಿವೆ. ಕಾವಲು ನಾಯಿಗಳಿವೆ.

ತಿರುಗಾಟದ ಸಂದರ್ಭದಲ್ಲಿ ಪ್ರತಿಯೊಂದು ಮಂದೆಗೆ ಸೇರಿದ ಏಳೆಂಟು ಕುರಿಗಳಾದರೂ ಮರಿ ಹಾಕುತ್ತವೆ. ಕೆಲವು ದಿನಗಳವರೆಗೆ ಅವುಗಳ ಪೋಷಣೆಗೆ ವಿಶೇಷ ಗಮನ ನೀಡಬೇಕು. ತಮ್ಮ ತಮ್ಮ ಮಂದೆಗಳ ಕುರಿಗಳನ್ನು ಗುರುತಿಸಲು ತಮ್ಮದೇ ಏರ್ಪಾಟು ಮಾಡಿಕೊಂಡಿದ್ದಾರೆ. ಬೇರೆಬೇರೆ ಬಣ್ಣಗಳಿಂದ ಕುರಿಗಳ ಬಾಲ, ಬೆನ್ನಮೇಲೆ ಒಂದು ಚುಕ್ಕೆ, ಎರಡು ಚುಕ್ಕೆ ಹಾಗೂ ಪಟ್ಟೆ ಎಳೆದು ತಮ್ಮ ಮಂದೆಯ ಕುರಿಗಳನ್ನು ಗುರುತಿಸುತ್ತಾರೆ. ಸಣ್ಣ ಮರಿಗೂ ಚುಕ್ಕೆ ಗುರುತುಗಳಿರುತ್ತವೆ.

ರೊಪ್ಪದ ಬಾಬ್ತು ರೈತರು ನೀಡುವ ಹಣ ಪಾಪಣ್ಣನವರ ಬಳಿ ಇರುತ್ತದೆ. ಅಗತ್ಯವಾದಾಗ ಮಂದೆಯ ಸದಸ್ಯರು ತಮ್ಮ ಖರ್ಚಿಗಾಗಿ ಹಣ ಪಡೆಯುತ್ತಾರೆ. ಕೆಲವರಿಗೆ ರಾತ್ರಿ 'ಬಾಯಾರಿಕೆ' ಯಾಗುವುದುಂಟು ! ಚಪಲ ಮಿತಿಮೀರದಂತೆ ಪಾಪಣ್ಣ ಪ್ರಕರಣವನ್ನು ನಿಯಂತ್ರಿಸುತ್ತಾರೆ.

ಕುರಿ ಹಿಂಡು ಮುಸ್ಸಂಜೆಗೆ ರೊಪ್ಪಕ್ಕೆ ತಲುಪುತ್ತವೆ. ಬೆಳಕಿರುವಾಗಲೇ ಅವರು ಅಡುಗೆ ಕೆಲಸ ಮುಗಿಸುತ್ತಾರೆ. ಬೆಳಗ್ಗೆ ಮತ್ತು ಸಂಜೆ ಎರಡು ಹೊತ್ತಿನ ಊಟ. ಊಟದ ನಂತರ ರೊಪ್ಪದ ನಾಲ್ಕು ಮೂಲೆಗಳಲ್ಲಿ ನಾಯಿಗಳ ಜೊತೆಗೆ ಕಾವಲು ಕಾಯುತ್ತಾರೆ. ಈಗ ಪ್ರತಿಯೊಬ್ಬರ ಕೈಯಲ್ಲೂ ಮೊಬೈಲುಗಳಿವೆ. ಇದರಿಂದ ಅಗತ್ಯವಾದಾಗ ಮನೆಯವರೊಂದಿಗೂ ಸಂಪರ್ಕ ಸಾಧ್ಯವಾಗುತ್ತದೆ. ಹಾಡುಗಳನ್ನು ಕೇಳಿಸಿಕೊಳ್ಳುತ್ತ, ಆಕಾಶದ ನಕ್ಷತ್ರಗಳನ್ನು ನೋಡುತ್ತ ನಿದ್ದೆಗೆ ಜಾರುತ್ತಾರೆ. ರಾತ್ರಿಯಂತೆ ಹಗಲು ಸಹ ತಮ್ಮ ಕುರಿ ಹಿಂಡಿನ ಮೇಲೆ ನಿಗಾ ಇಡಬೇಕಾಗುತ್ತದೆ. ಕೆಲವೊಮ್ಮೆ ಊರ ನಾಯಿಗಳು ಕುರಿಮರಿಗಳ ಮೇಲೆ ಎರಗುವುದುಂಟು. ರಾತ್ರಿ ಕಬ್ಬಿನ ಗದ್ದೆಗಳಲ್ಲಿ ಅಡಗಿರಬಹುದಾದ ನರಿಗಳಿಂದ ಕುರಿಗಳನ್ನು ರಕ್ಷಿಸಬೇಕು. ಹೀಗೆ ಹಗಲು ರಾತ್ರಿ ಅವರು ಸದಾ ಜಾಗೃತರಾಗಿರಬೇಕಾಗುತ್ತದೆ. ತಿರುಗಾಟದ ಸಂದರ್ಭದಲ್ಲಿ ಕೆಲವೊಮ್ಮೆ ರಾತ್ರಿ ಇಡೀ ಕಣ್ಣು ಕೋರೈಸುವಂಥ ಮಿಂಚು, ಗುಂಡಿಗೆ ನಡುಗಿಸುವಂಥ ಗುಡುಗು ಹಾಗೂ ಅಕಸ್ಮಾತ್ ಬಂದು ಸುರಿಯುವ ಮಳೆಗೆ ಕೆಲವೊಮ್ಮೆ ಕುರಿಗಳು ಸಾಯುವುದುಂಟು. ಆಲಿಕಲ್ಲು ಮಳೆಯಾದರಂತೂ ಬಯಲು ರೊಪ್ಪದವರ ಪಾಡು ಹೇಳತೀರದು. ಹೀಗೆ ಪ್ರಕೃತಿ ಸಹ ಕೆಲವೊಮ್ಮೆ ಮುನಿಸು ತೋರಬಹುದು ! ಕೆಲವೊಮ್ಮೆ ಭಾರಿ ಹಾನಿಯಾಗುವುದುಂಟು !

ತಿರುಗಾಟದ ಸಂದರ್ಭದಲ್ಲಿ ಮಾಂಸಕ್ಕಾಗಿ ಅನೇಕ ಕುರಿ, ಟಗರುಗಳು ಮಾರಾಟವಾಗುವ ಸಾಧ್ಯತೆ ಇರುತ್ತದೆ. ಸಂತೆಗಿಂತ ರೊಪ್ಪದವರ ಕುರಿಗಳು ಅಗ್ಗವೆಂಬುದನ್ನು ರೈತರು ಬಲ್ಲರು. ಹೀಗೆ ಮಾರಾಟವಾದಾಗ ಆ ಹಣ ಆಯಾ ಮಂದೆಯವರಿಗೆ ಸೇರುತ್ತದೆ.

ಊರಿನಲ್ಲಿದ್ದರೆ ಕುರಿ ಮೇಯಿಸುವುದಕ್ಕೆ ಮನೆಯ ಇತರರು ಸಹಕರಿಸುತ್ತಾರೆ. ಆದರೆ ತಿರುಗಾಟದಲ್ಲಿ ಅದಕ್ಕೆ ಅವಕಾಶವಿಲ್ಲ. ಸಣ್ಣಪುಟ್ಟ ಕಾಯಿಲೆ ಕಸಾಲೆ ಪೀಡಿಸಿದರೂ ಅದನ್ನು ಸಹಿಸಿಕೊಂಡೇ ರೊಪ್ಪದ ಕೆಲಸ ಕಾರ್ಯಗಳಲ್ಲಿ ಭಾಗವಹಿಸುತ್ತಾರೆ.

ಪ್ರತಿ ಮಂದೆಗೂ ನೂರಕ್ಕೂ ಹೆಚ್ಚು ಕುರಿಗಳಿವೆ. ಅವರು ಹೇಳುವಂತೆ, ತಂದೆ, ತಾತನ ಕಾಲದಿಂದ ಹೀಗೆ ಪಡಿಪಾಟಲಿನಲ್ಲಿ ಬದುಕಿ ಬರುತ್ತಿರುವವರು ಅವರು. ಪಾಪಣ್ಣನವರು ದುಗುಡದ ದನಿಯಲ್ಲಿ ಹೇಳುತ್ತಾರೆ; ಕುರಿ ಮೇಯಿಸುತ್ತ ಬದುಕಿರುವ ತಾವು ಸರ್ಕಾರದ ಯಾವ ಲೆಕ್ಕದಲ್ಲಿಯೂ ಇಲ್ಲ. ರೈತರಿಗೆ, ಬಡವರಿಗೆ ನೀಡಲಾಗುವ ಸರ್ಕಾರದ ಸಹಾಯ ಸವಲತ್ತುಗಳ ಪಟ್ಟಿಯಲ್ಲಿ ನಮ್ಮ ಹೆಸರುಗಳಿರುವುದಿಲ್ಲ. ನಮಗೆ ಉಳಿದಿರುವುದೆಂದರೆ ನಮ್ಮ ಪರಂಪರೆಯ ಕಸುಬನ್ನು ಮುಂದುವರಿಸುವುದು !

ಪಾಪಣ್ಣನವರಿಗೆ ಇಬ್ಬರು ಗಂಡು ಮಕ್ಕಳು, ಒಬ್ಬ ಮಗ ಮಂಜ ಊರಿನಿಂದ ಕಾಣೆಯಾಗಿ ಏಳೆಂಟು ವರ್ಷಗಳೇ ಕಳೆದಿವೆ. ಮತ್ತೊಬ್ಬ ಮಗ ಪ್ರವೀಣ್ ಎಸ್ಸೆಸ್ಸೆಲ್ಸಿ ಪಾಸು ಮಾಡಿದ್ದಾನೆ. ಸರಕಾರಿ ಉದ್ಯೋಗಕ್ಕಾಗಿ ಪ್ರಯತ್ನ ನಡೆಸಿದ್ದಾನೆ. ಈವರೆಗೆ ಏನೂ ಪ್ರಯೋಜನವಾಗಿಲ್ಲ. ಮನೆಗೆಲಸಗಳಲ್ಲಿ ಸಹಾಯ ಮಾಡುತ್ತಾನೆ. ಆತನ ಹಣೆಯಲ್ಲಿ ಕುರಿ ಬಾಲದ ರೇಖೆ ಇರಬಹುದೇನೋ !

ಅಂದಿನ ಸಂಜೆಗೆ ಮುಂದಿನ ಊರಿನಲ್ಲಿ ರೊಪ್ಪ ಹಾಕುವುದಕ್ಕೆ ತಯಾರಿಯ ನಡುವೆ ನಮ್ಮ ಮಾತುಕತೆಗಳು ನಡೆದವು. ಮಾತುಗಳ ಮಧ್ಯೆ ತಾವು ಎಲ್ಲಿಗೂ ಸಲ್ಲದವರು ಎಂಬ ನೋವು. ನಿಟ್ಟುಸಿರು.

**ಪರಂಜ್ಯೋತಿ**
ನಂ. ೧೧, ೧ನೇ ಮಹಡಿ, ಶ್ರೀರಾಮ ದೇವಾಲಯ ರಸ್ತೆ
ಈಜಿಪುರ, ವಿವೇಕನಗರ ಅಂಚೆ
ಬೆಂಗಳೂರು – ೫೬೦ ೦೪೭



ಪ್ರಕಾಶ ಗಿರಿಮಲ್ಲನವರ

ಕಳೆದ ತಿಂಗಳು ನಮ್ಮ ನಾಡಿನ ಜಾನಪದ ವಿದ್ವಾಂಸ, ರಂಗಕರ್ಮಿ ಡಾ॥ ಬಸವರಾಜ ಮಲಶೆಟ್ಟಿಯವರು ನಿಧನ ಹೊಂದಿದರು. ಜಾನಪದ ಕ್ಷೇತ್ರಕ್ಕೆ ತಮ್ಮ ಬರಹ, ಪ್ರಯೋಗಗಳ ಮೂಲಕ ಅಪಾರ ಕೊಡುಗೆ ನೀಡಿದ ಡಾ॥ ಮಲಶೆಟ್ಟಿ ಅವರು ನಿರ್ಲಕ್ಷ್ಯಕ್ಕೊಳಗಾಗಿದ್ದ ಉತ್ತರ ಕರ್ನಾಟಕದ ಜನಪದ ರಂಗಕಲೆಗಳಾದ ದೊಡ್ಡಾಟ, ಸಣ್ಣಾಟ, ಪಾರಿಜಾತ, ಭಜನೆ ಮುಂತಾದ ಪ್ರಕಾರಗಳ ಸಂಗ್ರಹ, ಪ್ರದರ್ಶನಕ್ಕೆ ಅಪಾರವಾಗಿ ಶ್ರಮಿಸಿದವರು. ಅತ್ಯಂತ ಸರಳ, ಆದರ್ಶ ಜೀವನ ನಡೆಸಿದ ಮಲಶೆಟ್ಟಿಯವರ ನಿಧನ ಕನ್ನಡ ಸಾಹಿತ್ಯ ಹಾಗೂ ಜಾನಪದ ರಂಗಭೂಮಿಗೆ ತುಂಬಲಾಗದ ಕೊರತೆಯನ್ನುಂಟುಮಾಡಿದೆ. ಅಪಾರ ವಿದ್ಯಾರ್ಥಿ ಬಳಗ, ಸ್ನೇಹಿತರನ್ನು ಅಗಲಿದ ಡಾ॥ ಬಸವರಾಜ ಮಲಶೆಟ್ಟಿ ಅವರಿಗೆ ಅವರ ಜೀವಿತಾವಧಿಯಲ್ಲಿ ಸಿಗಬೇಕಾದ ಪುರಸ್ಕಾರ ಸಿಗಲಿಲ್ಲ. ಆದರೂ ಅವರು ತಮ್ಮ ಬದುಕಿನ ಹೆಜ್ಜೆಗಳನ್ನು ಸ್ಪಷ್ಟವಾಗಿ ಮೂಡಿಸಿ ಹೋಗಿದ್ದಾರೆ.

*- ಸಂಪಾದಕ*

# ಜಾನಪದ ಜಂಗಮ : ಡಾ॥ ಬಸವರಾಜ ಮಲಶೆಟ್ಟಿ

**ಡಾ॥** ಬಸವರಾಜ ಮಲಶೆಟ್ಟಿ ಅವರ ವ್ಯಕ್ತಿತ್ವ, ಆದರ್ಶಗಳು ಅನುಕರಣೀಯವಾಗಿದ್ದುವು. ಬೆಣ್ಣೆಯಲ್ಲಿನ ಕೂದಲಿನಂತೆ ಅವರು ಸಂಸಾರದಲ್ಲಿದ್ದೂ ಸಂತನಂತಿದ್ದರು. ಅವರದು ಪಾರದರ್ಶಕ ಬದುಕು.

ಡಾ॥ ಬಸವರಾಜ ಮಲಶೆಟ್ಟಿ ಅವರು ಜನಿಸಿದ್ದು ಬೆಳಗಾವಿ ಜಿಲ್ಲೆಯ ಕಿತ್ತೂರು ತಾಲೂಕಿನ ತಿಗಡೊಳ್ಳಿ ಗ್ರಾಮದಲ್ಲಿ. (೧೯-೧೦-೧೯೪೯). ತಾಯಿ ನಾಗೇಂದ್ರವ್ವ; ತಂದೆ ಮರಿಕಲ್ಲಪ್ಪ ಸ್ವಾತಂತ್ರ್ಯಯೋಧರಾಗಿದ್ದರು. ಅಜ್ಜ ಶಿವಪ್ಪ ಕುಸ್ತಿ ಪಟುವಾಗಿದ್ದರು. ಹೀಗೆ ಶಿಸ್ತು ಸೌಜನ್ಯ ಸ್ವಾಭಿಮಾನ ಮೊದಲಾದ ಮೌಲ್ಯಗಳ ಸಂಸ್ಕಾರದಲ್ಲಿ ಬಸವರಾಜರು ತಮ್ಮ ಬದುಕನ್ನು ರೂಪಿಸಿಕೊಂಡರು. ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಸ್ನಾತಕೋತ್ತರ ಪದವಿಯನ್ನು ಪಡೆದರು. ಡಾ॥ ಎಂ. ಬಿ. ಕೊಟ್ರಶೆಟ್ಟಿ ಅವರ ಮಾರ್ಗದರ್ಶನದಲ್ಲಿ 'ಉತ್ತರ ಕರ್ನಾಟಕದ ಬಯಲಾಟಗಳು' ಎಂಬ ಸಂಶೋಧನ ಪ್ರಬಂಧ ಮಂಡಿಸಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದುಕೊಂಡರು. ೧೯೭೩ರಿಂದ ಹೊಸಪೇಟೆಯ ವಿಜಯನಗರ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾಗಿ, ಕನ್ನಡ ವಿಭಾಗದ ಮುಖ್ಯಸ್ಥರಾಗಿ, ಕೊನೆಗೆ ಪ್ರಾಚಾರ್ಯರಾಗಿ ಮೂರು ದಶಕಗಳ ಕಾಲ ನಿರಪೇಕ್ಷ ಮನೋಭಾವದಿಂದ ಸೇವೆ ಸಲ್ಲಿಸಿದರು.

ಅಧ್ಯಾಪನದ ಜೊತೆಗೆ ಸಂಶೋಧನೆ, ಜಾನಪದ ಸಾಹಿತ್ಯದ ಸಂಗ್ರಹ ಸಂಪಾದನೆ, ಶರಣ ಸಾಹಿತ್ಯದ ಅಧ್ಯಯನ ಮೊದಲಾದ ಪ್ರಕಾರಗಳಲ್ಲಿ ಅವರು ಮಾಡಿದ ಸಾಧನೆ ಅಪಾರವಾದುದು. ತಿರುಗಾಟ ಅವರ ಜೀವನದ ಮುಖ್ಯ ಅಂಗವಾಗಿತ್ತು. ಎಲ್ಲಿಯಾದರೂ ದೊಡ್ಡಾಟವಿದ್ದರೆ, ಪಾರಿಜಾತವಿದ್ದರೆ ಎಷ್ಟೇ ದೂರವಿರಲಿ, ಅಲ್ಲಿಗೆ ಹೋಗುವುದು ಅವರ ಹವ್ಯಾಸವಾಗಿತ್ತು. ಡಾ॥ ಬಸವರಾಜ ಮಲಶೆಟ್ಟಿಯವರಲ್ಲಿ ಪಾರಿಜಾತ-ದೊಡ್ಡಾಟ-ಸಣ್ಣಾಟಗಳ ಸಂಗೀತದ ಒಂದು ಸಮಗ್ರ ಕಲ್ಪನೆಯಿತ್ತು. ಉತ್ತರ ಕರ್ನಾಟಕದ ರಂಗಗೀತೆಗಳನ್ನು ದಾಖಲೀಕರಣ ಮಾಡಿದ ಶ್ರೇಯಸ್ಸು ಅವರಿಗೆ ಸಲ್ಲಬೇಕು. ಸಂಗೀತ ಅಕಾಡೆಮಿಯಿಂದ ಏಣಗಿ ಬಾಳಪ್ಪನವರನ್ನೂ ಮೊದಲುಗೊಂಡಂತೆ ಅನೇಕ ಕಲಾವಿದರನ್ನು ಬಳಸಿಕೊಂಡು ಒಂದು ಕ್ರಿಯಾಯೋಜನೆ ರೂಪಿಸಿ ರಂಗಸಂಗೀತದ ವಿಡಿಯೋ ದಾಖಲೀಕರಣ ಮಾಡಿದರು.

ಅವರಿಗೆ ಸಂಗೀತದ ಜ್ಞಾನ ಅಪಾರವಾಗಿತ್ತು. ಶ್ರೀಕೃಷ್ಣ ಪಾರಿಜಾತದ ಸಂಗೀತದ ಧಾಟಿ ವಿಶೇಷವಾಗಿದೆ. ಆದ್ದರಿಂದ ಇದೊಂದು ಹೊಸ ಪ್ರಕಾರವೆಂದು ಮೊದಲ ಬಾರಿಗೆ ಪ್ರತಿಪಾದಿಸಿದರು. ಸಣ್ಣಾಟದ ಸಂಗೀತ, ಮೂಡಲಪಾಯ ಸಂಗೀತ ಹೀಗೆ ಬೇರೆ ನಾಟಕ ಪ್ರಕಾರಗಳ ಸಂಗೀತದ ಧಾಟಿ-ಪ್ರಯೋಗಗಳ ಬಗ್ಗೆ ಹೊಸ ವಿಚಾರಗಳನ್ನು ಶೋಧಿಸಿದರು. ರಂಗಭೂಮಿಯ ಸಂಗೀತ ಕುರಿತ ಅವರ ವಿಚಾರಗಳು ಇಂದಿಗೂ ಆಕರಗಳಾಗಿವೆ. ಅವರ ವಿಚಾರಗಳಿಗಿಂತ



*ಜಾನಪದ ರಂಗಕಲೆ 'ಪಾರಿಜಾತ'*

ಭಿನ್ನವಾದ ವಿಚಾರಗಳನ್ನು ಇಂದಿಗೂ ಬೇರೆ ಯಾರೂ ಪ್ರತಿಪಾದಿಸಿಲ್ಲವೆಂಬುದೂ ಗಮನಾರ್ಹ. ಹಾಗೆಯೇ ಉತ್ತರ ಕರ್ನಾಟಕದ ಜಾನಪದ ವಾದ್ಯಗಳ ಕುರಿತಾಗಿ ಅವರು ವಿವರಣಾತ್ಮಕ ಸಾಹಿತ್ಯವನ್ನು ರಚಿಸಿದ್ದಾರೆ. ಡಾ॥ ಮಲಶೆಟ್ಟಿ ಅವರು ಎರಡು ಅವಧಿಗೆ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಸದಸ್ಯರಾಗಿದ್ದರು.

ಮಲ್ಲಾಡಿಹಳ್ಳಿಯ ಆನಂದಕಂದ ಗ್ರಂಥಮಾಲೆ ಮೂಲಕ 'ಶ್ರೀಕೃಷ್ಣ ಪಾರಿಜಾತ' ಕೃತಿಯನ್ನು ಡಾ॥ ಮಲಶೆಟ್ಟಿ ಅವರು ಪ್ರಕಟಿಸಿದ್ದಾರೆ. ಅಲ್ಲಿ ಹಾಡುಗಳಿಗಿಂತ ಸಂಭಾಷಣೆಗೆ ಒತ್ತು ಕೊಟ್ಟು ಕಾಲ ಕಾಲಕ್ಕೆ ಬದಲಾವಣೆಯಾಗುವ ಈ ನಾಟಕದ ಒಂದು ಪ್ರದೇಶದ ಭಾಷಿಕರೂಪವಾದರೂ ಉಳಿಯಲಿ ಎಂಬ ಉದ್ದೇಶದಿಂದ ಈ ಕೃತಿಯನ್ನು ಸಂಪಾದಿಸಿದ್ದಾರೆ. ಪರಿವರ್ತನೆ ಜಗದ ನಿಯಮ. ರಂಗಭೂಮಿ ನಾಟಕ ಬಯಲಾಟಗಳು ಈ ಪರಿವರ್ತನೆಯ ಪ್ರಭಾವಕ್ಕೆ ಒಳಗಾಗಿ ಬದಲಾವಣೆಯಾಗಬೇಕೆಂಬುದು ಅವರ ಆಶಯವಾಗಿತ್ತು. ಅಂತೆಯೇ ರಾತ್ರಿಯೆಲ್ಲ ಆಡುತ್ತಿದ್ದ ಗಿರಿಜಾ ಕಲ್ಯಾಣ ದೊಡ್ಡಾಟವನ್ನು ಕೇವಲ ೨ ಗಂಟೆಗೆ ಸೀಮಿತಗೊಳಿಸಿ ಕಥಾ ಚೌಕಟ್ಟನ್ನು ಮುರಿದು ಕಟ್ಟಿದ ಮಲಶೆಟ್ಟಿ ಅವರ ಪ್ರತಿಭೆ ಅನನ್ಯ. ಈ ದೊಡ್ಡಾಟ ಪ್ರಯೋಗ ಕನ್ನಡನಾಡನ್ನೂ ದಾಟಿ ದೇಶದ ರಾಜಧಾನಿ ದೆಹಲಿಯವರೆಗೂ ಮುಟ್ಟಿತು.

ಡಾ॥ ಬಸವರಾಜ ಮಲಶೆಟ್ಟಿ ಅವರು ವಿಜಯನಗರ ಕಾಲೇಜಿನ ಪ್ರಾಚಾರ್ಯ ಹುದ್ದೆಯನ್ನು ತಾವಾಗಿಯೇ ಬಿಟ್ಟುಕೊಟ್ಟರು. ಕಾರಣ ಆಡಳಿತಾತ್ಮಕ ಚಟುವಟಿಕೆಗಳ ಮಧ್ಯೆ ವಿದ್ಯಾರ್ಥಿಗಳ ಭವಿಷ್ಯ ಹಾಳಾಗಬಾರದೆಂಬ ಕಳಕಳಿ ಅವರಲ್ಲಿತ್ತು. ಇತ್ತೀಚಿನ ಅಧ್ಯಾಪಕರ ವಿಶ್ವವಿದ್ಯಾಲಯಗಳ ಕಾರ್ಯವೈಖರಿ ಬಗ್ಗೆ ಅವರಿಗೆ ತೀವ್ರ ಅಸಮಾಧಾನವಿತ್ತು.

ಡಾ॥ ಮಲಶೆಟ್ಟಿ ಅವರು ಜಾನಪದದಷ್ಟೇ ಪ್ರೀತಿಸುತ್ತಿದ್ದ ಮತ್ತೊಂದು ಕ್ಷೇತ್ರವೆಂದರೆ ಶರಣ ಸಾಹಿತ್ಯ. ಶರಣ ಸಾಹಿತ್ಯವನ್ನು ಕುರಿತು ಅವರು ಬರೆದ ಲೇಖನಗಳು ವಿದ್ವತ್‌ಲೋಕದಲ್ಲಿ ಚರ್ಚೆಗೆ ಗ್ರಾಸವಾಗಿವೆ. ಕೆಲವು ವಿದ್ವಾಂಸರು ಹೇಳುವಂತೆ ತತ್ವಪದ-ಭಜನಾ ಪದಗಳನ್ನೆಲ್ಲ ಸ್ವರವಚನ ಎಂಬ ನಿರ್ಧಾರಕ್ಕೆ ಬಂದುದು ತಪ್ಪು ಎಂಬ ವಿಚಾರವನ್ನು ಡಾ॥ ಮಲಶೆಟ್ಟಿ ಅವರು 'ಸ್ವರವಚನಗಳು : ಒಂದು ಮರುಚಿಂತನೆ' ಎಂಬ ಲೇಖನದಲ್ಲಿ ಸಾಧಾರಪೂರ್ವಕ ವಾಗಿ ಸಿದ್ಧಪಡಿಸಿದ್ದಾರೆ. ಅವರ ವಿಚಾರಗಳನ್ನು ಅಲ್ಲಗಳೆಯುವ ಒಂದೇ ಒಂದು ಲೇಖನ ಇಲ್ಲಿಯವರೆಗೆ ಪ್ರಕಟಗೊಂಡಿಲ್ಲವೆಂಬುದು ಗಮನಿಸಬೇಕಾದ ಸಂಗತಿ. ಸಂಗ್ಯಾ ಬಾಳ್ಯಾ ನಾಟಕ : ಕೆಲವು ಸತ್ಯಸಂಗತಿಗಳು, ಶಬ್ದಮಣಿ ದರ್ಪಣದಂತಹ ಹಳೆಗನ್ನಡ ಕೃತಿಗಳ ಅಧ್ಯಯನ ಬೇಕೆ ? ಕನ್ನಡ ಸಾಹಿತ್ಯ ಚರಿತ್ರೆಯ ಸ್ವರೂಪ ಹೇಗಿರಬೇಕು ? ಮೊದಲಾದ ವಿಷಯಗಳನ್ನು ಕುರಿತು ಅವರು ಎತ್ತಿದ ಪ್ರಶ್ನೆಗಳಿಗೆ ವಿದ್ವತ್‌ಲೋಕದಲ್ಲಿ ಇಂದಿಗೂ ಸಮರ್ಪಕ ಉತ್ತರಗಳು ಸಿಕ್ಕಿಲ್ಲ.

ಶರಣ ಕ್ಷೇತ್ರಗಳ ಸಮಗ್ರ ದಾಖಲೀಕರಣ ಡಾ॥ ಮಲಶೆಟ್ಟಿ ಅವರ ಕೊನೆಗಾಲದ ಒಂದು




ಮಹತ್ವದ ಕಾರ್ಯವೆಂದೇ ಹೇಳಬೇಕು. ತಾವೊಬ್ಬರೆ ಕರ್ನಾಟಕ, ಆಂಧ್ರಪ್ರದೇಶಗಳಲ್ಲಿ ಸುತ್ತಾಡಿ ಬಸವಾದಿ ಶಿವಶರಣರ ಕ್ಷೇತ್ರಗಳನ್ನು ಕುರಿತು ನಿಖರವಾದ ಮಾಹಿತಿ ನೀಡುವ ಬೃಹತ್ ಕೃತಿಯನ್ನು ರಚಿಸಿದ್ದಾರೆ. ಇದು ಅವರ ದೊಡ್ಡ ಸಾಧನೆಯೆಂದೇ ಹೇಳಬೇಕು. ಈ ಯೋಜನೆಯಲ್ಲಿ ನನ್ನ ಸೇವೆಯನ್ನು ಅವರು ಬಳಸಿಕೊಂಡಿದ್ದರು. ಅದೊಂದು ನನ್ನ ಸೌಭಾಗ್ಯವೆಂದು ನಾನು ಭಾವಿಸಿದ್ದೇನೆ.

ಡಾ॥ ಮಲಶೆಟ್ಟಿ ಅವರು ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಲೇ ಸರ್ವಜನಾದರಣೀಯ ವ್ಯಕ್ತಿಯಾಗಿದ್ದರು. ತಮ್ಮ ಮಾತು, ಹಾಡುಗಳಿಂದ ನೂರಾರು ಜನರನ್ನು ಆಕರ್ಷಿಸುವ ಕಲೆ ಅವರಿಗೆ ಸಿದ್ಧಿಸಿತ್ತು. ಕರ್ನಾಟಕ ಕಾಲೇಜಿನ ವಿದ್ಯಾರ್ಥಿ ನಾಯಕನಾಗಿ ಅವರು ಆಯ್ಕೆಯಾದುದು ಕೇವಲ ತಮ್ಮ ಮಾತು ಮತ್ತು ಸಂಗೀತದಿಂದ ಎಂದರೆ ಆಶ್ಚರ್ಯವಾಗದಿರದು. ಸಾವಿರಾರು ರೂ.ಗಳನ್ನು ಖರ್ಚು ಮಾಡಿ ಚುನಾವಣೆ ನಡೆಸುತ್ತಿದ್ದ ಕಾಲದಲ್ಲಿ ಒಂದು ಪೈಸೆಯನ್ನೂ ಖರ್ಚು ಮಾಡದೆ ಗೆದ್ದ ಕೀರ್ತಿ ಮಲಶೆಟ್ಟಿ ಅವರದು. ಅವರು ಕರ್ನಾಟಕ ಕಾಲೇಜಿನಲ್ಲಿ ವಿದ್ಯಾರ್ಥಿ ನಾಯಕನಾಗಿ ಮಾಡಿದ ಕಾರ್ಯ ಇಂದಿಗೂ ಸ್ಮರಣೀಯ. ಮಹಾತ್ಮಾ ಗಾಂಧೀಜಿಯವರ ಪುತ್ಥಳಿಯನ್ನು ಕಾಲೇಜಿನ ಆವರಣದಲ್ಲಿ ಸ್ಥಾಪಿಸಿದ ಹೆಗ್ಗಳಿಕೆ ಅವರದು.

ಡಾ॥ ಮಲಶೆಟ್ಟಿ ಅವರ ಪಿಎಚ್.ಡಿ. ಮಹಾಪ್ರಬಂಧ 'ಉತ್ತರ ಕರ್ನಾಟಕದ ಬಯಲಾಟಗಳು' ಇಂದಿಗೂ ಒಂದು ಆಕರಕೃತಿಯಾಗಿದೆ. ಆ ಕೃತಿ ಕೇವಲ ಶುಷ್ಕ ವಿಶ್ಲೇಷಣೆಯಾಗದೆ, ಗದ್ಯಗೀತೆಯಾಗಿ ಹರಿದಿದೆ. ಒಂದು ಜನಪ್ರಿಯ ಕಾದಂಬರಿಯು ಓದಿಸಿಕೊಂಡು ಹೋಗುವ ಅನುಭವ ನೀಡುತ್ತದೆ. ಲಲಿತ ಪ್ರಬಂಧದ ಮೋಹಕ ಶೈಲಿ ಅಲ್ಲಿ ಮೂಡಿಬಂದಿದೆ. ಅವರ ಗದ್ಯದಲ್ಲಿ ಒಂದು ರೀತಿ ವಿಶಿಷ್ಟವಾದ ಕಾವ್ಯಮಯತೆ ಇದೆ. ಅವರ ಶೈಲಿಯ ಪ್ರಸಾದ ಗುಣ ಅಸಾಧಾರಣವಾದುದು. ಅಂತೆಯೇ ಅವರ ಪಿಎಚ್.ಡಿ. ಮಹಾಪ್ರಬಂಧ ಇಂದಿಗೂ ತನ್ನ ಗುಣ ಸತ್ವದಿಂದ ಜನಪ್ರಿಯಗೊಂಡಿದೆ. ಉತ್ತರ ಕರ್ನಾಟಕದ ಬಯಲಾಟ ಸಾಹಿತ್ಯ ಕುರಿತು ಅವರ ಪ್ರಬಂಧವನ್ನು ಬಿಟ್ಟು ಮುಂದೆ ಹೋಗಲು ಸಾಧ್ಯವಿಲ್ಲ. ಅಷ್ಟರ ಮಟ್ಟಿಗೆ ಅವರ ಮಹಾಪ್ರಬಂಧ ಗಟ್ಟಿಯಾದ ಕೃತಿಯಾಗಿದೆ.

ಡಾ॥ ಬಸವರಾಜ ಮಲಶೆಟ್ಟಿ ನಮ್ಮ ನಾಡಿನ ಜಾನಪದ ವಿದ್ವಾಂಸರಲ್ಲಿ ಅತ್ಯಂತ ಪ್ರಮುಖರು. ಸಾಹಿತ್ಯ - ಸಮಾಜ - ಸಂಸ್ಕೃತಿ ಮೊದಲಾದ ಕ್ಷೇತ್ರಗಳಿಗೆ ಜಾನಪದವೇ ಮೂಲ ಎಂಬುದು ಅವರ ಖಚಿತ ನಿಲುವಾಗಿತ್ತು. ಹೀಗಾಗಿ ಯಾವುದೇ ಸಂದರ್ಭದಲ್ಲಾದರೂ ಅವರು ಜಾನಪದವನ್ನೇ ಹುಡುಕುತ್ತಿದ್ದರು. ಇತ್ತೀಚೆಗೆ ಜಮಖಂಡಿ ಸಂಸ್ಥಾನದ ಇತಿಹಾಸವನ್ನು ತಿಳಿಸುವ ಕೃತಿಯೊಂದು ಪ್ರಕಟವಾದ ವಿಷಯ ತಿಳಿಯಿತು. ಆ ಕೃತಿಯನ್ನು ನೋಡ ಬೇಕಾಗಿದೆ ಎಂದು ಹಂಬಲಿಸಿದರು. "ಅದನ್ನೇಕೆ ಓದುವಿರಿ ?" ಎಂದು ಕೇಳಿದಾಗ, "ಅದರಲ್ಲಿ ಆ ಕಾಲದ ಪಾರಿಜಾತ ನಾಟಕದ ಬಗ್ಗೆ ಏನಾದರೂ ಮಾಹಿತಿ ಸಿಗುತ್ತದೆಯೋ ಎಂದು ನೋಡಬೇಕಾಗಿದೆ" ಎಂದು ಹೇಳಿದರು. ಹೀಗೆ ಪ್ರತಿಯೊಂದರಲ್ಲಿಯೂ ಪಾರಿಜಾತ, ಸಣ್ಣಾಟ, ಜಾನಪದವನ್ನೇ ಹುಡುಕುತ್ತಿದ್ದ ಅವರು ನಮ್ಮ ಕಲೆಗಳ ಪರಿಚಯ ಹೊರಗಿನವರಿಗೂ ಆಗಬೇಕೆಂದು ಡೆಕ್ಕನ್ ಹೆರಾಲ್ಡ್ ಪತ್ರಿಕೆಗೆ ಸುಮಾರು ೧೫೦ಕ್ಕೂ ಮಿಕ್ಕಿ ಲೇಖನಗಳನ್ನು ಇಂಗ್ಲಿಷಿನಲ್ಲಿ ಬರೆದು ಪ್ರಕಟಿಸಿದ್ದಾರೆ. ಇತ್ತೀಚಿಗೆ ಜಾನಪದ ವಿಶ್ವವಿದ್ಯಾಲಯ ಅಸ್ತಿತ್ವಕ್ಕೆ ಬಂದಿದೆ. ಅದರ ಬೆಳವಣಿಗೆಯಲ್ಲಿಯೂ ಡಾ॥ ಮಲಶೆಟ್ಟಿ ಅವರ ಕೊಡುಗೆ ಇದೆ.

೨೮ ಜೂನ್, ೨೦೧೪ರಂದು ಡಾ॥ ಬಸವರಾಜ ಮಲಶೆಟ್ಟಿ ಅವರು ಮರಣಹೊಂದಿದರು. ೧-೭-೨೦೧೪ರಂದು ಅವರ ಜನ್ಮಸ್ಥಳ ತಿಗಡೊಳ್ಳಿ ಗ್ರಾಮದ ಅವರ ಹೊಲದಲ್ಲಿ ಅಂತ್ಯಕ್ರಿಯೆ ನೆರವೇರಿಸಲಾಯಿತು. ಈ ಸಂದರ್ಭದಲ್ಲಿ ಅಲ್ಲಿ ನೆರೆದ ಜನಸ್ತೋಮ ಡಾ॥ ಮಲಶೆಟ್ಟಿ ಅವರು ಕರ್ನಾಟಕದ ತುಂಬ ಗಳಿಸಿದ ಜನಪ್ರಿಯತೆಗೆ ಸಾಕ್ಷಿಯಂತಿತ್ತು.

ಡಾ॥ ಮಲಶೆಟ್ಟಿ ಅವರು ಅಪಾರ ಜನಪ್ರಿಯ ಒಡನಾಡಿಗಳನ್ನು ಅಗಲಿ ಹೋದ ಸಂದರ್ಭದಲ್ಲಿ ಅವರೇ ರೂಪಿಸಿದ ಅನೇಕ ಯೋಜನೆಗಳು ಅರ್ಧಕ್ಕೆ ನಿಂತಿವೆ. ಅವರ ತಲೆಯಲ್ಲಿ ನೂರಾರು ಹೊಸ ಹೊಸ ಯೋಜನೆಗಳಿದ್ದವು. ಅವುಗಳನ್ನು ಯಶಸ್ವಿಗೊಳಿಸಲು ಅವರ ಹೆಸರಿನಲ್ಲಿ ಪ್ರತಿಷ್ಠಾನವೊಂದನ್ನು ಅಸ್ತಿತ್ವಕ್ಕೆ ತರುವ ಕುರಿತು ಅವರ ಅಭಿಮಾನಿಗಳು, ನಾಡಿನ ಹಿರಿಯರು ಮತ್ತು ಅವರ ಕುಟುಂಬ ವರ್ಗದವರು ಚಿಂತನೆ ನಡೆಸಿದ್ದಾರೆ. ಡಾ॥ ಮಲಶೆಟ್ಟಿ ಅವರು ಕಂಡ ಕನಸುಗಳು ಸಂಕಲ್ಪಗಳು ಸಾಕಾರಗೊಳ್ಳಲಿ ಎಂದು ಆಶಿಸುತ್ತ ಅವರಿಗೆ ಭಾವಪೂರ್ಣ ನಮನಗಳನ್ನು ಅರ್ಪಿಸುವೆ.

**ಪ್ರಕಾಶ ಗಿರಿಮಲ್ಲನವರ**
ವಚನ ಅಧ್ಯಯನ ಕೇಂದ್ರ, ಶಿವಬಸವನಗರ, ಬೆಳಗಾವಿ.

ಬಹುಶಃ ೧೯೬೦ರವರೆಗೆ ಬಂದ ಚಿತ್ರಗಳಿಗೆ ಭದ್ರವಾದ ಬುನಾದಿಯೇ ಒಂದು ಒಳ್ಳೆಯ ಕಥೆ. ಅದರಲ್ಲಿಯೂ ಸಮಾಜಕ್ಕೆ ಒಂದು ಸಂದೇಶ ನೀಡುವಂತಹ ಕತೆಗಳೇ ಚಿತ್ರದ ಯಶಸ್ಸಿಗೆ ಮೂಲ ಕಾರಣ. ಈ ಭದ್ರ ಬುನಾದಿಯನ್ನು ಈ ಎರಡೂ ಚಿತ್ರಗಳಲ್ಲಿ ನಾನು ಗುರ್ತಿಸಿದ್ದೇನೆ, ಚಿತ್ರಗಳನ್ನು ನೋಡಿದ ಎಲ್ಲ ಸಹೃದಯಿಗಳು ಇದನ್ನೇ ಗುರ್ತಿಸುತ್ತಾರೆ. ಸಂದೇಹವಿಲ್ಲ.



# ಅಛೂತ್ ಕನ್ಯಾ ಮತ್ತು ಸುಜಾತಾ

## ಅಸ್ಪೃಶ್ಯತೆಯ ಭಿನ್ನ ನೋಟಗಳು

ಹಿಂದೂ ಸಮಾಜಕ್ಕೆ ಅಸ್ಪೃಶ್ಯತೆ ಎಂಬುದೊಂದು ಕಳಂಕ. ಮನುಧರ್ಮಶಾಸ್ತ್ರ ಆಚರಣೆಯಲ್ಲಿ ಬಂದಾಗಿನಿಂದಲೂ ಇಂದಿನವರೆಗೂ ಅಸ್ತಿತ್ವದಲ್ಲಿರುವ ಮಾನವ ನಿರ್ಮಿತ ಸಮಸ್ಯೆಯನ್ನು ಎಲ್ಲಾ ವಿಚಾರವಾದಿಗಳೂ ಖಂಡಿಸುತ್ತಾ ಬಂದಿದ್ದಾರೆ. ಭಾರತೀಯ ಚಿತ್ರರಂಗ, ಅದರಲ್ಲಿಯೂ ವಿಶೇಷವಾಗಿ ಹಿಂದಿ ಸಿನಿಮಾ ಈ ಸಮಸ್ಯೆಯನ್ನು ಎರಡು ಚಿತ್ರಗಳಲ್ಲಿ ಚಿತ್ರಿಸಿದೆ : ಒಂದು; "ಅಛೂತ್ ಕನ್ಯಾ" (ಅಸ್ಪೃಶ್ಯ ಕನ್ಯೆ, ೧೯೩೬), ಇನ್ನೊಂದು "ಸುಜಾತಾ" (೧೯೬೦). ಸಮಸ್ಯೆ ಒಂದೇ ಆದರೂ ಸಮಸ್ಯೆಯನ್ನು ನೋಡುವ ದೃಷ್ಟಿಯಲ್ಲಿ ಕೊಂಚ ಭಿನ್ನತೆ ಇದೆ. ಹಾಗೂ ಸಾಮಾಜಿಕ ಸ್ಥಿತಿಯ ಚಿತ್ರಣವೂ ಕೊಂಚ ಭಿನ್ನವಾಗಿದೆ. ಇದಕ್ಕೆ ಕಾರಣ ಎರಡು ಚಿತ್ರಗಳ ನಡುವಿನ ಮೂರು ದಶಕಗಳ ಕಾಲದ ಅಂತರ ಹಾಗೂ ನಿರ್ದೇಶಕರೂ ಭಿನ್ನ ದೇಶದವರಾಗಿದ್ದಾರೆ.

**ಅಛೂತ್ ಕನ್ಯಾ**

'ಅಛೂತ್ ಕನ್ಯಾ' ಚಲನಚಿತ್ರವನ್ನು ಹಿಂದಿ ಚಿತ್ರರಂಗದ ಆರಂಭದ ದಿನಗಳಲ್ಲಿ, ಬಾವೇರಿಯನ್ (ಫ್ರಾನ್ಸ್ ದೇಶದ ಭಾಗ) ಪ್ರಜೆ ಫ್ರಾಂಜ್ ಓಸ್ಟನ್ (Franz Osten) ನಿರ್ದೇಶಿಸಿದ್ದರು. ಹಿಮಾಂಶು ರಾಯ್ ನಿರ್ಮಾಪಕರು. ಅಂದಿನ ದಿನಗಳಲ್ಲಿ ಸಂಗೀತ ನಿರ್ದೇಶಕಿಯಾಗಿ ಸರಸ್ವತಿ ದೇವಿಯವರು ಅತ್ಯಂತ ಮಧುರ ಸಂಗೀತವನ್ನು ನೀಡಿದ್ದಾರೆ. ಈ ಚಿತ್ರವನ್ನು ಬಾಂಬೆ ಟಾಕೀಸಿನ ಬ್ಯಾನರ್ ಅಡಿ ಬಿಡುಗಡೆಗೊಳಿಸಲಾಯಿತು.

ಈ ಚಿತ್ರ; ಒಬ್ಬ ಅಸ್ಪೃಶ್ಯ ಕನ್ಯೆ ಕಸ್ತೂರಿ (ದೇವಿಕಾ ರಾಣಿ) ಮತ್ತು ಬ್ರಾಹ್ಮಣ ತರುಣ್ ಪ್ರತಾಪ್ (ಅಶೋಕ ಕುಮಾರ್) ಬಾಲ್ಯ ಪ್ರೇಮಿಗಳ ನಿಷ್ಕಲ್ಮಷ ಪ್ರೇಮವನ್ನು ಸರಳರೀತಿಯಲ್ಲಿ ಚಿತ್ರಿಸುತ್ತದೆ. ಇಡೀ ಚಿತ್ರ ಫ್ಲ್ಯಾಶ್‌ಬ್ಯಾಕ್ ತಂತ್ರಗಾರಿಕೆಯಲ್ಲಿ ರೂಪಿತ ಗೊಂಡಿದೆ. ಒಬ್ಬ ಗೃಹಸ್ಥನು ತನ್ನ ಹೆಂಡತಿಯ ಕೊಲೆ ಮಾಡಲೆಂದು ಕಾರಿನಲ್ಲಿ ಹೊರಟಾಗ ರೇಲ್ವೆ ಗೇಟ್ ಕ್ರಾಸ್ ಬಳಿ ಕಾರನ್ನು ನಿಲ್ಲಿಸಿದಾಗ, ಅಲ್ಲಿ ಒಂದು ಸ್ಮಾರಕ ಶಿಲೆಯನ್ನು ಕಂಡು, ಅದರ ಕತೆಯನ್ನು ಕ್ರಾಸಿಂಗ್ ವಾಚ್‌ಮನ್ ಬಾಯಿಂದ ಕೇಳುತ್ತಾನೆ.

**ಅಛೂತ್ ಕನ್ಯಾ ಕಥಾಂತರಂಗ :** ಈ ಕಥಾನಾಯಕಿಯೂ ಅಲ್ಲಿಯೇ ಹಿಂದೆ ಇದ್ದ ವಾಚ್‌ಮನ್ ದುಖಿಯಾ ಎಂಬ ಅಸ್ಪೃಶ್ಯನ ಮಗಳೇ ಆಗಿದ್ದಳು. ಅದೇ ಊರಿನ ವ್ಯಾಪಾರೀ ಬ್ರಾಹ್ಮಣ ಮೋಹನ್‌ಲಾಲ್ ಹಾಗೂ ದುಖಿಯಾ ಇಬ್ಬರೂ ಪರಮ ಸ್ನೇಹಿತರು. ಮೋಹನಲಾಲ್‌ನ ಮಗನೇ ಪ್ರತಾಪ್. ಕಸ್ತೂರಿ ಮತ್ತು ಪ್ರತಾಪ್ ಒಟ್ಟಿಗೆ ಬೆಳೆದವರು. ಎರಡೂ ಕುಟುಂಬದವರು ಇವರ ಒಡನಾಟಕ್ಕೆ ಆಕ್ಷೇಪಿಸುವದಿಲ್ಲ. ಒಂದು ಸಲ ಪ್ರತಾಪನ ಮದುವೆ ಪ್ರಸ್ತಾಪ ಬಂದಾಗ ಪ್ರತಾಪನ ತಾಯಿ, "ಕಸ್ತೂರಿ ನಮ್ಮ ಜಾತಿಯಲ್ಲಿ ಹುಟ್ಟಿದ್ದರೆ ಅವಳನ್ನು ನನ್ನ ಸೊಸೆಯಾಗಿ ಮಾಡಿಕೊಳ್ಳುತ್ತಿದ್ದೆ" ಎಂದು ಹೇಳುತ್ತಾರೆ. ಆ ಗ್ರಾಮದ ಇತರ ಬ್ರಾಹ್ಮಣರು ಈ ಎರಡು ಕುಟುಂಬಗಳ ಮಧುರ ಬಾಂಧವ್ಯಕ್ಕೆ ಹುಳಿ ಹಿಂಡಲು ಪ್ರಯತ್ನಿಸುತ್ತಾರೆ. ಗ್ರಾಮದ ನಾಟಿ ವೈದ್ಯ ಬಾಬುಲಾಲನಿಗೆ ಮೋಹನಲಾಲ್‌ನ ಮೇಲೆ ವೈಯಕ್ತಿಕ ದ್ವೇಷ. ಯಾಕೆಂದರೆ ಆಗ, ಮಾರಿಯಂತಿದ್ದ ಮಲೇರಿಯಾ ರೋಗ ನಿದಾನಕ್ಕೆ ಮೋಹನಲಾಲ್ ಸರ್ಕಾರ ಕೊಟ್ಟಿದ್ದ ಕ್ವಿನ್ಯೈನ್ (Quinine) ಗುಳಿಗೆಗಳನ್ನು ಗ್ರಾಮಸ್ಥರಿಗೆ ಉಚಿತವಾಗಿ ಹಂಚುತ್ತಿದ್ದ. ಇದರಿಂದಾಗಿ ಬಾಬುಲಾಲನಿಗೆ ಗಿರಾಕಿಗಳ ಖೋತಾ. ಈ ಕಾರಣಕ್ಕಾಗಿ ಯಾವುದೋ ನೆಪ ಒಡ್ಡಿ ಗ್ರಾಮಸ್ಥರಲ್ಲಿ ಜಾತಿ ದ್ವೇಷವನ್ನು ಹೆಚ್ಚಿಸಿ ಮೋಹನಲಾಲನ ಮನೆಗೆ ಬೆಂಕಿ ಹಚ್ಚುತ್ತಾನೆ. ತಮ್ಮ ತಪ್ಪಿನ ಅರಿವಾಗಿ ಜನರು, ಪುನಃ ಮೋಹನಲಾಲನ ಗುಡಿಸಲನ್ನು ಪುನಃ ಕಟ್ಟಿಕೊಡುತ್ತಾರೆ. ಈ ಕಾರ್ಯದಲ್ಲಿ ಕಸ್ತೂರಿಯು ಪ್ರತಾಪನೊಡನೆ ಕೈಗೂಡಿಸುತ್ತಾಳೆ.

ಪ್ರತಾಪನಿಗೆ ಮದುವೆಯಾಗುತ್ತದೆ. ಮೀರಾ ಅವಳ ಹೆಸರು. ಅವಳೂ ಚೆಲುವೆಯೇ. ಆದರೆ

**ಡಾ|| ಎಚ್. ಚಂದ್ರಶೇಖರ**

ಪ್ರತಾಪನ ಮನಸ್ಸಿನಲ್ಲಿ ಇನ್ನೂ ಕಸ್ತೂರಿಯೇ ಇದ್ದಾಳೆ. ಮದುವೆ ದಿಬ್ಬಣ ಬಂದಾಗ ರೇಲ್ವೆ ಕ್ರಾಸಿಂಗ್ ಬಳಿ, ದಿಬ್ಬಣವನ್ನು ನಿಲ್ಲಿಸಿ ಮದುಮಗಳ ಮುಸುಕನ್ನು ಸ್ವತಃ ತನ್ನ ಕೈಯಿಂದಲೇ ತೆಗೆದು ನೋಡಿ ಮೀರಾಳನ್ನು ಮೆಚ್ಚುತ್ತಾಳೆ ಕಸ್ತೂರಿ. ಇದನ್ನು ನೋಡಿದಾಗ ಮನಸ್ಸೂ ಮೆಚ್ಚುತ್ತದೆ; ಆದರೆ ಇದು ಅವಾಸ್ತವ. ಇಂದಿಗೂ ಇಂಥದ್ದು ಹಳ್ಳಿಗಳಲ್ಲಿ ನಡೆಯಲಾರದು. ಪರದೇಶಿ ನಿರ್ದೇಶಕನಿಗೆ ಇಂಥ ಹಲವಾರು ಸೂಕ್ಷ್ಮಗಳು ಅರ್ಥವಾಗಿಲ್ಲ ಎಂಬುದು ಇಲ್ಲಿಯ ಕೆಲವು ಘಟನೆಗಳು ತೋರಿಸುತ್ತವೆ.

ಒಂದು ಕ್ಷುಲ್ಲಕ ಕಾರಣಕ್ಕಾಗಿ ರೇಲ್ವೆ ಇಲಾಖೆಯು ದುಖಿಯಾನನ್ನು ಕೆಲಸದಿಂದ ವಜಾಗೊಳಿಸಿ, ಅವನ ಜಾಗದಲ್ಲಿ ಮನ್ನು ಎಂಬ ಇನ್ನೊಬ್ಬ ಅಸ್ಪೃಶ್ಯ ಯುವಕನನ್ನು ನೇಮಿಸುತ್ತದೆ. ಆಗ ವಾಸಿಸಲು ಮನೆಯಿಲ್ಲದ ದುಖಿಯಾ ಮತ್ತು ಕಸ್ತೂರಿ ಇಬ್ಬರಿಗೂ ಅವನ ಸರ್ಕಾರಿ ಮನೆಯಲ್ಲಿರಲು ಹೇಳುತ್ತಾನೆ. ಸಮಯ ಜಾರುತ್ತದೆ. ಮೋಹನಲಾಲ್‌ನ ವ್ಯಾಪಾರ ಕೊಂಚ ಕುಂದಿದಾಗ ಹತ್ತಿರದ ಇನ್ನೊಂದು ಹಳ್ಳಿಯಲ್ಲಿ ನೆರೆದಿರುವ ಜಾತ್ರೆಯಲ್ಲಿ ತನ್ನ ಅಂಗಡಿಯ ಗುಡಾರವನ್ನು ಹಾಕಲು ಮುಂದಾಗುತ್ತಾನೆ ಪ್ರತಾಪ್. ಜಾತ್ರೆಯಲ್ಲಿ ವ್ಯಾಪಾರ ಚೆನ್ನಾಗಿ ಕುದುರುತ್ತದೆ. ಈ ಜಾತ್ರೆಯ ನೆಪ ಮಾಡಿಕೊಂಡು ಪ್ರತಾಪನ ಹೆಂಡತಿಯು ಕಸ್ತೂರಿಯನ್ನು ಹಾಗೂ ಹೊಸ ವಾಚ್‌ಮನ್‌ನ ಹೆಂಡತಿ ಕಜೂರಿಯನ್ನು ಕರೆದುಕೊಂಡು ಹೋಗುತ್ತಾಳೆ – ಒಂದೇ ಬಂಡಿಯಲ್ಲಿ. ಈ ಘಟನೆಯೂ ಅಸಹಜ, ಅವಾಸ್ತವ. ಆ ಕಾಲದಲ್ಲಿ ಒಬ್ಬ ಬ್ರಾಹ್ಮಣ ಹುಡುಗಿ ಇಬ್ಬರು ಅಸ್ಪೃಶ್ಯ ಹುಡುಗಿಯರ ಜೊತೆ ಒಂದೇ ಬಂಡಿಯಲ್ಲಿ ಕೈಕೈ ಜೋಡಿಸಿಕೊಂಡು ಪ್ರಯಾಣಿಸುವುದು ತೀರ ಅವಾಸ್ತವ. ಆದರೆ ಮೂವರು ಚೆಲುವೆಯರನ್ನು ನೋಡುವದು ಕಣ್ಣಿಗೆ ಆನಂದವೇ, ಸರಿ ! ಕಜೂರಿ ಮತ್ತು ಮೀರಾ ಇಬ್ಬರಿಗೂ ಕಸ್ತೂರಿ ಮತ್ತು ಪ್ರತಾಪರ ಮೇಲೆ ಇನ್ನೂ ಗುಮಾನಿಯೇ. ಆದ್ದರಿಂದ ಸಂಚುಮಾಡಿ ತಾವಿಬ್ಬರೇ ಹಳ್ಳಿಗೆ ಮರಳಿ ಇಬ್ಬರು ಪ್ರಣಯಿಗಳು ಪರಾರಿಯಾದರೆಂಬ ವದಂತಿಯನ್ನು ಹಬ್ಬಿಸುತ್ತಾರೆ. ಈ ವದಂತಿ ಊರಿನಲ್ಲಿ ಬೆಂಕಿಯಂತೆ ಹಬ್ಬುತ್ತದೆ. ಇತ್ತ ಪ್ರತಾಪ್ ಮತ್ತು ಕಸ್ತೂರಿ ಜಾತ್ರೆ ಮುಗಿಸಿಕೊಂಡು ಕೇವಲ ಸ್ನೇಹಿತರಂತೆ ಬಂಡಿಯಲ್ಲಿ ಹಿಂತಿರುಗುತ್ತಾ, ಪರಸ್ಪರ ತಮ್ಮ ಹಿಂದಿನ ಬಾಲ್ಯದ ಪ್ರೇಮವನ್ನು ಮರೆಯಲು ಒಪ್ಪುತ್ತಾರೆ. ಪ್ರತಾಪನು, ಕಸ್ತೂರಿಯನ್ನು ಹೊಸ ವಾಚ್‌ಮನ್ ಮನ್ನುವನ್ನು ಮದುವೆಯಾಗಲು ಒಪ್ಪಿಸುತ್ತಾನೆ. ಇನ್ನೇನು ಕಥೆ ಸುಖಾಂತ್ಯವಾಗುತ್ತದೆ ಎಂದುಕೊಳ್ಳುವಾಗಲೇ ದುರಂತ ಸಂಭವಿಸುತ್ತದೆ.

**ಕಸ್ತೂರಿಯ ದುರ್ಮರಣ :** ಊರಿನ ಜನರು ಪ್ರತಾಪ್ ಮತ್ತು ಕಸ್ತೂರಿಯನ್ನು ರೇಲ್ವೆ ಗೇಟ್ ಬಳಿಯೇ ತಡೆಗಟ್ಟಿ ವಿಚಾರಣೆಯ ಗುಲ್ಲೆಬ್ಬಿಸುತ್ತಾರೆ. ಈ ಗದ್ದಲದಲ್ಲಿ ದೂರದಲ್ಲಿ ರೈಲು ಬರುವುದನ್ನು ಯಾರೂ ಗಮನಿಸುವದಿಲ್ಲ. ಆಗ ಕಸ್ತೂರಿಯು



ಅಪಘಾತವನ್ನು ತಡೆಗಟ್ಟಲು ಹೋಗಿ ತಾನೇ ರೇಲಿನ ಹಳಿಗೆ ಆಹುತಿ ಆಗುತ್ತಾಳೆ. ನೂರಾರು ಜನರ ಜೀವ ಉಳಿಯುತ್ತದೆ; ಆದರೆ ಒಬ್ಬ ಮುಗ್ಧ ಚೆಲುವೆ ಬಲಿಯಾಗುತ್ತಾಳೆ !!

ಈ ಕಥೆಯನ್ನು ಕೇಳಿದ ಗೃಹಸ್ಥನ ಮನಸ್ಸು ಪರಿವರ್ತನೆಗೊಂಡು, ತನ್ನ ಪಿಸ್ತೂಲನ್ನು ತನ್ನ ಕೋಟಿನೊಳಗೆ ಮುಚ್ಚಿಟ್ಟುಕೊಂಡು ಹೆಂಡತಿಯೊಂದಿಗೆ ಹಿಂತಿರುಗುತ್ತಾನೆ.

**ಈ ಚಿತ್ರದ ಜೀವಾಳ :** ಈ ಚಿತ್ರದ ಜೀವಾಳವೆಂದರೆ ದೇವಿಕಾರಾಣಿ ಮತ್ತು ಅಶೋಕ್ ಕುಮಾರ್‌ರ ಸಹಜ ಅಭಿನಯ. ನಿಜ, ಜೀವನದಲ್ಲಿಯೂ ಅವರು ಆಗ ಇನ್ನೂ ತರುಣ ತರುಣಿಯರು. ತರುಣ ತರುಣಿಯರ ಪ್ರಣಯ ಗೀತೆಗಳು ಕಣ್ಣಿಗೂ ಕಿವಿಗೂ ಆನಂದವನ್ನು ಕೊಡುತ್ತವೆ. ತುಂಬಾ ಖುಷಿ ಕೊಡುವ ಹಲವಾರು ದೃಶ್ಯಗಳಿವೆ. ಇವುಗಳನ್ನು ಚಿತ್ರೀಕರಿಸುವಲ್ಲಿ ದಿಗ್ದರ್ಶಕ ಯಶಸ್ವಿಯಾಗಿದ್ದಾರೆ. ಸಂಗೀತ ನಿರ್ದೇಶಕಿಯೂ ತುಂಬ ಇಂಪಾದ ಸಂಗೀತವನ್ನು ನೀಡಿದ್ದಾಳೆ. ಕೇಳಿ ಕೇಳಿ ಆನಂದಿಸುವಂಥವು.

**ಪ್ರಮುಖ ಚಿತ್ರ :** ನಿರ್ದೇಶನದ ಕೆಲವು ಲೋಪಗಳನ್ನು ಆಗಲೇ ನಾನು ಹೇಳಿದ್ದರೂ, ಇತಿಹಾಸದ ದೃಷ್ಟಿಯಿಂದ ಇದೊಂದು ಉತ್ತಮ ದಾಖಲೆಯನ್ನು ನೀಡುತ್ತದೆ. ಆ ಕಾಲದಲ್ಲಿ ಹಬ್ಬಿದ್ದ ಮಲೇರಿಯಾ ನಿಯಂತ್ರಣಕ್ಕೆ ಬ್ರಿಟಿಷ್ ಸರ್ಕಾರ ಹಾಗೂ ಪ್ರಜ್ಞಾವಂತ ನಾಗರಿಕರು ಪ್ರಯತ್ನಿಸುತ್ತಿದ್ದರೆ, ಬಾಬುಲಾಲ್ ಎಂಬ ವೈದ್ಯನಂಥ ಸ್ವಾರ್ಥಿಗಳು ಈ ಪ್ರಯತ್ನದ ವಿರುದ್ಧ ಪ್ರಚಾರ ಮಾಡುತ್ತಲಿದ್ದರು. ಬ್ರಾಹ್ಮಣ ಮತ್ತು ಅಸ್ಪೃಶ್ಯರ ವಿವಾಹ ಸಂಬಂಧ ಇರದಿದ್ದರೂ, ಪ್ರೀತಿ ವಿಶ್ವಾಸಗಳಿಗೆ ಕೊರತೆ ಇರಲಿಲ್ಲ. ಜಾತಿ–ದ್ವೇಷ ಇರಲಿಲ್ಲ. ಛಾಯಾಗ್ರಹಣ ತುಂಬ ಪರಿಣಾಮಕಾರಿಯಾಗಿದೆ. ಇಂದಿಗೂ ನೋಡಿ ಆನಂದಪಡುವಂಥ ಚಿತ್ರ ಬಂದದ್ದು, ಭಾರತದಲ್ಲಿ ವಾಕ್ಚಿತ್ರವು ಆರಂಭವಾದ ಕೇವಲ ಎರಡು ವರ್ಷಗಳ ನಂತರ ಎಂಬುದನ್ನು ಗಮನಿಸಿದರೆ, ಈ ಚಿತ್ರದ ಶ್ರೇಷ್ಠತೆಯ ಅರಿವಾಗುತ್ತದೆ.

**ಸುಜಾತಾ**

೧೯೬೦ರ ಹೊತ್ತಿಗೆ ಭಾರತೀಯ ಸಮಾಜ ಹಲವು ಸ್ಥಿತ್ಯಂತರಗಳನ್ನು ಕಂಡಿತು. ಅಸ್ಪೃಶ್ಯತೆಯನ್ನು ಸಂವಿಧಾನಾತ್ಮಕವಾಗಿ ನಿಷೇಧಿಸಿದ್ದರೂ ಸಮಾಜದಲ್ಲಿ ತೆರೆಮರೆಯಲ್ಲಿ ಜೀವಂತವಾಗಿತ್ತು – ಹಳ್ಳಿಗಳಲ್ಲಿ ಇಂದಿಗೂ ಜೀವಂತವಾಗಿದೆ. ಈ ಅಸ್ಪೃಶ್ಯತೆಯ ಸಮಸ್ಯೆಯನ್ನು "ಸುಜಾತಾ" (೧೯೫೯–೧೯೬೦) ಚಲನಚಿತ್ರದಲ್ಲಿ ಭಾರತದ ಶ್ರೇಷ್ಠ ನಿರ್ದೇಶಕರಲ್ಲಿ ಒಬ್ಬರಾದ ದಿ॥ ಬಿಮಲ್ ರಾಯ್ ನಿರ್ಮಿಸಿ ತಾವೇ ದಿಗ್ದರ್ಶಿಸಿದ್ದಾರೆ. ಇದೂ ಕಪ್ಪು–ಬಿಳುಪು ಚಿತ್ರ. ಅತ್ಯಂತ ಪರಿಣಾಮಕಾರಿಯಾದ ಈ ಚಿತ್ರ ಹಲವಾರು ಪ್ರಶಸ್ತಿಗಳಿಗೆ ಭಾಜನವಾಗಿದೆ. ಕ್ಯಾನೆ ಚಿತ್ರೋತ್ಸವ ಸಂದರ್ಭದಲ್ಲಿ ಸುವರ್ಣ ಪತ್ರಕ್ಕೆ (Golden Palm) ಆಯ್ಕೆ ಆಗಿತ್ತು. ೧೯೫೯ರ ರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಶ್ರೇಷ್ಠ ಕಥಾಚಿತ್ರ ಎಂಬ ಪ್ರಶಸ್ತಿ ಗಳಿಸಿತು. ಫಿಲ್ಮ್‌ಫೇರ್ ಪ್ರಶಸ್ತಿ ಪ್ರದಾನದಲ್ಲಿ ಬಿಮಲ್‌ರಾಯ್‌ರಿಗೆ ಶ್ರೇಷ್ಠ ಚಿತ್ರವೆಂಬ ಪ್ರಶಸ್ತಿ ಬಂದರೆ, ಈ ಚಿತ್ರದ ನಾಯಕಿ ನೂತನ್‌ಗೆ ಶ್ರೇಷ್ಠ ನಟಿ ಎಂಬ ಪ್ರಶಸ್ತಿ ಸಂದಿದ್ದರೆ, ಸುಬೋಧ ಘೋಷ್ ಅವರಿಗೆ ಶ್ರೇಷ್ಠ ಕಥೆಗಾರ ಪ್ರಶಸ್ತಿ ಸಂದಿತ್ತು. ಈ ಪ್ರಶಸ್ತಿಗಳ ಸರಮಾಲೆಯೇ ಈ ಚಿತ್ರದ ವೈಶಿಷ್ಟ್ಯದ ಬಗ್ಗೆ ಹೇಳುತ್ತದೆ.

**ಕಥಾಹಂದರ :** ಈ ಚಿತ್ರದ ನಾಯಕಿ ನೂತನ್ ಒಬ್ಬ ಅನಾಥ ಅಸ್ಪೃಶ್ಯ ಶಿಶುವಾಗಿ, ಬ್ರಾಹ್ಮಣ ಎಂಜಿನಿಯರ್ ಉಪೇಂದ್ರನಾಥ ಚೌಧರಿಯ ಕುಟುಂಬವನ್ನು ಸೇರುತ್ತಾಳೆ. ಅನಿವಾರ್ಯವಾಗಿ ಉಪೇಂದ್ರನಾಥ ಮತ್ತು ಅವನ ಹೆಂಡತಿ ಚಾರು ಚೌಧುರಿ ಈ ಶಿಶುವನ್ನು ಒಪ್ಪಿಕೊಂಡು ಬೆಳೆಸುತ್ತಾರೆ. ಅನಾಥ ಮಗುವಿಗೆ ಉಪೇಂದ್ರನಾಥ (ಉಪೇನ್) 'ಸುಜಾತಾ' ಎಂಬ ಹೆಸರನ್ನಿಡುತ್ತಾನೆ. ಅದು ಸಾರ್ಥಕ ಹೆಸರು ಎಂದು ಮುಂದೆ ಸಾಬೀತಾಗುತ್ತದೆ. ಈ ಸುಜಾತಾ (ನೂತನ್), ಉಪೇನ್ ಮತ್ತು ಚಾರು ಹೆತ್ತ ಮಗಳು ರಮಾ (ಶಶಿಕಲಾ) ಅವಳೊಡನೆ ಸಮಸಮವಾಗಿ ಬೆಳೆಯುತ್ತಾಳೆ. ಮನೆಯಲ್ಲಿ ಊಟ–ಉಡುಗೆಯಲ್ಲಿ ವ್ಯತ್ಯಾಸ ಇರದಿದ್ದರೂ, ಸ್ವಂತ ಮಗಳನ್ನು ಶಾಲೆಗೆ ಕಳಿಸಿದರೆ ಸುಜಾತಾಳನ್ನು ಕಳಿಸುವುದಿಲ್ಲ. ಸುಜಾತಾ ಮನೆಗೆಲಸದಲ್ಲಿ ಜಾಣೆಯಾಗಿ ಬೆಳೆಯುತ್ತಾಳೆ. ಅದರಲ್ಲಿ ತಂದೆಯನ್ನು ಬಾಬೂಜಿ ಎಂದು ಪ್ರೀತಿಯಿಂದ ನೋಡಿಕೊಳ್ಳುತ್ತಾಳೆ. ಮನೆಗೆ ಬಂದವರಿಗೆ ರಮಾಳನ್ನು ತಮ್ಮ "ಮಗಳು" ಎಂದು ಸುಜಾತಾಳನ್ನು "ಮಗಳಿದ್ದಂತೆ" ಎಂದು, ಪರಿಚಯಿಸುವಾಗ ನೂತನಳ ಮುಖದ ಮೇಲೆ ನೋವಿನ ಛಾಯೆ ಎದ್ದುಕಾಣುತ್ತದೆ. ಆದರೆ ಶಬ್ದಗಳಲ್ಲಿ ವ್ಯಕ್ತಪಡಿಸುವದಿಲ್ಲ.

ಉಪೇನ್ ಮುಖ್ಯ ಎಂಜಿನಿಯರ್ ಆಗಿ ನಿವೃತ್ತನಾದ ಮೇಲೆ ಕಲ್ಕತ್ತೆಯ ದೊಡ್ಡ ಬಂಗಲೆಯೊಂದರಲ್ಲಿ ವಾಸಿಸುತ್ತಾನೆ. ದೂರ ಸಂಬಂಧಿ ಗಿರಿಬಾಲಾ (ಲಲಿತಾ ಪವಾರ್) ಇವರಿದ್ದ ಊರಿಗೆ ಬಂದು ಉಪೇನ್ ಕುಟುಂಬಕ್ಕೆ ತನ್ನ ಮೊಮ್ಮಗ ಅಧೀರನೊಡನೆ (ಸುನೀಲ್ ದತ್) ಭೇಟಿ ನೀಡುತ್ತಾಳೆ. ಅಧೀರನಿಗೆ ಉಪೇನ್‌ನ ಮಗಳು ರಮಾಳನ್ನು ಹೆಂಡತಿಯಾಗಿ ಪಡೆಯಲು ಸೂಚಿಸುತ್ತಾಳೆ. ಆದರೆ ತೀರ ಚೆಲ್ಲುಚೆಲ್ಲಾಗಿರುವ ರಮಾ, ತೀರ ಸಭ್ಯನಾಗಿರುವ ಅಧೀರನನ್ನು ಒಪ್ಪುವದಿಲ್ಲ. ಅಧೀರ ಆಗಲೇ ಸುಜಾತಾಳಿಗೆ ಮನಸೋತಿದ್ದಾನೆ. ಕಣ್ಣುಗಳಲ್ಲಿಯೇ ಪರಸ್ಪರ ಪ್ರೀತಿಯನ್ನು ಹಂಚಿಕೊಂಡ ಇಬ್ಬರೂ ಮುಖತಃ ಏಕಾಂತದಲ್ಲಿ ಒಪ್ಪುತ್ತಾರೆ. ಅಲ್ಲಿಯವರೆಗೆ ಸುಜಾತಾಳು ಅಸ್ಪೃಶ್ಯ ಕುಲದಲ್ಲಿ ಹುಟ್ಟಿದವಳೆಂದು ಗಿರಿಬಾಲೆಗೆ ಹೇಳಿರುವುದಿಲ್ಲ. ಈ ಪ್ರಸಂಗದಲ್ಲಿ ತನ್ನ ಮಗಳ ಹಿತಕ್ಕಾಗಿ ಗಿರಿಬಾಲಾಳಿಗೆ ಸುಜಾತಾ ಅಸ್ಪೃಶ್ಯ ಕನ್ಯೆ ಎಂದೂ, ಅವಳು ತಾವು ಸಾಕಿದ ಅನಾಥೆ ಎಂದೂ ಹೇಳುತ್ತಾಳೆ ಚಾರು. ಇದನ್ನು ಕೇಳಿದ ಗಿರಿಬಾಲೆ ಕೋಪಗೊಂಡು ಕಾಶಿಗೆ ಹೋಗುತ್ತಾಳೆ. ಆದರೂ ಅಧೀರ ತಾನು ಸುಜಾತಾಳನ್ನೇ ಮದುವೆ ಆಗುವುದಾಗಿ ಉಪೇನ್‌ಗೆ ಹೇಳಿ ಒಪ್ಪಿಸುತ್ತಾನೆ. ಆಗ ಕೋಪಗೊಂಡ ಚಾರು ಸುಜಾತಾಳನ್ನು ಬೈದು ಮನೆಯಿಂದಾಚೆ ತಳ್ಳಲು ಮುಂದಾಗುತ್ತಾಳೆ. ಕಾಲು ಜಾರಿ ಪಾವಟಿಗೆಗಳಿಂದ ಕೆಳಕ್ಕೆ ಬಿದ್ದುಹೋಗುತ್ತಾಳೆ. ಮನೆಯಲ್ಲಿಯೇ ಉಪಚಾರ ನಡೆಯುತ್ತದೆ. ಚಾರುಗೆ ಬಿದ್ದು ರಕ್ತಸ್ರಾವ ಆಗಿರುವದರಿಂದ ರಕ್ತ ನೀಡಲೇಬೇಕೆಂದು ಡಾಕ್ಟರ್ ಸಲಹೆ ನೀಡುತ್ತಾನೆ. ಯಾರ ರಕ್ತವೂ ಚಾರು ರಕ್ತಕ್ಕೆ ಹೊಂದುವದಿಲ್ಲವೆಂದು ಹೇಳುತ್ತಾನೆ. ಆಗ ಸುಜಾತಾ "ತನ್ನ ರಕ್ತ ಪರೀಕ್ಷೆ ಮಾಡಿರಿ, ನನ್ನ ಅಮ್ಮನಿಗೆ ನನ್ನ ರಕ್ತ ಕೊಡುತ್ತೇನೆ" ಎಂದು ಹೇಳುತ್ತಾಳೆ. ಅದರಂತೆ ಸುಜಾತಾಳ ರಕ್ತ ಹೊಂದಿ ಅವಳ ರಕ್ತದಾನದಿಂದ ಚಾರು ಬದುಕುತ್ತಾಳೆ. ಎಚ್ಚರ ಬಂದನಂತರ (ಚಾರುಳಿಗೆ) ತನ್ನ ಜೀವ ಉಳಿಸಿದ್ದು ಸುಜಾತಾಳ ರಕ್ತ ಎಂದು ತಿಳಿದಾಗ ಪಶ್ಚಾತ್ತಾಪವಾಗುತ್ತದೆ. ಅಧೀರ ಮತ್ತು ಸುಜಾತಾಳ ಮದುವೆಯನ್ನು ತಾನೇ ನೆರವೇರಿಸುತ್ತಾಳೆ ಚಾರು.




**ತುಲನೆ :** ಈ ಚಿತ್ರ ತುಂಬ ಹೃದ್ಯವಾಗಿ, ಸರಾಗವಾಗಿ ಹರಿಯುತ್ತದೆ. "ಅಛೂತ್ ಕನ್ಯಾ" ಚಿತ್ರದಲ್ಲಿ ಹಳ್ಳಿಗಾಡಿನ ಸಮಾಜದಲ್ಲಿಯ ಅಸ್ಪೃಶ್ಯತೆ ಒರಟಾಗಿ ವ್ಯಕ್ತವಾದರೆ, ನಗರದಲ್ಲಿ ಅಸ್ಪೃಶ್ಯತೆ ಒಳಹರಿವಾಗಿ ಹರಿಯುತ್ತದೆ ಎಂದು "ಸುಜಾತಾ" ಹೇಳುತ್ತದೆ. ೧೯೬೦ರ ಹೊತ್ತಿಗಾಗಲೇ ಅಂತರ್ಜಾತಿ ವಿವಾಹಗಳು ನೆರವೇರಲು ಆರಂಭವಾಗಿರುತ್ತವೆ. ಸಂವಿಧಾನದ ರಕ್ಷಣೆಯೂ ಸಿಕ್ಕಿರುತ್ತದೆ. ಬಿಮಲ್‌ರಾಯ್ ಒಂದೆಡೆ ಮಾತ್ರ ಎಡವಿದ್ದಾರೆ. ರಕ್ತವನ್ನು ಒಬ್ಬ ವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಗೆ ನೇರವಾಗಿ ಹರಿಸಲಾಗುವದಿಲ್ಲ. ರಕ್ತದಾನಿಯ ರಕ್ತವನ್ನು ಬಾಟಲಿಯಲ್ಲಿ ಮೊದಲು ಸಂಗ್ರಹಿಸಿ, ಆ ರಕ್ತವನ್ನು ಪಡೆಯುವ ವ್ಯಕ್ತಿಗೆ ಅದೇ ಬಾಟಲಿಯ ಮೂಲಕ ಸೂಕ್ತವಾಗಿ ಹನಿಹನಿಯಾಗಿ ನೀಡಲಾಗುತ್ತದೆ. ಈ ಚಿತ್ರದಲ್ಲಿ ಸುಜಾತಾಳ ರಕ್ತ, ನೇರವಾಗಿ ಅವಳ ರಟ್ಟೆಯಿಂದ ಅಮ್ಮನ ರಟ್ಟೆಗೆ ಹರಿಯುತ್ತದೆ. ಇದು ವೈದ್ಯಕೀಯವಾಗಿ ಅಸಹಜ. ಮಜ್ರೂಹ್ ಸುಲ್ತಾನ್ ಪುರಿಯವರ ಅರ್ಥಪೂರ್ಣ ಕವಿತೆಗಳಿಗೆ ಅತ್ಯಂತ ಮಧುರವಾದ ಹಿನ್ನೆಲೆ ಸಂಗೀತವನ್ನು ಎಸ್. ಡಿ. ಬರ್ಮನ್ ನೀಡಿದ್ದಾರೆ. ಅಧೀರ್ ಫೋನಿನಲ್ಲಿ ಸುಜಾತಾಳಿಗೆ ತನ್ನ ಪ್ರೇಮವನ್ನು ಗೀತೆಯ ಮೂಲಕ ವ್ಯಕ್ತಪಡಿಸುತ್ತಾನೆ. ಆ ಗೀತೆ "ಜಲತೇ ಹೈಂ ಕಿಸ್‌ಕೆ ಲಿಯೇ ತೇರೆ ಆಂಖೊ ಮೇಂ ದೀಪ್" (ನಿನ್ನ ಕಂಗಳ ದೀಪಗಳು ಯಾರಿಗಾಗಿ ಬೆಳಗುತಲಿವೆ) ಎಂಬ ಹಾಡು ನೆನಪಿಡುವಂಥ ಹಾಡು. ಈ ಚಿತ್ರದಲ್ಲಿ ನೂತನ್ ತುಂಬ ಶ್ರೇಷ್ಠ ಅಭಿನಯ ನೀಡಿದ್ದಾಳೆ. ಇದು ಈ ಚಿತ್ರದ ಜೀವಾಳ.

ಬಹುಶಃ ೧೯೫೦ರವರೆಗೆ ಬಂದ ಚಿತ್ರಗಳಿಗೆ ಭದ್ರವಾದ ಬುನಾದಿಯೇ ಒಂದು ಒಳ್ಳೆಯ ಕಥೆ. ಅದರಲ್ಲಿಯೂ ಸಮಾಜಕ್ಕೆ ಒಂದು ಸಂದೇಶ ನೀಡುವಂತಹ ಕತೆಗಳೇ ಚಿತ್ರದ ಯಶಸ್ಸಿಗೆ ಮೂಲ ಕಾರಣ. ಈ ಭದ್ರ ಬುನಾದಿಯನ್ನು ಈ ಎರಡೂ ಚಿತ್ರಗಳಲ್ಲಿ ನಾನು ಗುರ್ತಿಸಿದ್ದೇನೆ, ಚಿತ್ರಗಳನ್ನು ನೋಡಿದ ಎಲ್ಲ ಸಹೃದಯಿಗಳು ಇದನ್ನೇ ಗುರ್ತಿಸುತ್ತಾರೆ. ಸಂದೇಹವಿಲ್ಲ.

**ಡಾ॥ ಎಚ್. ಚಂದ್ರಶೇಖರ**
'ಸಂಗಮ', ಎಮ್.ಐ.ಜಿ.–೭೭, ೬ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ, ಕೆ. ಹೆಚ್. ಬಿ. ಕಾಲನಿ
೨ನೇ ಹಂತ, ಬಸವೇಶ್ವರ ನಗರ, ಬೆಂಗಳೂರು – ೫೬೦ ೦೭೯



# ಷರೀಫನ ಪಾಡು...




**ಬಾ**ಲಕ ಷರೀಫನಿಗೆ ಮಠದ
'ಪ್ರಭುಲಿಂಗಲೀಲೆ'ಯ ಪುರಾಣ
ನಮಾಜಿಗೆ ಹೋಗದಂತೆ ಮಾಡಿದ್ದು
ಕೇಳಿ ಚಕಿತಗೊಂಡಿದ್ದೆ. ಪುರಾಣದ ಮಿಗಿಲೋ ?
ಷರೀಫನ ದುಡುಗುತನವೋ ? ಮಸೀದಿಯ
ತಪ್ಪೋ ? ಎಂದು ಯೋಚಿಸಿ ತಣ್ಣಗಾದೆ. ಇದ್ದಕ್ಕಿದ್ದಂತೆ,
ಮೊನ್ನೆ ಕುಂಬಾರ ಓಣಿಯ ಮಸೂತಿಯಿಂದ
'ಅಲ್ಲಾs ಹೋ ಅಕ್ಬರ್...' ಎಂಬ ಕೂಗು ಕೇಳಿಬಂತು.
ಮಠದ 'ಅಯ್ಯ', ಮಠಕ್ಕೆ ಓಡಿದ ಷರೀಫ ನೆನಪಾದ,
'ಅಲ್ಲಾs...' ಎಂಬ ಆರ್ದ್ರ ದನಿ ಒಂದು
'ಲೀಲೆ'ಯಂತಿತ್ತು. ಮೊದಲು 'ಆದೇಶ'ದ ಧ್ವನಿ ಅಂದುಕೊಂಡೆ.
ನಂತರ 'ಪ್ರಾರ್ಥನೆ' ಎಂದುಕೊಂಡೆ. ಮುಂದೆ 'ಲಯ' ಮಾತ್ರ
ಬಿಡು ಎಂದು ಸುಮ್ಮನಾದೆ. ಆದರೆ ಈಗೀಗ ಈ
'ಕೂಗು' ಕರುಳು ಎನಿಸುತ್ತಿದೆ. 'ತಾಯಿ' ಎನಿಸುತ್ತಿದೆ.
'ಹರಿಯುವ ನದಿ' ಎನಿಸುತ್ತಿದೆ. 'ಆಕಾಶದ ಸ್ವಚ್ಛಂದ ಪಕ್ಷಿ'
ಎನಿಸುತ್ತಿದೆ. ಕೂಗು ಹೆಚ್ಚಾದಂತೆಲ್ಲ 'ಕಲ್ಲು ತೇವ'
ವಾಗುತ್ತಿದೆ. ಯಾವ ಮಕ್ಕಾದಿಂದಲೋ, ಮದೀನದಿಂದಲೋ,
ದೆಹಲಿಯ ಜಾಮಾ ಮಸೀದಿಯಿಂದಲೋ ತೇಲಿ
ಬಂದದ್ದಲ್ಲ ಈ ಕೂಗು. ಇಲ್ಲೇ ಇಲ್ಲೇ ನನ್ನೂರಿನ ಕುಂಬಾರ
ಗಲ್ಲಿಯ ಪೂರ್ಣಗೊಳ್ಳದ ಮಸೀದಿಯ ಗೋಡೆಯಿಂದ
ನಿತ್ಯವೂ "ಅರ್ಥವಿಲ್ಲ, ಸ್ವಾರ್ಥವಿಲ್ಲ, ಬರಿಯ ಭಾವಗೀತೆ."
ಇಷ್ಟು ಸಾಕಲ್ಲವೇ ಮಠದ ಅಹಂಕಾರ ಅಳಿಸಲು;
ಗುರು ಗೋವಿಂದ, ಕಬೀರನನ್ನು ನೆನೆಯಲು !

**ಡಾ॥ ವೆಂಕಟಗಿರಿ ದಳವಾಯಿ**
ಬಾಪೂಜಿ ನಗರ
ಹೊಸ್ಪೇಟೆ – ೫೮೩ ೨೦೧, ಬಳ್ಳಾರಿ ಜಿಲ್ಲೆ

**ಕೋ. ಚೆನ್ನಬಸಪ್ಪ**

ದಿನಾಂಕ ೦೫ – ೦೫ – ೧೯೧೫ರಲ್ಲಿ ಸ್ಥಾಪನೆಯಾದ 'ಕನ್ನಡ ಸಾಹಿತ್ಯ ಪರಿಷತ್ತು' ಸಂಸ್ಥೆಗೆ ಮುಂದಿನ ವರ್ಷಕ್ಕೆ ನೂರು ವರ್ಷಗಳು ತುಂಬುತ್ತವೆ. ಈ ಸಂದರ್ಭದಲ್ಲಿ ಈ ಸಂಸ್ಥೆಯ ಹುಟ್ಟು, ಬೆಳವಣಿಗೆ, ಮಾಡಿದ ಕೆಲಸ ಮುಂತಾದವುಗಳನ್ನು ಕುರಿತು ಸ್ಮರಿಸುವುದು ಯಥೋಚಿತವಾಗಿದೆ.

೧೯೧೫ರಲ್ಲಿ ಈ ಸಂಸ್ಥೆಯನ್ನು ಸ್ಥಾಪಿಸುವಾಗ ಎಷ್ಟು ಜನ ಮಹನೀಯರು ಇದ್ದರು ? ಸ್ಪಷ್ಟವಾಗಿ ತಿಳಿಯದು. ೧೯೧೫ರಿಂದ ೧೯೪೬ರವರೆಗೆ ಕೇವಲ ಐದು ಜನ ಮಹನೀಯರು ಇದರ ಅಧ್ಯಕ್ಷರಾಗಿದ್ದರು ಹಾಗೂ ಈ ಸಂಸ್ಥೆಯಲ್ಲಿ ಅಂದಾಜು ೫೦ ಜನ ಸದಸ್ಯರಿದ್ದಿರಬಹುದು. ಅಷ್ಟು ಅಲ್ಪ ಸಂಖ್ಯೆಯ ಜನರಿದ್ದ ಸಂಸ್ಥೆಯಲ್ಲಿ ಈಗ ೨ ಲಕ್ಷದ ೨ ಸಾವಿರಕ್ಕಿಂತಲೂ ಅಧಿಕ ಆಜೀವ ಸದಸ್ಯರೆ ಇದ್ದಾರೆ. ಆಗ ಈ ಸಂಸ್ಥೆಯ ಸದಸ್ಯರಾಗಲು ಇಷ್ಟವಿದ್ದವರು ಬೆರಳೆಣಿಕೆಯಷ್ಟಿದ್ದರೊ ಇಲ್ಲವೋ ! ಒಂದರ್ಥದಲ್ಲಿ ಆಗ ಈ ಸಂಸ್ಥೆ ಯಾರಿಗೂ ಬೇಡವಾಗಿದ್ದ ಅನಾಥ ಶಿಶು.

ಈ ಸಂಸ್ಥೆ ಪ್ರಾರಂಭವಾದಾಗ ಆದಿ ಸದಸ್ಯರು ಕುಳಿತುಕೊಳ್ಳಲು ಒಂದು ಜಾಗವೂ ಇದ್ದಿರಲಿಲ್ಲ ಎಂದು ಕಾಣುತ್ತದೆ. ಬಹುಶಃ ಮೊದಲನೆ ಅಧ್ಯಕ್ಷರಾಗಿದ್ದ ರಾಜಮಂತ್ರ ಪ್ರವೀಣ ಶ್ರೀ ಎಚ್. ವಿ. ನಂಜುಂಡಯ್ಯನವರು ಮತ್ತು ಅವರ ಕೆಲವು ಮಿತ್ರರು ಶಂಕರಪುರದ ಒಂದು ಸಣ್ಣ ಬಾಡಿಗೆ ಮನೆಯಲ್ಲಿ ಸೇರುತ್ತಿದ್ದರು. ಸ್ವಂತ ನೆಲೆಯಿಲ್ಲದ ಈ ಪರಿಸ್ಥಿತಿಯನ್ನು ಅಂದಿನ ಮೈಸೂರು ಅರಸರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಪರಿಷತ್ತಿಗೆ ಕಟ್ಟಡ ನಿರ್ಮಿಸಲು ಐದು ಸಾವಿರ ರೂಪಾಯಿಗಳ ಉದಾರ ಧನಸಹಾಯ ಮಾಡಿದ್ದರು. ಆಗ ಪರಿಷತ್ತಿನ ಪದಾಧಿಕಾರಿಗಳು, ಸದಸ್ಯರು ಬಹುಮಟ್ಟಿಗೆ ಸರಕಾರಿ ನೌಕರರೇ ಆಗಿದ್ದಿರಬಹುದು. ಅವರು ಪರಿಷತ್ತಿನ ಕೆಲಸವನ್ನು ಮಾಡುವಾಗ ಅನಿವಾರ್ಯವಾಗಿ ಮೂರು ಅಲಿಖಿತ ನಿಯಮಗಳನ್ನು ಅನುಸರಿಸುತ್ತಿದ್ದಿರಬೇಕು. ಸಂಸ್ಥೆಯ ಆರ್ಥಿಕ ಸಹಾಯವನ್ನು ಬಹುಭಾಗ ಮಹಾರಾಜರಿಂದಲೇ ಪಡೆಯುತ್ತಿದ್ದುದರಿಂದ ಅವರ ಅಧ್ಯಕ್ಷತೆಯಲ್ಲಿ (ಆಗ ಪದಾಧಿಕಾರಿಗಳ ಚುನಾವಣೆ ಇರಲಿಲ್ಲ) ಅವರಿಗೆ ಅಧೀನರಾಗಿಯೆ ಇವರು ಕೆಲಸ ಮಾಡಬೇಕಾಗಿತ್ತು. ಈ ಸಂಸ್ಥೆಯ ಪದಾಧಿಕಾರಿಗಳು, ಸದಸ್ಯರು ಸರ್ಕಾರಿ ನೌಕರ ರಾಗಿದ್ದರಿಂದ ಸರ್ಕಾರಿ ನೌಕರರು ಸಾರ್ವಜನಿಕ ಜೀವನದಲ್ಲಿ ಹೆಚ್ಚು ಬೆರೆಯುವಂತೆ ಇರಲಿಕ್ಕಿಲ್ಲ. ಈ ನೀತಿ ನಿಯಮಗಳಿಗೆ ಒಳಪಟ್ಟು ಬಹುಶಃ ಪ್ರಾರಂಭದ ಕಾಲು ಶತಮಾನ ಈ ಪರಿಷತ್ತು ಮೇಲ್ಕಾಣಿಸಿದ ಅಲಿಖಿತ ನಿಯಮಗಳಿಗೆ ಅನುಗುಣವಾಗಿಯೆ ಕೆಲಸ ಮಾಡಿರಬೇಕು. ಅದರಲ್ಲೂ ಸರ್ಕಾರದ ನೀತಿ ನಿಯಮಗಳಿಗೆ ವಿರುದ್ಧವಾಗಿ ಅವರೇನೂ ಮಾತನಾಡುವಂತಿರಲಿಲ್ಲ. ಕೆಲಸ ಮಾಡುವಂತಿರಲಿಲ್ಲ. ಆ ಸೀಮಿತ ಪರಿಮಿತಿಯಲ್ಲಿಯೆ ಕೆಲಸ ಮಾಡಿದರು. ಅದೇ ಪ್ರವೃತ್ತಿ ಸ್ವಾತಂತ್ರ್ಯಾನಂತರವೂ ಕರ್ನಾಟಕದ ಏಕೀಕರಣದ ನಂತರವೂ ಸಾಹಿತ್ಯ ಪರಿಷತ್ತು ಮೇಲ್ಕಾಣಿಸಿದ ಅಲಿಖಿತ ನಿಯಮಗಳಿಗೆ ಒಳಗಾಗಿಯೆ ಕೆಲಸ ಮಾಡುತ್ತಲೆ ಇದೆ. ಈ ಸಂಸ್ಥೆಯ ಚರಿತ್ರೆಯ ಸ್ಮರಣೆ ಮಾಡುವಾಗ ಪ್ರಾರಂಭದ ಕಾಲು ಶತಮಾನದಲ್ಲಿ ಇದ್ದ, ಕೇವಲ ಬೆರಳೆಣಿಕೆಯಲ್ಲಿದ್ದಷ್ಟು ಮಹನೀಯರನ್ನು ಸ್ಮರಿಸುವುದು ಅತ್ಯಗತ್ಯ. ಆಗಿನ ಆ ಮಹನೀಯರು ಪುರಾತನ ಕನ್ನಡ ಕಾವ್ಯಗಳನ್ನು ಪ್ರಕಟಿಸುವುದರಲ್ಲಿ ದೊಡ್ಡ ಸೇವೆಯನ್ನು ಮಾಡಿದ್ದಾರೆ. ಇದು ಅತ್ಯಂತ ಪ್ರಶಂಸನೀಯವಾದ ಕೆಲಸ. ಅವರಿಗೆ ನಮ್ಮ ಕೃತಜ್ಞತೆಗಳನ್ನು ಮತ್ತು ಅಭಿನಂದನೆಗಳನ್ನು ಅರ್ಪಿಸಲೇಬೇಕು.

ಕನ್ನಡ ಸಾಹಿತ್ಯ ಪರಿಷತ್ತು ಅನೇಕ ಗ್ರಂಥಗಳನ್ನು ಪ್ರಕಟಿಸುವುದಕ್ಕೆ ಅನುಕೂಲವಾಗುವ ಅಚ್ಚುಕೂಟವನ್ನು ಐದು ಸಾವಿರ ರೂಪಾಯಿಗಳ ಧನಸಹಾಯ ಮಾಡಿ ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು




# ಕನ್ನಡ ಸಾಹಿತ್ಯ ಪರಿಷತ್ತು ಶತಮಾನೋತ್ಸವ

## – ಒಂದು ಅವಲೋಕನ

ಈ ಪರಿಷತ್ತಿನ ಸ್ಥಾಪನೆ, ಮುಖ್ಯ ಉದ್ದೇಶ ಕನ್ನಡ ನಾಡು, ನುಡಿ, ಸಾಹಿತ್ಯ ಪರಿಷತ್ತನ್ನು ಅಭಿವೃದ್ಧಿಪಡಿಸುವುದು ಎಂಬುದಾಗಿತ್ತು. ಈ ಕೆಲಸವನ್ನು ಎಷ್ಟರಮಟ್ಟಿಗೆ ನೆರವೇರಿಸಬೇಕು ? ಒಂದು ಎದ್ದು ಕಾಣುವ ಕೆಲಸವೆಂದರೆ 1915ರಿಂದ ಇಲ್ಲಿಯವರೆಗೆ ತನ್ನ 80 ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ರಾಜ್ಯದ ವಿವಿಧ ಸ್ಥಳಗಳಲ್ಲಿ ಜರುಗಿಸಿರುವುದು. ಈ ಸಮ್ಮೇಳನಗಳನ್ನು ಏರ್ಪಡಿಸಿದ್ದರಿಂದ ಆಗಿರಬಹುದಾದ ಪರಿಣಾಮವೆಂದರೆ ಜನರಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯದ ಬಗ್ಗೆ ಆಸಕ್ತಿ, ಅಭಿರುಚಿ, ಅಭಿಮಾನವನ್ನು ಬೆಳೆಸುವುದು, ತನ್ಮೂಲಕ ಜನರಿಗೆ ನಮ್ಮ ನಾಡು ಮತ್ತು ನುಡಿಯ ಹಿರಿಮೆಯನ್ನು, ಗರಿಮೆಯನ್ನು ಮಹತ್ವವನ್ನು ತಿಳಿಯಪಡಿಸುವ ಉದ್ದೇಶ ಆಗಿನ ಕಾಲಕ್ಕೆ ತಕ್ಕಮಟ್ಟಿಗೆ ಆಗಿರಬೇಕು. ಈ ಕೆಲಸವನ್ನು ಉತ್ತರ ಕರ್ನಾಟಕದಲ್ಲಿ ವಿವಿಧ ರಾಜ್ಯಗಳಲ್ಲಿ, ಪ್ರಾಂತಗಳಲ್ಲಿ, ದೇಶೀಯ ಸಂಸ್ಥಾನಗಳಲ್ಲಿ ಹರಿದು ಹಂಚಿಹೋಗಿದ್ದ ಕನ್ನಡಿಗರ ಜನಜಾಗೃತಿಯನ್ನು ಸ್ವಸಾಮರ್ಥ್ಯದಿಂದ ಮಾಡಿದರು. ಅವರಿಗೆ ಸರಕಾರ ಈಗಿನಂತೆ ಲಕ್ಷ / ಕೋಟಿ ಧನಸಹಾಯವನ್ನೇನೂ ಮಾಡುತ್ತಿರಲಿಲ್ಲ. ಆ ಪ್ರಯತ್ನದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಮೂಲಪುರುಷರೂ, ವಿದ್ವಾಂಸರೂ ಕರ್ನಾಟಕದ ಗತವೈಭವವನ್ನು ಜನಮನದಲ್ಲಿ ಪ್ರಚುರಪಡಿಸಿದರು.



ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್



ಶ್ರೀ ಹೆಚ್. ವಿ. ನಂಜುಂಡಯ್ಯ



ಪ್ರೊ॥ ಬಿ. ಎಂ. ಶ್ರೀಕಂಠಯ್ಯ

ಸ್ಥಾಪಿಸಿದರು. ಬಿ. ಎಂ. ಶ್ರೀ. ಅವರ ಈ ಉದಾರ ದಾನ ಮೈಸೂರು ಮಹಾರಾಜರ ಧನಸಹಾಯದಂತೆ ಪರಿಷತ್ತಿನ ಬೆಳವಣಿಗೆಗೆ ಅವರು ಭದ್ರವಾದ ಬುನಾದಿಯನ್ನು ಹಾಕಿದ್ದರು. ಆ ಅಚ್ಚುಕೂಟ ಇಲ್ಲದೆ ಇದ್ದಿದ್ದರೆ ಪರಿಷತ್ತು ಪ್ರಕಟಿಸಿರುವ ನೂರಾರು ಗ್ರಂಥಗಳನ್ನು ಅಚ್ಚುಹಾಕಿಸಲಿಕ್ಕೆ ಲಕ್ಷಾಂತರ ರೂಪಾಯಿಗಳು ಬೇಕಾಗುತ್ತಿತ್ತು. ಇದು ಕನ್ನಡ ಸಾಹಿತ್ಯ ಪರಿಷತ್ತಿನ ಇತಿಹಾಸದಲ್ಲಿ ಬಹುದೊಡ್ಡ ಮತ್ತು ಸ್ಮರಣೀಯ ಘಟನೆ. ಪರಿಷತ್ತಿನ ಅಭ್ಯುದಯಕ್ಕೆ ಕಾರಣವಾದ ಬಿ. ಎಂ. ಶ್ರೀ. ಅಚ್ಚುಕೂಟವನ್ನು ಉಳಿಸಿಕೊಳ್ಳುವುದು ಈಗಿನ ಪರಿಷತ್ತಿಗೆ ಸಾಧ್ಯವಾಗಿಲ್ಲ. ಪರಿಷತ್ತಿಗೆ ಅಂಥ ಅದ್ವಿತೀಯ ಸೇವೆ ಸಲ್ಲಿಸಿದ ಮುದ್ರಣ ಯಂತ್ರವನ್ನು ಕಾದಿಟ್ಟು ಸಂರಕ್ಷಿಸ ಬೇಕಾಗಿತ್ತು. ಆದರೆ ಅದು ಯಾವುದಕ್ಕೂ ಬಾರದ ನಿರುಪಯುಕ್ತ, ನಿರ್ಜೀವ 'ಜಡವಸ್ತು' ಎಂದು ಭಾವಿಸಿದ್ದು ಬಿ. ಎಂ. ಶ್ರೀ. ಅವರಿಗೆ ಮಾಡಿದ ಅಪಚಾರವೆಂದೆ ಹೇಳಬಹುದು.

ಈ ಸಂಸ್ಥೆಯ ಮೊದಲ ಕಾಲು ಶತಮಾನದ ಕಾಲದಲ್ಲಿ ಸಾಕಷ್ಟು ಸಿಬ್ಬಂದಿ ವರ್ಗ ಇತ್ತು ಎಂದು ಹೇಳಲಿಕ್ಕಾಗುವುದಿಲ್ಲ. ನನಗೆ ತಿಳಿದ ಮಟ್ಟಿಗೆ ಅಂದಿನ ಅಧ್ಯಕ್ಷರೇ ಪತ್ರ ವ್ಯವಹಾರವನ್ನು ತಮ್ಮ ಸ್ವಹಸ್ತದಿಂದಲೆ ಬರೆಯುತ್ತಿದ್ದರು ಎಂದೂ, ಅವರೆ ಅಂಚೆ ಕಚೇರಿಗೆ ಹೋಗಿ ಪತ್ರಗಳನ್ನು ರವಾನಿಸುತ್ತಿದ್ದರು ಎಂದೂ ಕೇಳಿದ್ದೇನೆ. ಅಂದರೆ ಆಗಿನ ಆ ಮಹನೀಯರು ತಮ್ಮ ಸಮಯ, ಶ್ರಮ, ಬುದ್ಧಿಶಕ್ತಿ, ಚಿಂತನೆಯಿಂದ ಪರಿಷತ್ತಿನ ಕೆಲಸವನ್ನು ನೆರವೇರಿಸಬೇಕಿತ್ತು. ಅಂಥ ಪರಿಸ್ಥಿತಿಯಲ್ಲಿ ಪ್ರಾರಂಭದಲ್ಲಿದ್ದ ಪದಾಧಿಕಾರಿಗಳು, ಆ ಪುಣ್ಯ ಪುರುಷರು ಎಂಥ ತ್ಯಾಗವನ್ನು ಮಾಡಿದ್ದಾರೆಂದು ನಾವು ಸ್ಮರಿಸಬೇಕು.

ಸಾಹಿತ್ಯ ಪರಿಷತ್ತು ಬೆಳೆಯಲು ಮತ್ತು ಕನ್ನಡವನ್ನು ಉಳಿಸಲು ಸರ್ಕಾರಿ ನೌಕರಿಯಲ್ಲಿದ್ದೆ ಅಮೋಘವಾದ ಸೇವೆ ಸಲ್ಲಿಸಿದ ಮಹನೀಯರು ಇದ್ದಾರೆ. ಅಂಥವರಲ್ಲಿ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಎದ್ದುಕಾಣುವ ವ್ಯಕ್ತಿ. ಅವರು ಸರ್ಕಾರಿ ನೌಕರಿಯಲ್ಲಿ ಬಡ್ತಿ ಹೊಂದಿ 'ದಿವಾನ'ರೆ ಆಗಬಹುದಾಗಿತ್ತು. ಆದರೆ ಕಾರಣಾಂತರಗಳಿಂದ ಅವರಿಗೆ ಆ ಸ್ಥಾನ ದೊರೆಯದಂತೆ ಮಾಡಿದಾಗ, ನೌಕರಿಗೆ ರಾಜೀನಾಮೆ ಕೊಟ್ಟು ಪರಿಷತ್ತಿನ ಸೇವೆಗೆ ನಿಂತರು. ಕರ್ನಾಟಕದಾದ್ಯಂತ ತಮ್ಮ ಸ್ವಂತ ಖರ್ಚಿನಲ್ಲಿ ಪ್ರವಾಸ ಮಾಡಿ ಕನ್ನಡದ ಏಳಿಗೆಗಾಗಿ, ಉಳಿವಿಗಾಗಿ, ಕೆಲಸ ಮಾಡಿ ಪರಿಷತ್ತಿನ ಬೆಳವಣಿಗೆಗೆ ಕಾರಣರಾದರು. ಸರ್ಕಾರಿ ನೌಕರಿಯಲ್ಲಿಲ್ಲದಿದ್ದ ಡಿ. ವಿ. ಜಿ., ಮುಂತಾದ ಮಹನೀಯರು ಕನ್ನಡದ ಬೆಳವಣಿಗೆಗೆ ಕಾರಣರಾದರು. ಕಾಲಕಾಲಕ್ಕೆ ಬಂದ ಪರಿಷತ್ತಿನ ಅಧ್ಯಕ್ಷರು ತಮ್ಮ ಕೈಲಾದ ಕೆಲಸ ಮಾಡಿದರು. ಅಂಥವರಲ್ಲಿ ಶ್ರೀಯುತರಾದ ಶ್ರೀ ವಿ. ಸೀತಾರಾಮಯ್ಯ, ಜಿ. ನಾರಾಯಣರಂಥವರು ಸ್ಮರಣೀಯರು.

ಈ ಪರಿಷತ್ತಿನ ಸ್ಥಾಪನೆ, ಮುಖ್ಯ ಉದ್ದೇಶ ಕನ್ನಡ ನಾಡು, ನುಡಿ, ಸಾಹಿತ್ಯ ಪರಿಷತ್ತನ್ನು ಅಭಿವೃದ್ಧಿಪಡಿಸುವುದು ಎಂಬುದಾಗಿತ್ತು. ಈ ಕೆಲಸವನ್ನು ಎಷ್ಟರಮಟ್ಟಿಗೆ ನೆರವೇರಿಸಬೇಕು ? ಒಂದು ಎದ್ದು ಕಾಣುವ ಕೆಲಸವೆಂದರೆ ೧೯೧೫ರಿಂದ ಇಲ್ಲಿಯವರೆಗೆ ತನ್ನ ೮೦ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ರಾಜ್ಯದ ವಿವಿಧ ಸ್ಥಳಗಳಲ್ಲಿ ಜರುಗಿಸಿರುವುದು. ಈ ಸಮ್ಮೇಳನ ಗಳನ್ನು ಏರ್ಪಡಿಸಿದ್ದರಿಂದ ಆಗಿರಬಹುದಾದ ಪರಿಣಾಮವೆಂದರೆ ಜನರಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯದ ಬಗ್ಗೆ ಆಸಕ್ತಿ, ಅಭಿರುಚಿ, ಅಭಿಮಾನವನ್ನು ಬೆಳೆಸುವುದು, ತನ್ಮೂಲಕ ಜನರಿಗೆ ನಮ್ಮ ನಾಡು ಮತ್ತು ನುಡಿಯ ಹಿರಿಮೆಯನ್ನು, ಗರಿಮೆಯನ್ನು ಮಹತ್ವವನ್ನು ತಿಳಿಯಪಡಿಸುವ ಉದ್ದೇಶ ಆಗಿನ ಕಾಲಕ್ಕೆ ತಕ್ಕಮಟ್ಟಿಗೆ ಆಗಿರಬೇಕು. ಈ ಕೆಲಸವನ್ನು ಉತ್ತರ ಕರ್ನಾಟಕದಲ್ಲಿ ವಿವಿಧ ರಾಜ್ಯಗಳಲ್ಲಿ, ಪ್ರಾಂತಗಳಲ್ಲಿ, ದೇಶೀಯ ಸಂಸ್ಥಾನಗಳಲ್ಲಿ ಹರಿದು ಹಂಚಿಹೋಗಿದ್ದ ಕನ್ನಡಿಗರ ಜನಜಾಗೃತಿಯನ್ನು ಸ್ವಸಾಮರ್ಥ್ಯದಿಂದ ಮಾಡಿದರು. ಅವರಿಗೆ ಸರಕಾರ ಈಗಿನಂತೆ ಲಕ್ಷ / ಕೋಟಿ ಧನಸಹಾಯವನ್ನೇನೂ ಮಾಡುತ್ತಿರಲಿಲ್ಲ. ಆ ಪ್ರಯತ್ನದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಮೂಲಪುರುಷರೂ, ವಿದ್ವಾಂಸರೂ ಕರ್ನಾಟಕದ ಗತವೈಭವವನ್ನು ಜನಮನದಲ್ಲಿ ಪ್ರಚುರಪಡಿಸಿದರು.

ಕನ್ನಡಿಗರಿಗೆ ಆಗ ಎದುರಾಗಿದ್ದ ಅತ್ಯಂತ ಕಷ್ಟದ ಸ್ಥಿತಿ ಎಂದರೆ ಕನ್ನಡ ಮಾತನಾಡುವ ಜನರೆಲ್ಲ ಒಂದೇ ಆಡಳಿತದಲ್ಲಿ ಇರಲಿಲ್ಲ. ಆಗ ಕನ್ನಡ ನುಡಿಯ ಏಳಿಗೆಯಾಗಬೇಕಿದ್ದರೆ ವಿವಿಧ ಪ್ರಾಂತಗಳಲ್ಲಿ ಹಂಚಿಹೋಗಿದ್ದ ಕನ್ನಡ ಮಾತನಾಡುವ ಜನರನ್ನೆಲ್ಲ ಒಂದೇ ಆಡಳಿತೆಯಲ್ಲಿ ತರುವ ಬಹುದೊಡ್ಡ ಕಷ್ಟದಾಯಕ ಕೆಲಸ ಮಾಡಬೇಕಾಗಿತ್ತು. ಮೈಸೂರು ಅರಸರ ಆಶ್ರಯದಲ್ಲಿ ಬೆಳೆದು ಈ ಕನ್ನಡ ಸಾಹಿತ್ಯ ಪರಿಷತ್ತು ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಉತ್ತರ ಕರ್ನಾಟಕದ ಜನರು ಮಾಡಿದಷ್ಟು ಕೆಲಸವನ್ನು ಮಾಡಲಾಗಲಿಲ್ಲ. ಆದರೂ ೧೯೪೦ರಿಂದೀಚೆಗೆ ಕರ್ನಾಟಕ ಏಕೀಕರಣದ ವಿಚಾರದಲ್ಲಿ ತಕ್ಕಮಟ್ಟಿಗೆ ಅಪಾಯವಿಲ್ಲದ, ನಿರುಪದ್ರವ, ಹೋರಾಟವಲ್ಲದ ಕೆಲಸ ಮಾಡಿದೆ. ಈ ಪರಿಷತ್ತು ಮಾಡಿದ ಆ ಪ್ರಯತ್ನವನ್ನು ವಾರ್ಷಿಕ ಸಾಹಿತ್ಯ ಸಮ್ಮೇಳನಗಳಲ್ಲಿ ಮಂಜೂರು ಮಾಡಿದ ಗೊತ್ತುವಳಿಯಿಂದ ನಾವು ಗ್ರಹಿಸಬಹುದಾಗಿದೆ. ಆ ಗೊತ್ತುವಳಿಗಳನ್ನು ಸಂಗ್ರಹಿಸಿ ನಮ್ಮ ಬರಹಗಾರರೊಬ್ಬರು ಒಂದು ಪುಸ್ತಕವನ್ನು ಪ್ರಕಟಿಸಿದ್ದಾರೆ. ಆ ಎಲ್ಲ ಗೊತ್ತುವಳಿ ಗಳಲ್ಲೂ ಕರ್ನಾಟಕ ಏಕೀಕರಣವಾಗಬೇಕೆಂಬ ಗೊತ್ತುವಳಿಯು ಮಂಜೂರಾಗುತ್ತಿತ್ತು. ಆದರೆ

ಅದಕ್ಕಾಗಿ ಸಕ್ರಿಯವಾಗಿ ಆಂದೋಲನ ಅಥವಾ ಚಳವಳಿಯನ್ನು ಹೂಡುವುದು ಈ ಪರಿಷತ್ತಿಗೆ ಸಾಧ್ಯವಾಗಿರಲಿಲ್ಲ. ಹೆಚ್ಚೆಂದರೆ ಅಧ್ಯಕ್ಷರೊ, ಕಾರ್ಯದರ್ಶಿಗಳೊ ಏಕೀಕರಣದ ವಿಚಾರವಾಗಿ ಲೇಖನವನ್ನು ಬರೆದು, ಭಾಷಣವನ್ನು ಮಾಡಿ ತಮ್ಮ ಕೈಲಾದ ಸೇವೆಯನ್ನು ಮಾಡಿದರು. ಆಗಲೂ ಸರ್ಕಾರಿ ನೌಕರಿಯಲ್ಲಿಯೆ ಇದ್ದ ಪರಿಷತ್ತಿನ ಪದಾಧಿಕಾರಿಗಳಾಗಲಿ, ಕಾರ್ಯಕಾರಿ ಸಮಿತಿ ಸದಸ್ಯರಾಗಲಿ ತೀವ್ರ ಚಳವಳಿ ರೂಪದ ಕೆಲಸವನ್ನು ಮಾಡಲಾಗಲಿಲ್ಲ. ಸಮ್ಮೇಳನಗಳಲ್ಲಿ ಮಂಜೂರು ಮಾಡಿದ ಗೊತ್ತುವಳಿಯನ್ನು ಅವಲೋಕಿಸಿದರೆ ಸಂಬಂಧಪಟ್ಟವರಿಗೆ ಮನವಿಯನ್ನು ಅರ್ಪಿಸುವುದು, ಪ್ರಾರ್ಥನೆ ಮಾಡುವುದು ಇತ್ಯಾದಿ ಪ್ರಾರ್ಥನಾ ರೂಪದ ಪ್ರಯತ್ನವಾಗಿತ್ತು. ಸುಮಾರು ೫೦ ವರ್ಷಗಳಲ್ಲಿ ಗೊತ್ತು ಮಾಡಿದ ಗೊತ್ತುವಳಿಗಳನ್ನು ಪುನರುಚ್ಚರಿಸುತ್ತಾ ಬಂದಿದ್ದಾರೆ. ಇಂಥ ಪರಿಸ್ಥಿತಿಯಲ್ಲೂ ಕುವೆಂಪು ಮುಂತಾದ ಕವಿಗಳು, ಪ್ರಖ್ಯಾತ ಸಾಹಿತಿಗಳು ಮತ್ತು ನಿಜಲಿಂಗಪ್ಪನವರು, ಹನುಮಂತಯ್ಯನವರಂಥ ಕೆಲವು ನಾಯಕರು ಏಕೀಕರಣದ ಬಗ್ಗೆ ಅಚಲ ನಿಷ್ಠೆಯಿಂದ ತಮ್ಮ ಬರಹದ ಮೂಲಕ, ಭಾಷಣದ ಮೂಲಕ ಏಕೀಕರಣಕ್ಕೆ ಬೆಂಬಲಕೊಟ್ಟಿದ್ದಾರೆ. ಹಾಗೆಯೆ ಅ. ನ. ಕೃ., ತಿ. ತಾ. ಶರ್ಮಾ ಮುಂತಾದವರು ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಗಣನೀಯ ಸೇವೆ ಸಲ್ಲಿಸಿದರು.

ಈ ಸಾಹಿತ್ಯ ಪರಿಷತ್ತಿನ ಇತಿಹಾಸದ ಅವಲೋಕನ ಮಾಡುವಾಗ ಪರಿಷತ್ತು ಮಾಡಿದ ಒಂದು ಅತ್ಯಂತ ಮುಖ್ಯ ಕೆಲಸವೆಂದರೆ ಪುರಾತನ ಗ್ರಂಥಗಳನ್ನು ಸಂಪಾದಿಸಿ, ಪ್ರಕಟಿಸಿದುದು ಬಹುದೊಡ್ಡ ಕೆಲಸ ಹಾಗೂ ವಿವಿಧ ಬಗೆಯ ನಿಘಂಟುಗಳನ್ನು ಪ್ರಕಟಿಸಿದುದು ಮಹತ್ವದ ಕೆಲಸ. ವಿದ್ಯಾರ್ಥಿಗಳಿಗೂ, ಸಾಮಾನ್ಯ ಜನರಿಗೂ ಬೇಕಾಗುವ ಸಣ್ಣ ನಿಘಂಟುಗಳನ್ನಲ್ಲದೆ, ಬೃಹತ್ ನಿಘಂಟುಗಳನ್ನು ಪ್ರೊ॥ ಎನ್. ಬಸವರಾಧ್ಯರವರ ಕಾಲದಲ್ಲಿ ಪರಿಷತ್ತು ಪ್ರಕಟಿಸಿದೆ. ಅದಕ್ಕೂ ಸರ್ಕಾರದಿಂದ ಧನಸಹಾಯ ಪಡೆದಿದೆ. ಹಾಗೂ ಆಗಿನ ಕಾಲದ ಪ್ರಸಿದ್ಧ ಸಾಹಿತಿಗಳು ಬರೆದ ಉತ್ತಮ ಪುಸ್ತಕಗಳನ್ನು ಪ್ರಕಟಿಸಿ ಕನ್ನಡ ನಾಡು ನುಡಿಯ ಸೇವೆ ಮಾಡಿದೆ. ಉತ್ತಮ ಗ್ರಂಥಗಳಿಗೆ ಬಹುಮಾನವನ್ನು ಕೊಡುವ ಯೋಜನೆಯನ್ನು ರೂಪಿಸಿದೆ. ಹೊಸ ಬರಹಗಾರರಿಗೆ ಪ್ರೋತ್ಸಾಹ ಕೊಟ್ಟು ಅವರನ್ನು ಬೆಳಕಿಗೆ ತಂದಿದೆ. ಇವೆಲ್ಲವು ಪ್ರಶಂಸನೀಯ ಕೆಲಸವೆ. ಮೇಲ್ಕಾಣಿಸಿದ ಈ ಜನರ ಕಣ್ಣಿಗೆ ಕಾಣುವ ಕೆಲಸವಲ್ಲದೆ ಜನರ ಕಣ್ಣಿಗೆ ಕಾಣದೆ ಇರುವ ಸಂಶೋಧನಾ ವಿಭಾಗವನ್ನು ಪ್ರಾರಂಭಿಸಿ ಕನ್ನಡ ಸಾಹಿತ್ಯಕ್ಕೆ ಉತ್ತಮ ಸೇವೆ ಸಲ್ಲಿಸಿದೆ. ಇದು ಸ್ಮರಣೀಯ.

ವ್ಯಕ್ತಿಯ ಜೀವನದಲ್ಲಿ ವೃದ್ಧಿ, ಕ್ಷಯಗಳಿರುವಂತೆ ಈ ಸಂಸ್ಥೆಯ ಇತಿಹಾಸದಲ್ಲಿಯೂ ಅಂಥ ವೃದ್ಧಿ, ಕ್ಷಯಗಳು ಕಂಡುಬಂದಿವೆ. ಉತ್ತಮ, ಪ್ರಾಮಾಣಿಕ ಪದಾಧಿಕಾರಿಗಳಿದ್ದಾಗ ಈ ಸಂಸ್ಥೆ ಅಗಾಧವಾದ ಕೆಲಸವನ್ನು ಮಾಡಿದೆ. ಸರಕಾರದಿಂದ ಆಗಬೇಕಾಗಿದ್ದ ಕೆಲಸಗಳನ್ನು ಸರ್ಕಾರದಿಂದಲೆ ಸವಿನಯ ಮಾರ್ಗದಿಂದ ಮಾಡಿಸಿದ ಯಶಸ್ಸು ಶ್ರೀ ಜಿ. ನಾರಾಯಣರು ಹಾಗೂ ಕೆಲವು ಅಧ್ಯಕ್ಷರ ಕಾಲದಲ್ಲಿ ನಡೆದಿದೆ. ಇದು ಪ್ರಶಂಸನೀಯವಾದ ಸಂಗತಿ. ಒಂದು ಕಾಲದಲ್ಲಿ ಈ ಸಂಸ್ಥೆ ತನ್ನ ಕರ್ತವ್ಯ ನಿರ್ವಹಣೆಯಲ್ಲಿ ಎಡವಿದಾಗ ಅಥವಾ ದಾರಿ ತಪ್ಪಿದಾಗ ಅದನ್ನು ಸರಿಪಡಿಸಲಿಕ್ಕಾಗಿ ಪ್ರಯತ್ನಗಳು ನಡೆದವು. ಉಚ್ಚನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಶಾಮಸುಂದರ್ ಆಯೋಗವನ್ನು ನೇಮಕ ಮಾಡಿ ಪರಿಷತ್ತಿನ ಆಡಳಿತೆಯನ್ನು ವಿಚಾರಣೆಗೆ ಒಳಪಡಿಸಲಾಗಿತ್ತು. ಅವರು ಮಾಡಿದ ವರದಿಯನ್ನು ಸರಕಾರ ಒಪ್ಪಿಕೊಂಡು, ಶ್ರೀ ಐ. ಎಂ. ವಿಠ್ಠಲಮೂರ್ತಿ ಅವರನ್ನು ಆಡಳಿತಾಧಿಕಾರಿಯಾಗಿ ನೇಮಕ ಮಾಡಿ ಈ ಸಂಸ್ಥೆಯ ಅಂಗರಚನೆಯನ್ನು, ನಿಯಮಾವಳಿಗಳನ್ನು ರೂಪಿಸಿ ತದನುಗುಣವಾಗಿ ಚುನಾವಣೆಗಳನ್ನು ನಡೆಸಿ ಸಂಸ್ಥೆಯನ್ನು ಪುನರುಜ್ಜೀವನಗೊಳಿಸಲಾಯಿತು. ಪರಿಷತ್ತು ಮುಂದುವರಿದಿದೆ.

ಈಗ ಪರಿಷತ್ತಿಗೆ ೨ ಲಕ್ಷಕ್ಕಿಂತ ಅಧಿಕ ಜನ ಆಜೀವ ಸದಸ್ಯರಿದ್ದಾರೆ. ಆ ಸದಸ್ಯರಲ್ಲಿ ಎಷ್ಟು ಜನರಿಗೆ ಈ ಸಂಸ್ಥೆಯ ಉದ್ದೇಶದ ಬಗ್ಗೆ ನಿಜವಾದ ಕಳಕಳಿ, ನಿಷ್ಠೆ, ಆಸಕ್ತಿ ಇದೆಯೊ ತಿಳಿಯದು. ಆದ್ದರಿಂದ ಈ ಸಂಸ್ಥೆಯ ಸದಸ್ಯರಾಗಲು ಇಚ್ಛಿಸುವವರಿಗೆ ಅರ್ಹತೆಯನ್ನು ನಿರ್ಧರಿಸಬೇಕು. ಕನ್ನಡ ಓದು ಬರಹ ಬಲ್ಲವರು ಸಂಸ್ಥೆಯ ಸದಸ್ಯರಾಗಬೇಕೆಂದು ಸಂಸ್ಥೆಯ ಉದ್ದೇಶವಿದ್ದರೂ, ಎಷ್ಟೊ ಸಹಸ್ರಾರು ಜನ ಕನ್ನಡ ಓದು ಬರಹ ಬಾರದವರನ್ನು ಅಭ್ಯರ್ಥಿಗಳು ಸದಸ್ಯರನ್ನಾಗಿ ನೋಂದಾಯಿಸಿದ್ದಾರೆ ಎಂದು ಕೇಳಿದ್ದೇನೆ. ಹೀಗಾದರೆ ಸಂಸ್ಥೆಯ ಮೂಲೋದ್ದೇಶವೆ ಭಗ್ನವಾಗುತ್ತದೆ. ಹೀಗೆ ಆಗಬಾರದೆಂಬ ಒಂದು ಸದುದ್ದೇಶದಿಂದ ಅಂಗರಚನೆಯಲ್ಲಿ ಸೂಕ್ತ ತಿದ್ದುಪಡಿ ತರುವುದು ಕ್ಷೇಮ.

ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಿಗರ ಏಕಮಾತ್ರ 'ಪ್ರಾತಿನಿಧಿಕ ಸಂಸ್ಥೆ'ಯೆಂದು ಪ್ರಚಾರದಲ್ಲಿದೆ. ಆದರೆ ಉತ್ತರ ಕರ್ನಾಟಕದ ಧಾರವಾಡದಲ್ಲಿರುವ ಕರ್ನಾಟಕ ವಿದ್ಯಾವರ್ಧಕ ಸಂಘ, ಹೈದ್ರಾಬಾದ ಕರ್ನಾಟಕದ ಅನೇಕ ಸಾಹಿತ್ಯ ಸಂಘಗಳು ಉತ್ತರ ಕರ್ನಾಟಕದಲ್ಲಿ ಅಮೋಘವಾದ ಕೆಲಸಗಳನ್ನು ಮಾಡಿವೆ. ಅದರಲ್ಲೂ ಹೈದ್ರಾಬಾದ ಕರ್ನಾಟಕದಲ್ಲಿರುವ ಧಾರ್ಮಿಕ ಮಠಗಳು ಅತ್ಯಂತ ಕಷ್ಟ ಸನ್ನಿವೇಶಗಳಲ್ಲಿ ಕನ್ನಡವನ್ನು ಉಳಿಸಿ ಬೆಳೆಸಿಕೊಂಡು ಬಂದಿವೆ. ಉತ್ತರ ಕರ್ನಾಟಕದ ಆ ಸಂಸ್ಥೆಗಳು ಬಹುಮಟ್ಟಿಗೆ ಸ್ವಾವಲಂಬನೆ ಯಿಂದಲೆ ಕೆಲಸ ಮಾಡುತ್ತಿವೆ. ಸರಕಾರದ ನೆರವಿನಿಂದಲೆ ಆ ಸಂಘ ಸಂಸ್ಥೆಗಳು ಕನ್ನಡವನ್ನು ಕಾಪಾಡಿಕೊಂಡು ಬಂದಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು ನೂರು ವರ್ಷಗಳ ತನಕ ಬದುಕಿದೆ, ಬಾಳಿದೆ, ಕನ್ನಡದ ಸೇವೆ ಮಾಡಿದೆ ಎಂಬುದು ಬಹುಮಟ್ಟಿಗೆ ಸರಕಾರದ ಧನ ಸಹಾಯದಿಂದಲೆ. ಎಲ್ಲಿಯವರೆಗೆ ಒಂದು ಸಂಸ್ಥೆ ಸಂಪೂರ್ಣವಾಗಿ ಸರ್ಕಾರದ ಸಹಾಯದಿಂದಲೆ, ಆಶ್ರಯದಿಂದಲೆ ಕೆಲಸ ಮಾಡಬೇಕಾಗುತ್ತದೆಯೋ ಅಲ್ಲಿಯ ತನಕ ಸರ್ಕಾರದ ಮರ್ಜಿಯಿಂದಲೆ ಬಾಳಬೇಕಾಗುತ್ತದೆ. ಆದರೆ ಈ ಕನ್ನಡ ಸಾಹಿತ್ಯ ಪರಿಷತ್ತು ಸರ್ಕಾರದ ಕೃಪಾಪೋಷಿತ ಸಂಸ್ಥೆಯಾಗಿಯೆ ಉಳಿದಿದೆ. ಈಗ ಈ ಪರಿಷತ್ತು ಮಾಡಿರಬಹುದಾದ ಕೆಲಸ, ಸಾಧಿಸಿರ ಬಹುದಾದ ಪ್ರಗತಿ ಬಹುಮಟ್ಟಿಗೆ ಸರ್ಕಾರದಿಂದಲೆ (ಸಹಾಯದಿಂದಲೆ) ಆಗಿದೆ. ಪರಿಷತ್ತಿನ ಪದಾಧಿಕಾರಿ ಗಳಿಗೂ, ಸಿಬ್ಬಂದಿಗಳಿಗೂ ಕೈ ತುಂಬಾ ಸಂಭಾವನೆ, ಸಂಬಳಕ್ಕೂ ಸರ್ಕಾರವನ್ನೆ ಅವಲಂಬಿಸಬೇಕಾಗಿದೆ.

ಪರಿಷತ್ತಿನ ಶತಮಾನೋತ್ಸವವನ್ನು ಪ್ರತಿ ಜಿಲ್ಲೆಯಲ್ಲೂ, ಪ್ರತಿ ತಾಲ್ಲೂಕಿನಲ್ಲಿಯೂ ಆಯೋಜಿಸ ಬೇಕೆಂದು, ಅದಕ್ಕಾಗಿ ಸರ್ಕಾರ ೧೦ ಕೋಟಿ ಧನಸಹಾಯ ಮಾಡಬೇಕೆಂದು ಬೇಡಿಕೆಯನ್ನಿಟ್ಟಿದ್ದಾರೆ ಎಂದು ಕೇಳಿದ್ದೇನೆ. ಪ್ರತಿ ಜಿಲ್ಲೆಯಲ್ಲಿ, ತಾಲ್ಲೂಕಿನಲ್ಲಿ ಶತಮಾನೋತ್ಸವವನ್ನು ಆಚರಿಸಬೇಕೆಂದಾದರೆ ಆಯಾ ಜಿಲ್ಲೆ, ತಾಲ್ಲೂಕಿನಲ್ಲಿರುವ ಕಾರ್ಯಕರ್ತರೆ ಸಂಪತ್ತನ್ನು ಕ್ರೋಡೀಕರಿಸಿ ಶತಮಾನೋತ್ಸವವನ್ನು ನೆರವೇರಿಸಬಹುದು.

**ಕೋ. ಚೆನ್ನಬಸಪ್ಪ**
ನಂ. ೧೨೨, ವೆಸ್ಟ್ ಆಫ್ ಕಾರ್ಡ್ ರೋಡ್
ರಾಜಾಜಿನಗರ
ಬೆಂಗಳೂರು – ೫೬೦ ೦೮೬

## ವಿಪರ್ಯಾಸ

ದಿನಕ್ಕೊಂದು
ಅಲಂಕಾರ
ದೇವರಿಗೆ
ಕಣ್ಣಿಗೆ ಹಬ್ಬ
ಭಕ್ತರಿಗೆ
ಹಣ ಸುರಿದು
ಬೀಳುತ್ತದೆ
ಮಂಗಳಾರತಿಯ
ತಣಿಗೆಗೆ
ಕರಗಿ ಚಿನ್ನವಾಗಿ
ಸೇರುತ್ತದೆ
ಅರ್ಚಕನ
ಕೊರಳಿಗೆ ಮತ್ತೆ
ಬೆರಳಿಗೆ

**ಡಾ॥ ಮುತ್ತುರಾಜು**
ಕುಮಾರಸ್ವಾಮಿ ಬಡಾವಣೆ ೨ನೇ ಹಂತ
ಬೆಂಗಳೂರು – ೫೬೦೦೭೮

ಇಲ್ಲಿನ ತಾಲೀಮುಗಳೆಂದರೆ ಹರಿದು ಚಿಂದಿಯಾದ ಕಿವಿಗಳದ್ದೇ ಒಂದು ಮಂದೆಯಿದ್ದಂತೆ. "ಒಬ್ಬ ಅಸಲಿ ಕುಸ್ತಿ ಪಟುವಿಗೆ ಹರಿದ ಕಿವಿ ಪ್ರಮಾಣ ಪತ್ರವಿದ್ದಂತೆ" ಎನ್ನುತ್ತ ಜೋರಾಗಿ ನಗುತ್ತಾರೆ ಹೆಸರಾಂತ ಪಟು, ಒಲಿಂಪಿಕ್ಸ್ ಆಟಗಾರ, ಗಣಪತ್ ರಾವ್ ಅಂದಾಲ್ಕರ್. ಹೆಚ್ಚಾಗಿ ಇಲ್ಲಿನ ಚಿಂದಿ ಕಿವಿಗಳ ವಾರಸುದಾರರು ಪಶ್ಚಿಮ ಮಹಾರಾಷ್ಟ್ರದ ಗ್ರಾಮಗಳಿಂದ ಬಂದ ರೈತರು, ಕಾರ್ಮಿಕರು ಹಾಗೂ ಕೆಲವೊಮ್ಮೆ ಶಾಲಾ ಶಿಕ್ಷಕರಾಗಿರುತ್ತಾರೆ.

ಪಿ. ಸಾಯಿನಾಥ್

# ಕುಸ್ತಿ ಎಂಬ ಸಾಮಾಜಿಕ ಸಮನ್ವಯದ ಸಂಕೇತ

ಶಾಲೆಯ ಪ್ರವೇಶದ್ವಾರದಲ್ಲೇ 'ತಾಲೀಮು' ಎಂಬ ಬೋರ್ಡಿದೆ. 'ಶಿಕ್ಷಣ' ಎನ್ನುವುದಕ್ಕೆ 'ತಾಲೀಮು' ಉರ್ದುವಿನ ಪರ್ಯಾಯ ಪದ. ಆದರೆ ಒಳಗಡಿಯಿಡುತ್ತಲೇ ನಿಮಗೆ ಮೊದಲು ದರ್ಶನವಾಗುವುದು ಇಲ್ಲಿನ ಪೈಲ್ವಾನರ ಆರಾಧ್ಯ ದೈವವಾದ ಹನುಮಂತನ ವಿಗ್ರಹ. ಸಂಸ್ಕೃತಿಯ ವೈವಿಧ್ಯತೆ ಇಂತಹ ಚಿಕ್ಕಪುಟ್ಟ ವಿಚಾರಗಳಲ್ಲೇ ಅಡಗಿರುತ್ತದೆ. ಪಶ್ಚಿಮ ಮಹಾರಾಷ್ಟ್ರದಲ್ಲಿ ಕುಸ್ತಿ ಕಲಿಸುವ ಶಾಲೆಗಳನ್ನು ನಮ್ಮಂತೆ 'ಅಖಾಡ'ಗಳೆನ್ನದೆ, ತಾಲೀಮುಗಳೆಂದೇ ಕರೆಯುತ್ತಾರೆ. ಸುಮಾರು ನೂರು ವರ್ಷಗಳ ಹಿಂದೆ, ಸ್ವಾತಂತ್ರ್ಯಪೂರ್ವ ಅಖಂಡ ಪಂಜಾಬಿನಲ್ಲಿದ್ದ 'ತಾಲೀಮು'ಗಳಿಂದ ಸ್ಫೂರ್ತಿ ಪಡೆದ ಇವು, ಮತ್ತೆ ಅಂದಿನ ಪರಂಪರೆಯನ್ನೇ ಮುಂದುವರಿಸುತ್ತಿವೆಯೇನೋ ಅನ್ನಿಸುತ್ತದೆ. ಪಂಜಾಬಿನ ಪ್ರಭಾವ ತೀರ ಹೆಚ್ಚಿದ್ದು, ಕೊಲ್ಹಾಪುರವನ್ನು ಆಳುತ್ತಿದ್ದ ಪ್ರಗತಿಪರ ದೊರೆ ಶಾಹು ಮಹಾರಾಜರ ಕಾಲದಲ್ಲಿ. ಅವರು ಸ್ವತಃ ಕುಸ್ತಿ ಪ್ರಿಯರಾಗಿದ್ದು, ದೇಶದೆಲ್ಲೆಡೆಯಿಂದ, ಅದರಲ್ಲೂ ಹೆಚ್ಚಾಗಿ ಪಂಜಾಬಿನಿಂದ ಕುಸ್ತಿಪಟುಗಳನ್ನು ಕೊಲ್ಹಾಪುರಕ್ಕೆ ಆಹ್ವಾನಿಸುತ್ತಿದ್ದರು.

ಇಂದಿಗೂ ಪಶ್ಚಿಮ ಮಹಾರಾಷ್ಟ್ರದಲ್ಲಿ ನಡೆಯುವ ದೊಡ್ಡ ಪಂದ್ಯಾವಳಿಗಳಲ್ಲಿ, ಪಾಕಿಸ್ತಾನ, ಇರಾನ್, ಟರ್ಕಿ ಮತ್ತು ಹಲವು ಆಫ್ರಿಕನ್ ದೇಶಗಳ ಘಟಾನುಘಟಿ ಕುಸ್ತಿಪಟುಗಳನ್ನು ಕಾಣಬಹುದು. ಹಿಂದು ಪ್ರಾಬಲ್ಯವಿರುವ ಇಲ್ಲಿನ ವೀಕ್ಷಕರ ನಡುವೆ ಪಾಕಿಸ್ತಾನಿ ಹಾಗೂ ಇರಾನಿ ಪಟುಗಳ ದೊಡ್ಡ ಅಭಿಮಾನಿ ಪಡೆಯೇ ಇಲ್ಲಿದೆ. ಕೊಲ್ಹಾಪುರದ ಶಾಸಕ ವಿನಯ್ ಕೋರೆ ಹೇಳುವಂತೆ, "ಹೊರಗಿನ ಕುಸ್ತಿಪಟುಗಳನ್ನು ಕಂಡು ಇಲ್ಲಿಯವರು ಮಂತ್ರಮುಗ್ಧರಾಗಿಬಿಡುತ್ತಾರೆ." ಇಲ್ಲಿನ ಪ್ರಮುಖ ಸಹಕಾರಿ ಸಕ್ಕರೆ ಕಾರ್ಖಾನೆ ಮತ್ತು ಹಾಲಿನ ಡೈರಿ ಮುಖ್ಯಸ್ಥರಾಗಿರುವ ಕೋರೆಯವರು ಪ್ರತಿ ವರ್ಷ ಡಿಸೆಂಬರ್ ೧೩ರಂದು ರಾಜ್ಯಮಟ್ಟದ ಕುಸ್ತಿ ಪಂದ್ಯಾವಳಿಯೊಂದನ್ನು ಇಲ್ಲಿ ನಡೆಸುತ್ತಾರೆ. ಅದು ನಡೆಯುವುದು ಕೊಲ್ಹಾಪುರದಲ್ಲಿರುವ, ಮಹಾರಾಷ್ಟ್ರದಲ್ಲೇ ಅತಿ ದೊಡ್ಡ ಕುಸ್ತಿ ಮೈದಾನವನ್ನು ಹೊಂದಿರುವ, ವರಾನ ನಗರದಲ್ಲಿ. ಕೋರೆಯವರು ಹೇಳುವಂತೆ, "ಪ್ರತಿ ವರ್ಷ ಸುಮಾರು ಮೂರು ಲಕ್ಷ ಜನ ಇಲ್ಲಿ ಸೇರುತ್ತಾರೆ. ಕೆಲವೊಮ್ಮೆ ಆಟಗಾರರ ವೀಸಾಗಳದ್ದೇ ದೊಡ್ಡ ಸಮಸ್ಯೆಯಾಗುತ್ತದೆ. ಒಮ್ಮೆಯಂತೂ ಪಾಕಿಸ್ತಾನದವರ ವೀಸಾಗಳು ತಡವಾಗಿ ಬಂದ ಕಾರಣ, ಅವರು ಇಸ್ಲಾಮಾಬಾದಿನಿಂದ ದೆಹಲಿಗೆ, ಮತ್ತಲ್ಲಿಂದ ಪುಣೆಗೆ ವಿಮಾನದಲ್ಲಿಯೇ ಬರಬೇಕಾಯ್ತು. ಕೊನೆಗೆ, ಪುಣೆಯಿಂದ ಕಾರಿನಲ್ಲಿ ನಾವೇ ಅವರನ್ನು ವರಾನಕ್ಕೆ ಕರೆತಂದೆವು. ಇಷ್ಟೆಲ್ಲಾ ಮುಗಿಯಲು ಹನ್ನೆರಡು–ಹದಿಮೂರು ಘಂಟೆಗಳೇ ಹಿಡಿದರೂ ಲಕ್ಷಗಟ್ಟಲೆ ಜನ ಅವರಿಗಾಗಿ ತಾಳ್ಮೆಯಿಂದ ಕಾಯುತ್ತಲೇ ಇದ್ದರು."

'ತಾಲೀಮು'ಗಳಲ್ಲಿ ಕುಸ್ತಿ ಗುರುಗಳು ಜಾತ್ಯತೀತತೆ, ಧರ್ಮನಿರಪೇಕ್ಷತೆ ಮತ್ತು ಆಧ್ಯಾತ್ಮಿಕತೆಗಳನ್ನು ಒಗ್ಗೂಡುವಂತೆ ನೈತಿಕ ಶಿಕ್ಷಣವನ್ನೂ ನೀಡುತ್ತಾರೆ. ಹಲವು ಶಿಕ್ಷಕರು ಇಲ್ಲಿ ವಿದ್ಯಾರ್ಥಿಗಳಿಗೆ ಪೈಲ್ವಾನ್ ಗಾಮಾನನ್ನು ಉದಾಹರಣೆಯಾಗಿ ನೀಡುತ್ತಾರೆ. ಸೋಲನ್ನೇ ಕಾಣದ ಆತ, ಜಗತ್ತಿನ ಶ್ರೇಷ್ಠ



ಪೈಲ್ವಾನನಾಗಿದ್ದ. ಗುಲಾಮ್ ಮೊಹಮ್ಮದನಾಗಿ ಪಂಜಾಬಿನಲ್ಲಿ ಹುಟ್ಟಿ, ೧೯೪೭ರ ದೇಶವಿಭಜನೆಯ ನಂತರ ಪಾಕಿಸ್ತಾನದಲ್ಲಿಯೇ ನೆಲೆ ನಿಂತ. ವಿಭಜನೆಯ ಸಮಯದಲ್ಲಿ, ಕೋಮುಗಲಭೆಯ ನಡುವೆ, ನೆರೆಯ ಹಿಂದು ಬಡಾವಣೆಗೆ ದಂಗೆಕೋರರು ನುಗ್ಗದಂತೆ ಆತ ಸ್ವತಃ ತಾನೇ ನಿಂತು ತಡೆದಿದ್ದನಂತೆ. 'ಪೈಲ್ವಾನನಿದ್ದರೆ ಗಾಮಾನಂತಿರಬೇಕು' ಎನ್ನುವುದು ಇಲ್ಲಿ ಮನೆಮಾತಾಗಿದೆ.

ಮಹಾರಾಷ್ಟ್ರದ ಖ್ಯಾತ ಕುಸ್ತಿ ಪಟು, ಈಗ ಕೊಲ್ಹಾಪುರದಲ್ಲೇ ತಾಲೀಮನ್ನು ನಡೆಸುತ್ತಿರುವ, ಅಪ್ಪಾಸಾಹೇಬ್ ಕದಂ ಕುಸ್ತಿ ಪಟುವಿಗೆ ಸಿಗಬೇಕಾದ ನೈತಿಕ ಶಿಕ್ಷಣದ ಮಹತ್ವವನ್ನು ಮತ್ತೆ ಮತ್ತೆ ಒತ್ತಿ ಹೇಳುತ್ತಾರೆ. "ನೈತಿಕತೆ ಇಲ್ಲದ ಪಟು ಒಂದು ಅನಾಹುತವೇ ಸರಿ" ಎನ್ನುವುದು ಅವರ ಅಭಿಪ್ರಾಯ. ಬೇರೆ ಕೆಲವು ರಾಜ್ಯಗಳಲ್ಲಿರುವಂತೆ ಇಲ್ಲಿನ ಪೈಲ್ವಾನರ ಬಗ್ಗೆ ಯಾವುದೇ ಕೆಟ್ಟ ಅಭಿಪ್ರಾಯಗಳು ಇಲ್ಲದಿರುವುದು ಗಮನಾರ್ಹ.

ಈ ಆಟ ಮತ್ತು ಪಂದ್ಯಾವಳಿಗಳ ದೆಸೆಯಿಂದ ಸುತ್ತಲೂ ಒಂದು ರೀತಿಯ ಉದಾರತೆ ಮತ್ತು ಸತ್ಕಾರ ಮನೋಭಾವವೂ ಬೆಳೆದುಕೊಂಡಿವೆ. ಕುಂಡಲ ಅಥವಾ ವರಾನ ನಗರಗಳಲ್ಲಿ ದೊಡ್ಡ ಪಂದ್ಯಾವಳಿಗಳು ನಡೆಯುವಾಗ ಬರುವ ಲಕ್ಷಾಂತರ ಮಂದಿಗೆಂದು ಪ್ರತಿ ಮನೆಗಳಲ್ಲೂ ಊಟ, ತಿಂಡಿಗಳೂ ತಯಾರಾಗುತ್ತವೆ.

ಇಲ್ಲಿನ ತಾಲೀಮುಗಳೆಂದರೆ ಹರಿದು ಚಿಂದಿಯಾದ ಕಿವಿಗಳದ್ದೇ ಒಂದು ಮಂದೆಯಿದ್ದಂತೆ. "ಒಬ್ಬ ಅಸಲಿ ಕುಸ್ತಿ ಪಟುವಿಗೆ ಹರಿದ ಕಿವಿ ಪ್ರಮಾಣ ಪತ್ರವಿದ್ದಂತೆ" ಎನ್ನುತ್ತ ಜೋರಾಗಿ ನಗುತ್ತಾರೆ ಹೆಸರಾಂತ ಪಟು, ಒಲಿಂಪಿಕ್ಸ್ ಆಟಗಾರ, ಗಣಪತ್ ರಾವ್ ಅಂದಾಲ್ಕರ್. ಹೆಚ್ಚಾಗಿ ಇಲ್ಲಿನ ಚಿಂದಿ ಕಿವಿಗಳ ವಾರಸುದಾರರು ಪಶ್ಚಿಮ ಮಹಾರಾಷ್ಟ್ರದ ಗ್ರಾಮಗಳಿಂದ ಬಂದ ರೈತರು, ಕಾರ್ಮಿಕರು ಹಾಗೂ ಕೆಲವೊಮ್ಮೆ ಶಾಲಾ ಶಿಕ್ಷಕರಾಗಿರುತ್ತಾರೆ.

ಪುಣೆಯಲ್ಲಿ ತಾಲೀಮನ್ನು ನಡೆಸುತ್ತಿರುವ ಕಾಕಾ ಪವಾರ್ ಏಷಿಯಾಡ್, ಕಾಮನ್‌ವೆಲ್ತ್ ಮತ್ತು ರಾಷ್ಟ್ರಮಟ್ಟದ ಹಲವು ಪದಕಗಳನ್ನು ಗೆದ್ದವರು. ಅವರೆನ್ನುವಂತೆ, "ಕುಸ್ತಿ, ಕಬ್ಬಿನ ಗದ್ದೆ ಮತ್ತು ತಮಾಷ (ಸಾಂಪ್ರದಾಯಿಕ ಮರಾಠಿ ಜಾನಪದ–ನಾಟಕ ಶೈಲಿ) – ಇವು ಮೂರೂ ಒಂದಕ್ಕೊಂದು ಸಂಬಂಧಪಟ್ಟಿವೆ. ಅದು ಹೇಗಂತೀರಾ ? ಇವೆಲ್ಲದರ ಮೂಲದಲ್ಲಿರುವುದು ಮುಖ್ಯ ಆಟಗಾರನ ಶಿಸ್ತು ಮತ್ತು ಜನ ಬೆಂಬಲ."

ಕುಸ್ತಿಯ ವೀಕ್ಷಕರಲ್ಲಿ ಈಗಲೂ ಹಿಂದುಗಳ ಪ್ರಾಬಲ್ಯವೇ ಇದ್ದರೂ, ಆಟಗಾರರಲ್ಲಿ ಇತ್ತೀಚಿನ ದಿನಗಳಲ್ಲಿ ವೈವಿಧ್ಯತೆ ಕಂಡುಬರುತ್ತಿದೆ. ಮರಾಠ ಪ್ರಾಬಲ್ಯವಿದ್ದ ಆಟದಲ್ಲಿ ಈಗೀಗ 'ಧಂಗಾರ್' ಕುಟುಂಬಗಳಿಂದಲೂ (ಕುರುಬರು) ಪಟುಗಳು ಬರುತ್ತಿದ್ದಾರೆ. ಕುಸ್ತಿಯಲ್ಲಿ ಮುಂಚೂಣಿಯಲ್ಲಿರುವ ಶೋಲಾಪುರ ಜಿಲ್ಲೆಯಲ್ಲೀಗ ಮುಸ್ಲಿಮ್ ಯುವಕರೂ ಗೆದ್ದು ಬರುತ್ತಿದ್ದಾರೆ.

ಮಹಾರಾಷ್ಟ್ರದ ಕುಸ್ತಿ ಗುರುಗಳು ಸದಾ ಗಂಭೀರ ಚರ್ಚೆ, ಸಂವಾದಗಳಲ್ಲಿ ತೊಡಗಿರುತ್ತಾರೆ. ಆಗೊಮ್ಮೆ ಈಗೊಮ್ಮೆ ಒಲಿಂಪಿಕ್ಸ್‌ನಿಂದ ಕುಸ್ತಿಯನ್ನು ಕೈಬಿಡಬಹುದೇ ಎಂಬ ಚರ್ಚೆ ತಲೆ ಎತ್ತಿದರೆ, ಅವರು ಏಕ್‌ದಂ ಅಂಥ ವಾದಗಳನ್ನು ತಳ್ಳಿಹಾಕುತ್ತಾರೆ. ಕದಂ ಹೇಳುವಂತೆ, "ಬರೀ ಮೂವತ್ತು ದೇಶಗಳಾಡುವ ಕ್ರೀಡೆಗಳನ್ನೆಲ್ಲಾ ಇಟ್ಟುಕೊಂಡಿರುವಾಗ, ನೂರಿಪ್ಪತ್ತೆರಡು ದೇಶಗಳಲ್ಲಿ ಸಂಸ್ಕೃತಿಯಾಗಿರುವ ಕುಸ್ತಿಯನ್ನು ಮುಟ್ಟಲು ಸಾಧ್ಯವೇ ?"



## ಬ್ರೇಕಿಂಗ್ ನ್ಯೂಸ್

ಎಲ್ಲೆಲ್ಲೂ ಇಣುಕಿ<br>
ಖಾಸಗಿತನದ ಕತ್ತು ಹಿಸುಕಿ<br>
ಬೀಗಲು ಹೊರಟಿವೆ<br>
ಬ್ರೇಕಿಂಗ್ ನ್ಯೂಸ್‌ಗೆ<br>
ಜೀವ ಕರುಣಿಸುವ ಜೀವಗಳು.<br>
ಸಾಯುವವರ ಎದೆಯ ನೋವು,<br>
ಅಗಲಿಕೆಯ ಕಾವು<br>
ಟಿಆರ್‌ಪಿ ಗಳಿಕೆಗೆ<br>
ಸತ್ವಯುತ ಸರಕುಗಳು.<br>
ಜಗದ ತಪ್ಪುಗಳಿಗೆ<br>
ಕನ್ನಡಿ ಹಿಡಿಯಲು ಹೊರಟವರು,<br>
ಅಮಾನವೀಯ ಅಧ್ಯಾಯಗಳಿಗೆ<br>
ಬೆನ್ನುಡಿ ಬರೆಯುತ್ತ ಹೋದರೆ<br>
ಮನುಷ್ಯತ್ವದ ಮುನ್ನುಡಿ<br>
ದಯಪಾಲಿಸುವವರಾರು?

**ಎಚ್. ಕೆ. ಶರತ್**
ವಿವೇಕಾನಂದ ರಸ್ತೆ, ವಿದ್ಯಾನಗರ, ಹಾಸನ–೫೭೩೨೦೧

ಅವರಿಗೆ ಚಿಂತೆಯಿರುವುದು ಮಹಾರಾಷ್ಟ್ರದಲ್ಲಿನ ಕುಸ್ತಿಯ ಹಣೆಬರಹದ ಬಗ್ಗೆ. ನಾವು ಭೇಟಿಯಾದ ಪಟುಗಳು, ಭೇಟಿ ನೀಡಿದ ತಾಲೀಮುಗಳಲ್ಲೆಲ್ಲಾ ಇದೇ ಚರ್ಚೆಯಾಗುತ್ತಿತ್ತು – ವೇಗವಾಗಿ ನಗರೀಕರಣಗೊಳ್ಳುತ್ತಿರುವ ಮಹಾರಾಷ್ಟ್ರಕ್ಕಿಂತ ಇನ್ನೂ ಕೃಷಿಯನ್ನು ನೆಚ್ಚಿಕೊಂಡಿರುವ ಪಂಜಾಬ್ ಮತ್ತು ಹರ್ಯಾಣಗಳಲ್ಲಿ ಕುಸ್ತಿ ಒಂದು ಸಂಸ್ಕೃತಿಯಾಗಿ ಉಳಿದಿದೆ.

ಒಬ್ಬ ಶಿಕ್ಷಕ ನುಡಿದಂತೆ, "ಅಲ್ಲಿ ಕುಸ್ತಿ ಪಟುವಾಗಿದ್ದರೆ ಪೊಲೀಸ್ ಅಥವಾ ರಕ್ಷಣಾ ಇಲಾಖೆಯಲ್ಲಾದರೂ ಕೆಲಸ ಗಿಟ್ಟಿಸಬಹುದು. ಇಲ್ಲಿ ಕುಸ್ತಿ ಬಿಟ್ಟರೆ ಕಟ್ಟಡ ಕಾರ್ಮಿಕರಾಗಬೇಕಷ್ಟೆ." ಅದೂ ನಿಜವೇ. ಇಲ್ಲಿನ ಹಲವಾರು ಪ್ರತಿಭಾನ್ವಿತ ಕುಸ್ತಿ ಪಟುಗಳು ಸಕ್ಕರೆ ಕಾರ್ಖಾನೆಗಳಲ್ಲಿ ವಾಚ್‌ಮನ್‌ಗಳಾಗಿ ಕೆಲಸ ಮಾಡಿದ ನಿದರ್ಶನವಿದೆ.

ರಾಜಕಾರಣಿಗಳು ಇಲ್ಲಿನವರಿಗೆ ಅವಕಾಶವಾದಿಗಳಂತೆ ಕಾಣುತ್ತಾರೆ. "ಕುಸ್ತಿ ಜನರನ್ನು ಸೆಳೆಯುತ್ತದೆ ಎನ್ನುವ ಒಂದು ಕಾರಣಕ್ಕೆ ಅವರೂ ಬರುತ್ತಿದ್ದರು. ಆದರೀಗ ಕ್ರೀಡಾ ಫೆಡರೇಶನ್‌ಗಳ ಅಧ್ಯಕ್ಷರಾಗುವ ಅವಕಾಶ ಸಿಕ್ಕಿದ ಮೇಲೆ ಆಟದ ಪ್ರಯೋಜನವಿಲ್ಲ. ಈ ರಾಜ್ಯದ ಕುಸ್ತಿ ಫೆಡರೇಶನ್ನಿನ ಅಧ್ಯಕ್ಷ, ಕೇಂದ್ರ ಸಚಿವ ಶರದ್ ಪವಾರ್‌ರವರು. ಅವರಿಗದರ ನೆನಪಿದ್ದರೆ ಅದೇ ದೊಡ್ಡದು" ಎನ್ನುತ್ತಾರೆ ಒಬ್ಬ ಸಂಚಾಲಕ. ಇನ್ನಿಬ್ಬರು ಮಾಜಿ ಪಟುಗಳು ಶಾಸಕರಾದ ಮೇಲೆ ಇತ್ತ ಕಡೆ ತಿರುಗಿಯೂ ನೋಡಿಲ್ಲ.

ಸಮಾಜ ಮತ್ತು ಸಂಸ್ಕೃತಿಗಳಲ್ಲಾಗುತ್ತಿರುವ ಬದಲಾವಣೆ, ಕಾಣೆಯಾಗುತ್ತಿರುವ ಸಣ್ಣ ಹಿಡುವಳಿದಾರರು, ಮರುಕಳಿಸುತ್ತಿರುವ ನೀರಿನ ಸಮಸ್ಯೆ ಮತ್ತು ಸರ್ಕಾರದ ನಿರ್ಲಕ್ಷ್ಯದಿಂದ ಗ್ರಾಮೀಣ ಪ್ರದೇಶದಲ್ಲಿ ಆಳವಾಗಿ ಬೇರುಬಿಟ್ಟಿರುವ ಕ್ರೀಡಾ ಸಂಸ್ಕೃತಿ ಈಗ ವೇಗವಾಗಿ ಮರೆಯಾಗುತ್ತಿದೆ. ಅಂದಾಲ್ಕರ್ ಮಾತಿನಲ್ಲಿ ಹೇಳುವುದಾದರೆ "ಒಬ್ಬ ಕುಸ್ತಿ ಪಟುವಿನ ಬದುಕು ಯಾರಿಗೂ ಕಾಣದಂತೆ ಮಾಡುವ ತಪಸ್ಸಿನಂತೆ. ಒಬ್ಬ ಕ್ರಿಕೆಟಿಗನಿಗೆ ಪುಟ್ಟ ಗಾಯವಾದರೆ ಮಾಧ್ಯಮದವರು ದಿನಗಟ್ಟಲೆ ಅದರ ಕುರಿತೇ ಚರ್ಚಿಸುತ್ತಾರೆ. ಒಬ್ಬ ಕುಸ್ತಿ ಪಟು ಸತ್ತರೆ, ಅವನಿಗೆ ಏನಾಗಿತ್ತೆಂದು ಕೇಳುವವರೂ ಇರುವುದಿಲ್ಲ."

*(ಪಿ. ಸಾಯಿನಾಥ್‌ರ 'Kushti : The Secular and the Syncretic' ಎಂಬ ಲೇಖನದ ಅನುವಾದ)*

ಮೂಲ : **ಪಿ. ಸಾಯಿನಾಥ್** ಕನ್ನಡಕ್ಕೆ : **ಸಾಕ್ಷಿ**
ನಂ. ೩೧, ವೆಂಕಟೇಶ್ವರ ನಿಲಯ
೭ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ೧೨ನೇ ಬ್ಲಾಕ್
ನಾಗರಭಾವಿ ಎಕ್ಸ್‌ಟೆನ್ಷನ್, ಬೆಂಗಳೂರು – ೫೬೦ ೦೭೨

**ಡಾ|| ಜಯಪ್ರಕಾಶ್ ಶೆಟ್ಟಿ ಹೆಚ್.**

# ಅತ್ಯಾಚಾರವೂ ಅತಿರಂಜಿತ ಪ್ರಚಾರವೂ...

ಇತ್ತೀಚೆಗೆ ನಾವಿರುವ ಕರ್ನಾಟಕ ಸುರಕ್ಷಿತವಲ್ಲವೇ ? ಅಥವಾ ನಾವೆಲ್ಲರೂ ಕೀಚಕರೇ ? ಕರ್ನಾಟಕದ ತುಂಬೆಲ್ಲಾ ಅನಾಥ ಸೈರಂಧ್ರಿಯರೇ ತುಂಬಿದ್ದಾರೆಯೇ ? ಎಂದೆಲ್ಲಾ ಆತಂಕಪಡುವಂತಾಗಿದೆ. ಯಾಕೆಂದರೆ ಕರ್ನಾಟಕವನ್ನು ಕುರಿತು ಈವರೆಗೆ ಕಂಡಿರದ 'ಕರಾಳ ಕರ್ನಾಟಕ', 'ಕೀಚಕ ಕರ್ನಾಟಕ' 'ಕಾಮುಕ ಕರ್ನಾಟಕ' ಎಂಬ ಸಾಮೂಹಿಕ ನೆಲೆಯ ಅನಾಗರಿಕ ನಾಮಫಲಕಗಳು ಈ ಅವಧಿಯಲ್ಲಿ ರಾರಾಜಿಸಿದುವು. ಆಳುವ ಸರ್ಕಾರ ಮತ್ತು ಪೊಲೀಸ್ ವ್ಯವಸ್ಥೆ ಎರಡೂ ಸೇರಿಕೊಂಡು ಕರ್ನಾಟಕವನ್ನು ಹೀಗೆ ಕುಲಗೆಡಿಸಿ ಸಂಭ್ರಮಿಸುತ್ತಿವೆ ಎಂಬ ಅರ್ಥ ಬರುವ ಚರ್ಚಾಗೋಷ್ಠಿಗಳನ್ನೂ, ಬೀದಿ ಮಾತುಗಳನ್ನೂ ಜನರ ಕಿವಿಯ ಮೇಲೆ ಹಾಕುವ ಯತ್ನ ನಡೆಯಿತು. ಇಡಿಯ ಪ್ರಚಾರದಲ್ಲಿ ಕರ್ನಾಟಕದಲ್ಲಿ ಇದೇ ಮೊದಲ ಬಾರಿಗೆ ಹೆಣ್ಣಿನ ಮೇಲೆ ದಾಳಿ ನಡೆಯುತ್ತಿದೆ ಎಂಬ ವರಸೆ ಇತ್ತು. ಎಲ್ಲವನ್ನೂ ಅತ್ಯಾಚಾರದ ಕಣ್ಣೋಟದಲ್ಲಿಯೇ ಮಾರಾಟ ಮಾಡಿದ ಆ ವೇಗದಲ್ಲಿ ಮಾಧ್ಯಮಗಳ ಟಿಆರ್‌ಪಿ ಕಡೆಗಿನ ಧಾವಂತವೂ ನಿಚ್ಚಳವಾಗಿತ್ತು. ಆದರೆ ಈ ಎಲ್ಲಾ ಅಬ್ಬರದ ಪ್ರಚಾರಗಳು ಮನೆಯಿಂದ ಹೊರಹೋಗಿ ಬರುವ ತಮ್ಮದೇ ಮಕ್ಕಳನ್ನು ಅನುಮಾನ ಮತ್ತು ಭಯದಿಂದ ಎದುರುಗೊಳ್ಳುವ ವಾತಾವರಣ ನಿರ್ಮಾಣ ಮಾಡಿದ್ದರೆ ಅಚ್ಚರಿಯಿಲ್ಲ. ಯಾಕೆಂದರೆ ಆ ಒಟ್ಟೂ ಪ್ರಚಾರವು ಕರ್ನಾಟಕವನ್ನು ಹೆಣ್ಣಿನ ಬದುಕಿಗೆ ಅನರ್ಹವಾದ ನೆಲವಾಗಿಸಿದ್ದವು. ಇನ್ನೊಂದು ಕಡೆ ಈ ಬೊಬ್ಬೆಯನ್ನೇ ಅಪೇಕ್ಷಿಸಿದ ಆ ಕೆಲವು ಸ್ಥಾಪಿತ ಹಿತಾಸಕ್ತಿಗಳು ಹೆಣ್ಣಿನ ಮಾನ ಮತ್ತು ಪ್ರಾಣದ ರಕ್ಷಣೆಯ ಹೊಣೆಯನ್ನು ಆವಾಹಿಸಿಕೊಂಡು ಕುಣಿದಂತೆಯೂ ಭಾಸವಾಯಿತು. ಇದೇ ಹೊತ್ತಿಗೆ ನಿಧಾನವಾಗಿ ಒಂದೆರಡು ಖೊಟ್ಟಿ ಅತ್ಯಾಚಾರ ಪ್ರಕರಣಗಳನ್ನು ಕುರಿತ ಮಾಹಿತಿಗಳೂ ಮೂಡಿಬಂದುವು. ಹೆಣ್ಣೂರಿನ ಅತ್ಯಾಚಾರದ ಸುತ್ತ ಇರುವ ಅನುಮಾನವೋ, ಬೆಳಗಾವಿಯ ಯುವಕ–ಯುವತಿಯರ ಕಿಡ್ನ್ಯಾಪ್ ತಮಾಷೆಯೋ, ಬೆಂಗಳೂರಿನ ಜ್ಯೋತಿಷಿಯ ಕಪಾಳಕ್ಕೆ ಬಾರಿಸಿದ ಮಹಿಳೆಯರ ಆಟೋಪವೋ ಸುದ್ದಿಯಾಗಿ ಸತ್ಯದ ಇನ್ನೊಂದು ಮುಖದ ಆಂಶಿಕ ದರ್ಶನವೂ ಆದುದುಂಟು. ಆದರೆ ಅಷ್ಟೊತ್ತಿಗಾಗಲೇ ಇಡಿಯ ಕರ್ನಾಟಕಕ್ಕೆ ಆಗಬೇಕಾದ ಅಪಮಾನ ಆಗಿಹೋಗಿತ್ತು. ಕರ್ನಾಟಕದ ನೆಲಕ್ಕೆ ಸಲ್ಲದ ಅಪನಾಮವೊಂದು ಅಂಟಿಯಾಗಿತ್ತು.

ಈ ಅಬ್ಬರದ ಪ್ರಚಾರ, ಪ್ರತಿಕ್ರಿಯೆಗಳೆಲ್ಲವನ್ನು ಬದಿಗಿರಿಸಿ ನೋಡಿದಾಗಲೂ ಲೈಂಗಿಕ ಆಕ್ರಮಣದ ಮಾದರಿಯ ಘಟನಾವಳಿಗಳ ಸರಣಿಯು ಯಾವ ನಾಗರಿಕ ಸಮಾಜಕ್ಕೂ ಗೌರವ ತರುವಂಥದ್ದಲ್ಲ.

ಅತ್ಯಾಚಾರ ಆಕ್ರಮಣದ ಬಲಿಪಶುಗಳೆನಿಸಿದವರ ಮುಖಭಾಗವನ್ನಷ್ಟೇ ಒಂದಿಷ್ಟು ಮಸುಕುಮಾಡಿ, ಅವರುಟ್ಟ ಸೀರೆ, ಬಟ್ಟೆ , ಬದುಕುವ ಆವರಣವೆಲ್ಲವನ್ನು ಎಗ್ಗಿಲ್ಲದೆ ತೋರಿಸುವಲ್ಲಿ ಹೊಣೆಗೇಡಿತನವೇ ವಿಜೃಂಭಿಸಿದೆ. ಕ್ಯಾಮರಾ ಕಣ್ಣಿರುವುದೇ ಎಲ್ಲವನ್ನೂ ತೋರಿಸಿಬಿಡಲು ಎಂದು ನಿರ್ಧರಿಸಿಕೊಂಡಂತೆ ಸುದ್ದಿಯನ್ನು ರೋಚಕಗೊಳಿಸುವ ಭರದಲ್ಲಿ ಇವು ಹುಟ್ಟುಹಾಕುತ್ತಿರುವ ಸಾಮಾಜಿಕ ಸಮಸ್ಯೆ ಹಾಗೂ ಕಾನೂನು ಸುವ್ಯವಸ್ಥೆಯ ಆತಂಕಗಳು ಭಯಹುಟ್ಟಿಸುತ್ತವೆ. ಈ ಕುರಿತು ಮಾಧ್ಯಮಗಳು ಆತ್ಮಾವಲೋಕನ ಮಾಡಿಕೊಂಡಂತೆ ಕಾಣದು. ಇನ್ನು ಈ ಮಾಧ್ಯಮಗಳ ದೈನಿಕ ವರ್ತನೆ ಹೇಗಿದೆ ? ಅವು ವಿಜ್ಞಾನದ ಉತ್ಪನ್ನಗಳಾಗಿ, ವಿಜ್ಞಾನವು ಅಗತ್ಯವಾಗಿ ಅಪೇಕ್ಷಿಸುವ ಮನೋಧರ್ಮವನ್ನು ಅಳವಡಿಸಿಕೊಂಡಿವೆಯೇ ? ಪ್ರಜಾಪ್ರಭುತ್ವದ ಇರುವಿಕೆಯ ಕುರುಹುಗಳಲ್ಲೊಂದಾಗಿ ಪ್ರಜಾಪ್ರಭುತ್ವಕ್ಕೆ ಬೇಕಾದ ಪಾರದರ್ಶಕತೆ, ನಿಷ್ಪಕ್ಷಪಾತ ನಡವಳಿಕೆಯನ್ನು ಅವು ಪಾಲಿಸುತ್ತಿವೆಯೇ ? ಈ ಪ್ರಶ್ನೆಗಳನ್ನು ನಾವು ಅಗತ್ಯವಾಗಿ ಕೇಳಿಕೊಳ್ಳಬೇಕಿದೆ. ಯಾಕೆಂದರೆ ದಿನಬೆಳಗಾದರೆ ಜನರ ಮೆದುಳಿಗೆ ವೈಚಾರಿಕತೆಯ ಬದಲು ಮೌಢ್ಯ, ಕ್ರೌರ್ಯ, ಸೋಗಲಾಡಿತನದ ಕಸವನ್ನು ತುಂಬಿಸುತ್ತಿರುವುದು ಇದೇ ಮಾಧ್ಯಮಗಳು.



ಅದನ್ನು ಖಂಡಿಸಿ ದಂಡಿಸುವುದಲ್ಲದೆ ಅದು ಮತ್ತೆ ಸಂಭವಿಸದಂತೆ ತಡೆಯುವುದು ಗೌರವಯುತ ಬಾಳು ಬಾಳಲು ಬಯಸುವ ಎಲ್ಲರ ಕರ್ತವ್ಯ. ಅಂತಹ ಘಟನೆಗಳನ್ನು ತಹಬಂದಿಗೆ ತರುವಲ್ಲಿ ಒಂದು ಸಮೂಹವಾಗಿ ಎಲ್ಲರೂ ಒಟ್ಟಿಗೆ ಸೇರಿಕೊಳ್ಳಬೇಕಾದ ಜವಾಬ್ದಾರಿಯೂ ನಮಗಿದೆ. ಅತ್ಯಾಚಾರವೆಂಬ ಅನಾಗರಿಕ ವರ್ತನೆ ಇಂದು ಹೊಸತಾಗಿ ನಡೆಯುತ್ತಿಲ್ಲ ಎಂಬ ಸಮರ್ಥನೆಯೂ ಇಲ್ಲಿ ಸಲ್ಲದು. ಅನಾದಿಯಿಂದ ನಡೆದು ಬಂದುದೇ ಆಗಿದ್ದರೂ ಆ ಕುರಿತ ಎಚ್ಚರಕ್ಕಾಗಿಯೇ ಈ ಎಲ್ಲಾ ಪ್ರಚಾರಗಳು ನಡೆಯುವುದಾದಲ್ಲಿ ಅದು ಸ್ವಾಗತಾರ್ಹವೇ. ಆದರೆ ಆ ವಿರೋಧವು ಯಾರನ್ನೋ ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿ ಇನ್ನಾರನ್ನೋ ಅದರ ಫಲಾನುಭವಿಯಾಗಿಸುವ ವಾಸನೆಯಿಂದ ಕೂಡಿರಬಾರದು. 'ಹೆಣ ಇಟ್ಟುಕೊಂಡು 'ಹಗ್ಗೆ' ಹುಡುಕಿದ ಹಾಗೆ ಆಗಬಾರದು' ('ಹಗ್ಗೆ' – ಚನ್ನೆಮಣೆಯಾಟದಲ್ಲಿ ಬಳಕೆಯಾಗುವ ಲಾಭದ ಪರಿಭಾಷೆ). ಇದು ಆಟದ ಹೊತ್ತೂ ಅಲ್ಲ. ಆಟದ ವಿಚಾರವೂ ಅಲ್ಲ. ಇಲ್ಲಿ ಪಕ್ಷವೈರ, ಅಧಿಕಾರದ ಕುರಿತಾದ ಅಸಹನೆ ಖಂಡಿತಾ ಸಲ್ಲದು. ಮಧ್ಯರಾತ್ರಿ ಹನ್ನೆರಡರ ಅವಧಿಗೂ ಹೆಣ್ಣೊಬ್ಬಳು ನಿರ್ಭೀತಳಾಗಿ ಸಾಗಬಹುದಾದ ಭಾರತ ನಮ್ಮದಾಗಬೇಕೆಂಬುದು ಬಾಪೂ ಕಂಡ ಕನಸು. ನಾವು ಕಾಡಿಬೇಡಿ ಪಡೆದ ಸ್ವಾತಂತ್ರ್ಯದೊಳಗೆ ಆ ಆಶಯವೂ ಇದೆ. ಅದು ಕಾಣೆಯಾಗುತ್ತಿದ್ದರೆ ನಮ್ಮ ಸ್ವಾತಂತ್ರ್ಯದ ಭಾಗವೊಂದನ್ನು ನಾವು




ಕಳೆದುಕೊಳ್ಳುತ್ತಿದ್ದೇವೆ ಎಂದೇ ಅರ್ಥ. ಇಂತಹದ್ದೊಂದು ಎಚ್ಚರವನ್ನು ಜತನದಿಂದ ಕಾಪಾಡುವುದು ತಿಳುವಳಿಕೆಯನ್ನು ಹಂಚುವ ಹಾಗೂ ತಿಳುವಳಿಕೆಯ ಪ್ರತಿನಿಧಿಗಳೆನಿಸಿದ ಎಲ್ಲ ಕೇಂದ್ರಗಳು ಹಾಗೂ ವ್ಯಕ್ತಿಗಳ ಕರ್ತವ್ಯ. ಆದರೆ ಈ ಜವಾಬ್ದಾರಿಯನ್ನು ಮೂಡಿಸಬೇಕಾದ ಮಾಧ್ಯಮಗಳು ಹೇಗೆ ವರ್ತಿಸಿದುವು? ಸಮೂಹದ ನಾಗರಿಕ ಸ್ವಾಸ್ಥ್ಯವನ್ನು ತಮ್ಮದೇ ನೈತಿಕ ಮಾದರಿಯಿಂದ ಎತ್ತರಿಸಬೇಕಾದ ಹೊಣೆಗಾರಿಕೆ ಇರುವವರು ತಾವು ಈಗಾಗಲೇ ನಡೆದು ತೋರಿದ ದಾರಿಯನ್ನು ಮರೆತು ಮಾತನಾಡಿದ ಬಗೆಯನ್ನು ನೆನೆದರೆ ನೋವೆನಿಸುತ್ತದೆ. ಅರಿವು ಮೂಡಿಸುವಂತೆ ವರ್ತಿಸುವುದಾಗಿ ಹೇಳಿಕೊಂಡ ಮಾಧ್ಯಮಗಳಾಗಲೀ, ಕಾವಲುಗಾರನಂತೆ ಕಾವಲು ಕಾಯಬೇಕಾದ ರಾಜಕಾರಣವಾಗಲೀ ತಮ್ಮ ಆತ್ಮಾವಲೋಕನಕ್ಕೆ ಅವಕಾಶ ಮಾಡಿಕೊಂಡಂತೆ ಕಾಣಿಸಲೇ ಇಲ್ಲ. ಕನಿಷ್ಠ ಈ ನಾಡಿನ ಚರಿತ್ರೆಯ ಮೂಲಸೆಲೆಗಳ ಅರಿವಿನ ಸೆಳಕು ಕೂಡ ಅಲ್ಲಿ ಸುಳಿದಂತೆ ಕಾಣಲಿಲ್ಲ.

ಕರ್ನಾಟಕವನ್ನು ಕೀಚಕರ ಆಡುಂಬೊಲ ಎಂಬಂತೆ ಒಂದೇ ಸೊಲ್ಲಿಗೆ ಹೆಸರಿಸಿಬಿಡುವ ಧಾವಂತ ತೋರಿದ ಈ ಮಾಧ್ಯಮಗಳಿಗೆ, ಈ ನಾಡು ತಮ್ಮ ಸೀಮಿತ ವ್ಯಾಪ್ತಿಯಲ್ಲಿಯೇ ಪುರುಷ ದೌರ್ಜನ್ಯಕ್ಕೆ ದಿಟ್ಟ ಉತ್ತರವನ್ನು ಕೊಟ್ಟ ಹೆಮ್ಮಕ್ಕಳ ಸ್ಮೃತಿಯಿಂದಲೂ ಕೂಡಿದೆ ಎನಿಸಿದಂತಿರಲಿಲ್ಲ. ಸೀರೆಯ ಮಡಿಕೆ ಕಳೆದುದಕ್ಕೆ ಗಂಡನನ್ನು ತರಾಟೆಗೆ ತೆಗೆದುಕೊಳ್ಳಬಲ್ಲ ಕರಾವಳಿಯ ಸಿರಿ; ಅನುಮಾನಕ್ಕೆ ಬಲಿಯಾಗಿ ಶೀಲ ಕಾಯ್ದುಕೊಳ್ಳುವ ಭಾಷೆಗೆ ಆಗ್ರಹಿಸಿದ ಗಂಡನನ್ನೇ ಮೀರಬಲ್ಲ ಮಲೆಮಹದೇಶ್ವರದ ಸಂಕವ್ವ; 'ಸಾವಕೆಡುವ ಗಂಡರನ್ನು ಒಲೆಯೊಳಗಿಕ್ಕು'ವಂತೆ ಆರ್ಭಟಿಸಿದ ಮಹಾದೇವಿಯಕ್ಕನಂಥವರ ಸ್ಮೃತಿಯನ್ನು ಬಚ್ಚಿಟ್ಟುಕೊಂಡ ನಾಡು ನಮ್ಮದು ಎಂಬ ಅರಿವೂ ಕೂಡ ಆದಂತಿರಲಿಲ್ಲ.

ಇದು ಅಬಲೆಯರ ನಾಡಲ್ಲ. ತಾಯ್ತನದ ದಟ್ಟ ಚಹರೆಯೊಂದಿಗೆ ಹೆಣ್ತನಕ್ಕೆ ಹೊರೆಯಾಗುವ ಅನೇಕ ಅನಿಷ್ಟಗಳಿಂದ ತನ್ನನ್ನು ಮುಕ್ತವಾಗಿಸಿಕೊಂಡ ನಾಡೂ ಆಗಿತ್ತು. ಕನ್ಯಾಮಾತೆಯರನ್ನೂ ಗೌರವಿಸುವ ಆಚರಣೆಗಳನ್ನೂ ತನ್ನ ಒಡಲಲ್ಲಿ ಬಚ್ಚಿಟ್ಟುಕೊಂಡ ಈ ನಾಡು, ವಿಧವಾ ವಿವಾಹವನ್ನು ಯಾವುದೇ ಸಂಕೋಚವಿಲ್ಲದೆ ಸೀರುಡಿಕೆ, ಕೂಡಾವಳಿಯೆಂಬ ಸರಳ ನೆಲೆಯಲ್ಲಿ ಆಚರಿಸಿಕೊಂಡು ಬಂದ ಇತಿಹಾಸವುಳ್ಳದ್ದೂ ಆಗಿದೆ. ಇಂತಹ ಸಾಂಸ್ಕೃತಿಕ ಚರಿತ್ರೆಯುಳ್ಳ ನಾಡಿನ ಸಾಂಸ್ಕೃತಿಕ ವಿನ್ಯಾಸವು ಉಜ್ವಲವಾಗಿ ಹಾಗೆಯೇ ಉಳಿದಿದೆಯೆಂದಲ್ಲ. ಪರಂಪರೆಯ ಈ ವಿನ್ಯಾಸವನ್ನು ನಿಸ್ತೇಜಗೊಳಿಸುತ್ತಿರುವ ಶಕ್ತಿಗಳು ಸಾಂಸ್ಕೃತಿಕ ವಸಾಹತೀಕರಣ ಹಾಗೂ ಆಧುನಿಕತೆಯ ರೂಪದಲ್ಲಿ ಕ್ರಿಯಾಶೀಲವಾಗಿಯೇ ಇವೆ. ಹಾಗಿದ್ದೂ ಕರ್ನಾಟಕದ ಸಂಸ್ಕೃತಿ ಎಂದಿಗೂ ಕೀಚಕ ಸಂಸ್ಕೃತಿ ಆಗಿಲ್ಲ. ಸೀರೆ ಎಳೆದು ಸಂಭ್ರಮಿಸುವುದು ಕನ್ನಡ ನೆಲದ ಯಾವ ಮಹಾಕಾವ್ಯದ ವಸ್ತುವೂ ಅಲ್ಲ. ಗಂಡನಾದವನು ತಂದ ಸೀರೆಯ ಮಡಿಕೆಯನ್ನು ಸೂಳೆಸಿದ್ದು ಕಳೆದುದನ್ನು ಗುರುತಿಸಿ, ಗಂಡನನ್ನೇ ಆತನ ನೈತಿಕ ದೋಷಕ್ಕಾಗಿ ಧಿಕ್ಕರಿಸಬಲ್ಲ ಹೆಣ್ತನದ ಚರಿತೆ ಈ ನೆಲದ ಮಹಾಕಾವ್ಯ. ನಾಡಿನುದ್ದಕ್ಕೂ ಇರುವ ಶಾಸನಗಳು, ವೀರಗಲ್ಲುಗಳು ಹೆಣ್ಣಿನ ಮಾನಕ್ಕಾಗಿ ಬಲಿಯಾದವರ ಕಥನಗಳನ್ನು ಸಾರುತ್ತವೆ. ಹೀಗೆ ಹೆಣ್ಣನ್ನು ಹೊತ್ತೊಯ್ದ ಕಥೆಯನ್ನೋ, ಹೆಣ್ಣಿನ ಸೀರೆ ಎಳೆದ ಕಥೆಯನ್ನೋ ನೆಲದ ಕಥನವಾಗಿ ಹೊಂದಿರದ ನಾಡೊಂದನ್ನು ಕೀಚಕರ ನಾಡೆಂದು ಹೇಗೆ ಕರೆಯಲಾದೀತು ?

ಈ ಸಾಂಸ್ಕೃತಿಕ ಹಿನ್ನೆಲೆಯೊಂದಿಗೆ ನಾಡೊಂದರ ಕುರಿತ ಅಪನಾಮಕ್ಕೆ ಆಕ್ಷೇಪವೆತ್ತುವ ನಡುವೆ ಅತ್ಯಾಚಾರದಂತಹ ಹೆಣ್ತನದ ಮೇಲಿನ ಪುರುಷಾಕ್ರಮಣವನ್ನು ನಿರ್ಲಕ್ಷಿಸಲಾಗದು. ಹಾಗೆಯೇ ಅತ್ಯಾಚಾರದಂತಹ ಸಾಮಾಜಿಕ ಪಿಡುಗಿನಂತಹ ಒಂದು ಘಟನೆ ಘಟಿಸಿದಲ್ಲದೆ, ಅದು ಪೊಲೀಸ್ ವ್ಯವಸ್ಥೆಯಂತಹ ತನಿಖಾಸಂಸ್ಥೆಯ ಸುಪರ್ದಿಗೆ ಬರಲಾರದೆಂಬುದೂ ನಮಗೆ ಅರ್ಥವಾಗಬೇಕು. ಎಷ್ಟೋ ವೇಳೆ ಘಟನೆ ಜರುಗಿದ ನಂತರವೂ ಅದು ತನಿಖಾಸಂಸ್ಥೆಯ ವ್ಯಾಪ್ತಿಗೆ ಬಾರದೆಯೂ ಉಳಿಯಬಹುದು. ಜೊತೆಗೆ ಘಟನೆಯ ಬಳಿಕ ಶಾಸನಾತ್ಮಕ ರಕ್ಷಣೆ ಪಡೆಯುವ ಬಲಿಪಶುಗಳ ಬದುಕು

## ಅಭಿನಂದನೆಗಳು

ಕುವೆಂಪು ಭಾಷಾ ಭಾರತಿ ಪ್ರಾಧಿಕಾರವು ಶ್ರೇಷ್ಠ ಅನುವಾದಕ್ಕಾಗಿ ನೀಡುವ ಗೌರವ ಪ್ರಶಸ್ತಿ ಮತ್ತು ಅನುವಾದ ಪ್ರಶಸ್ತಿಗಳನ್ನು ಕೆಳಕಂಡಂತೆ ನೀಡಿದೆ.

**ಶ್ರೀ ಚಂದ್ರಕಾಂತ ಪೋಕಳೆ**
೨೦೧೩–೧೪ನೇ ಸಾಲಿನ ಗೌರವ ಪ್ರಶಸ್ತಿ
ಇವರು ನವಕರ್ನಾಟಕ ಪ್ರಕಾಶನಕ್ಕಾಗಿ ಮರಾಠಿಯಿಂದ ಹಲವಾರು ಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

**ಡಾ॥ ಆರ್. ಪೂರ್ಣಿಮಾ**
೨೦೧೨ರ ಅನುವಾದ ಪ್ರಶಸ್ತಿ
ನವಕರ್ನಾಟಕ ಪ್ರಕಾಶನದ 'ಒಂದು ಜೀವನ ಸಾಲದು' ಕೃತಿಗಾಗಿ
*(ಇಂಗ್ಲಿಷ್ ಮೂಲ : ಕುಲದೀಪ್ ನಯ್ಯರ್)*

**ಡಾ॥ ಗೀತಾ ಶೆಣೈ**
೨೦೧೨ರ ಅನುವಾದ ಪ್ರಶಸ್ತಿ
ನವಕರ್ನಾಟಕ ಪ್ರಕಾಶನದ 'ಕಮಲಾದೇವಿ ಚಟ್ಟೋಪಾಧ್ಯಾಯ' ಕೃತಿಗಾಗಿ
*(ಕೊಂಕಣಿ ಮೂಲ : ಡಾ॥ ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್)*

**ಶ್ರೀ ಎಂ. ಅಬ್ದುಲ್ ರೆಹಮಾನ್ ಪಾಷ**
೨೦೧೦–೧೧ರ ಅನುವಾದ ಪ್ರಶಸ್ತಿ
ನ್ಯಾಷನಲ್ ಬುಕ್ ಟ್ರಸ್ಟ್‌ನ 'ಬಂಡಾಯ ೧೮೫೭' ಕೃತಿಗಾಗಿ
*(ಇಂಗ್ಲಿಷ್ ಮೂಲ : ಪಿ. ಸಿ. ಜೋಶಿ)*

ಪ್ರಶಸ್ತಿ ಪುರಸ್ಕೃತರನ್ನು ನವಕರ್ನಾಟಕ ಹಾಗೂ ಹೊಸತು ಪತ್ರಿಕಾ ಬಳಗ ಅಭಿನಂದಿಸುತ್ತದೆ.

ಮೂರಾಬಟ್ಟೆಯಾಗಬಹುದಾದ ಸಾಧ್ಯತೆಯೂ ಹೆಚ್ಚು. ಹಾಗಾಗಿ ಇದರ ನಿಯಂತ್ರಣಕ್ಕೆ ಎರಡು ನೆಲೆಯ ಕ್ರಿಯಾಗತಿಗಳು ಮುಖ್ಯವಾಗುತ್ತವೆ. ಅದರಲ್ಲಿ ಸಮುದಾಯದ ಮನಸ್ಥಿತಿಯನ್ನು ಘಟನೆಗಳೇ ಘಟಿಸದಂತೆ ತಡೆಯುವ ಮನಸ್ಥಿತಿಯಾಗಿ ರೂಪಿಸಲು ಯತ್ನಿಸುವುದು ಮೊದಲಿನದು. ಇದು ಮಾಧ್ಯಮ ಮತ್ತು ರಾಜಕಾರಣವೂ ಸೇರಿದಂತೆ ಒಟ್ಟು ಸಮುದಾಯದ ಹೊಣೆ. ಇದು ಒಂದೆರಡು ದಿನಗಳಲ್ಲಿ ಸಾಧ್ಯವಾಗಿ ಬಿಡುವ ಸಾಧನೆಯಲ್ಲ. ಯಾವುದೇ ಸರ್ಕಾರವೊಂದು ಸ್ವಯಂ ಸಾಧಿಸಿಬಿಡಬಹುದಾದ ಯಶಸ್ಸೂ ಅಲ್ಲ. ಇಲ್ಲಿ ಸಮೂಹದ ಭಾಗವಹಿಸುವಿಕೆ ಮತ್ತದರ ಸಾಮಾಜಿಕ ಪ್ರಾಮಾಣಿಕತೆ ಬಹಳ ಮುಖ್ಯ. ಹೀಗಾಗಬೇಕಾದರೆ ಇದನ್ನು ರಾಜಕೀಯ ಸಮಸ್ಯೆಯಾಗಿ ನೋಡದೆ ಸಾಮಾಜಿಕ ಸಮಸ್ಯೆಯಾಗಿ, ಯಾರ ಮನೆಗಾದರೂ ಹತ್ತಿಕೊಳ್ಳಬಹುದಾದ ಬೆಂಕಿಯಾಗಿಯೇ ಪರಿಭಾವಿಸಬೇಕಿದೆ. ಹೊರಗೆ ನಿಂತು ಕಲ್ಲು ಹೊಡೆಯುವುದು ಸರ್ವಥಾ ಉಚಿತವಲ್ಲ. ಈ ಸಮಸ್ಯೆಯನ್ನು ನಿಭಾಯಿಸಬೇಕಾದ ಸಾಂಸ್ಥಿಕ ವ್ಯವಸ್ಥೆಯ ಮನೋಸ್ಥೈರ್ಯ ಕೆಡಿಸುವ ಕೆಲಸವಾಗಲೇ ಬಾರದು. ಅದು ಅಪಾಯಕಾರಿಯಾದ ಪರಿಣಾಮವನ್ನು ಉಂಟುಮಾಡಬಲ್ಲುದು. ಕಾನೂನನ್ನು ಕೈಗೆತ್ತಿಕೊಳ್ಳುವ ಬೇಜವಾಬ್ದಾರಿ ಹೇಳಿಕೆಗಳಂತೂ ಅನಾಹುತಕಾರಿ.

ಇನ್ನು ಎರಡನೆಯದಾಗಿ, ಸಮುದಾಯ ಸ್ಮೃತಿಯ ಸಾಂಸ್ಕೃತಿಕ ಎಳೆಗಳ ಮೂಲಕ ಹೆಣ್ಣುಮಕ್ಕಳಲ್ಲಿ ಮನೋಸ್ಥೈರ್ಯ ತುಂಬಿ ಸಮಾಜದ ತಪ್ಪುಗ್ರಹಿಕೆಗಳನ್ನು ತಿದ್ದುವ ಕೆಲಸ ಆಗಬೇಕಿದೆ. ನಾಡಿನ ಸಾಂಸ್ಕೃತಿಕ ಪರಂಪರೆಯ ಜೀವಪರ ಎಳೆಗಳನ್ನು ಮುಂಚೂಣಿಗೆ ತಂದು, ಸಮೂಹದ ದನಿಗಳನ್ನು ಬಲವರ್ಧನೆಗೊಳಿಸುವ ಮೂಲಕ ಇದನ್ನು ಸಾಧಿಸಲು ಸಾಧ್ಯವೂ ಇದೆ. ಅಕಸ್ಮಾತ್ತಾಗಿ ಸಂಭವಿಸಿದ ಕ್ಷುಲ್ಲಕ ಘಟನೆ ಹೆಣ್ಣೊಬ್ಬಳ ಬದುಕನ್ನೇ ಆಪೋಶನ ತೆಗೆದುಕೊಳ್ಳುವ ಅನಾಹುತವೆಂದು ನಿರ್ಧರಿಸಿಬಿಡುವ ಸಾಮಾಜಿಕ ಆವರಣವನ್ನು ಈ ಮೂಲಕ ಪರಿವರ್ತನೆಗೆ ಒಗ್ಗಿಸಲು ಸಾಧ್ಯವಿದೆ. ಆಕ್ರಮಣಕ್ಕೆ ಪ್ರತಿಯಾದ ಸ್ವಾವಲಂಬಿ ಮನಸ್ಥಿತಿಯನ್ನು ಹೆಣ್ಣುಮಕ್ಕಳಲ್ಲಿ ತುಂಬಲು ಸಾಧ್ಯವಿದೆ. ಈ ಮನಸ್ಥಿತಿಯನ್ನು ಕಟ್ಟಲು ಬೇಕಿರುವುದು ನಾಡಿನ ಚರಿತ್ರೆಯ ಅರಿವು. ಈ ಮೂಲಕ ಮದುವೆಯಾಗದೆ ಲೈಂಗಿಕ ಸಂಪರ್ಕಕ್ಕೆ ಒಳಪಡುವ, ಗರ್ಭ ಧರಿಸುವ ಹೆಣ್ಣನ್ನು ಒಂದು ಹೊರೆಯಾಗಿ, ತ್ಯಾಜ್ಯವಾಗಿ ಪರಿಭಾವಿಸುವ ಸಾಮಾಜಿಕ ಮನಸ್ಥಿತಿಗೆ ಚಿಕಿತ್ಸೆ ಸಾಧ್ಯವಿದೆ. ಪ್ರತೀ ಜೀವಿಗೂ ಗೌರವದಿಂದ ಬದುಕುವ ಹಕ್ಕಿದೆ. ಹೆಣ್ಣಿನ ಪಾಲಿಗೆ ಅಂತಹ ಗೌರವದ ಬದುಕನ್ನು ಎಷ್ಟೋ ಬುಡಕಟ್ಟುಗಳು ಆಚರಣೆಗಳಂತೆಯೇ ಇಲ್ಲಿ ಅನುಸರಿಸಿಕೊಂಡು ಬಂದಿವೆ. ಅನೇಕ ಬುಡಕಟ್ಟು ಸಮುದಾಯಗಳಲ್ಲಿರುವ 'ಕನ್ಯಾಮಾತೆ'ಯ ಕಲ್ಪನೆ ಇದಕ್ಕೊಂದು ಅತ್ಯುತ್ತಮ ಉದಾಹರಣೆ. ಮದುವೆಯಾಗದೆ ಗರ್ಭ ಧರಿಸುವ ಹೆಣ್ಣು ದೂಷಿತೆಯಾಗದೆ 'ಕನ್ಯಾಮಾತೆ' ಎಂಬ ಪವಿತ್ರ ಸ್ಥಾನದಲ್ಲಿ ಗೌರವಿಸಲ್ಪಡುವ ಆಚರಣೆಯಿದು (ಹಾಗೆ ನೋಡಿದರೆ ಕುಂತಿಯೂ ಒಬ್ಬ ಕನ್ಯಾಮಾತೆಯೇ ಅಲ್ಲವೇ?). ಇನ್ನು ವಿಧವೆ ಎನ್ನುವ ಪದವನ್ನೇ ನಿರಾಕರಿಸಿಕೊಂಡ ಮಾತೃಪ್ರಧಾನ ಪರಂಪರೆಯ 'ಸೀರುಡಿಕೆ' ಆಚರಣೆ ಈ ದಿಸೆಯಲ್ಲಿ ಹೆಣ್ಣಿನ ಗೌರವದ ಬದುಕಿಗೆ ಇನ್ನೊಂದು ವಿಸ್ತರಣೆಯನ್ನೇ ಒದಗಿಸಿದೆ. ಇಲ್ಲಿ ಗಂಡನನ್ನು ಕಳೆದುಕೊಂಡ ಹೆಣ್ಣೊಬ್ಬಳಿಗೆ ತನ್ನ ಯೌವನಕ್ಕೆ ತಕ್ಕುದಾದ ಇನ್ನೊಂದು ಸಂಬಂಧವನ್ನು ಸಹಜವಾಗಿ ಹೊಂದಲು ಅವಕಾಶವಿದೆ. ಇಲ್ಲೆಲ್ಲಾ ಲೈಂಗಿಕತೆಯ ಕುರಿತ ಅತಿಸೂಕ್ಷ್ಮ ವಿಶ್ಲೇಷಣೆ ಇಲ್ಲ, ಮದುವೆ ಎನ್ನುವ ಸಂಸ್ಥೆಯ ಅತಿವೈಭವೀಕರಣವೂ ಇಲ್ಲ. ಇಂತಹ ಆಚರಣೆಗಳು ಈ ನೆಲದ ಸಂಸ್ಕೃತಿ ಹೆಣ್ಣನ್ನು ತ್ಯಾಜ್ಯವೆಂದು ಪರಿಗಣಿಸದಿರುವುದರ ಸಾಕ್ಷಿಗಳು. ಇಲ್ಲಿ ಅವಳೊಂದು ಅನುಭೋಗದ ವಸ್ತುವಷ್ಟೇ ಅಲ್ಲ, ತಾಯಿಯಾಗಿಯೂ ಗೌರವಾರ್ಹಳು. ಇಂತಹ ಸಮುದಾಯ ಸ್ಮೃತಿಯ ಅರಿವಿನ ಮೂಲಕವೂ ಹೆಣ್ಣಿನ ಕುರಿತಾದ ಸಾಮಾಜಿಕ ಮನಸ್ಥಿತಿಯನ್ನು ಗುಣಾತ್ಮಕವಾಗಿ ಬದಲಿಸಲು ಸಾಧ್ಯವಿದೆ. ಇದು ನಿಜಕ್ಕೂ ಆಗಬೇಕಾದ ಕೆಲಸ.

ಇವೆಲ್ಲವನ್ನೂ ಮರೆತು ಕರ್ನಾಟಕವನ್ನು ಸಾರ್ವಜನಿಕವಾಗಿ ಅಪಮಾನಿಸುವ ಹಾಗೆ ಕೂಗು ಹಾಕಿದ ಮಾಧ್ಯಮಗಳ ವಿಚಾರಕ್ಕೆ ಬಂದರೆ ಸಹಜವಾಗಿಯೆ ಆತಂಕವೆನಿಸುತ್ತದೆ. ಯಾಕೆಂದರೆ ಸುದ್ದಿ ಮಾಡುವಾಗ ವ್ಯಕ್ತಿಯ ಖಾಸಗಿತನದ ಗೌರವವನ್ನು ಕಾಪಾಡುವ ನೆಲೆಯಲ್ಲಿ ವಹಿಸಬೇಕಾದ ಎಚ್ಚರವೇ ಇಲ್ಲಿ ಸಂಪೂರ್ಣವಾಗಿ ನಾಪತ್ತೆಯಾಗಿದೆ. ಅತ್ಯಾಚಾರ ಆಕ್ರಮಣದ ಬಲಿಪಶುಗಳೆನಿಸಿದವರ ಮುಖಭಾಗವನ್ನಷ್ಟೇ ಒಂದಿಷ್ಟು ಮಸುಕುಮಾಡಿ, ಅವರುಟ್ಟ ಸೀರೆ, ಬಟ್ಟೆ, ಬದುಕುವ ಆವರಣವೆಲ್ಲವನ್ನು ಎಗ್ಗಿಲ್ಲದೆ ತೋರಿಸುವಲ್ಲಿ ಹೊಣೆಗೇಡಿತನವೇ ವಿಜೃಂಭಿಸಿದೆ. ಕ್ಯಾಮರಾ ಕಣ್ಣಿರುವುದೇ ಎಲ್ಲವನ್ನೂ ತೋರಿಸಿಬಿಡಲು ಎಂದು ನಿರ್ಧರಿಸಿಕೊಂಡಂತೆ ಸುದ್ದಿಯನ್ನು ರೋಚಕಗೊಳಿಸುವ ಭರದಲ್ಲಿ ಇವು ಹುಟ್ಟುಹಾಕುತ್ತಿರುವ ಸಾಮಾಜಿಕ ಸಮಸ್ಯೆ ಹಾಗೂ ಕಾನೂನು ಸುವ್ಯವಸ್ಥೆಯ ಆತಂಕಗಳು ಭಯಹುಟ್ಟಿಸುತ್ತವೆ. ಈ ಕುರಿತು ಮಾಧ್ಯಮಗಳು ಆತ್ಮಾವಲೋಕನ ಮಾಡಿಕೊಂಡಂತೆ ಕಾಣದು. ಇನ್ನು ಈ ಮಾಧ್ಯಮಗಳ ದೈನಿಕ ವರ್ತನೆ ಹೇಗಿದೆ? ಅವು ವಿಜ್ಞಾನದ ಉತ್ಪನ್ನಗಳಾಗಿ, ವಿಜ್ಞಾನವು ಅಗತ್ಯವಾಗಿ ಅಪೇಕ್ಷಿಸುವ ಮನೋಧರ್ಮವನ್ನು ಅಳವಡಿಸಿ ಕೊಂಡಿವೆಯೇ? ಪ್ರಜಾಪ್ರಭುತ್ವದ ಇರುವಿಕೆಯ ಕುರುಹುಗಳಲ್ಲೊಂದಾಗಿ ಪ್ರಜಾಪ್ರಭುತ್ವಕ್ಕೆ ಬೇಕಾದ ಪಾರದರ್ಶಕತೆ, ನಿಷ್ಪಕ್ಷಪಾತ ನಡವಳಿಕೆಯನ್ನು ಅವು ಪಾಲಿಸುತ್ತಿವೆಯೇ? ಈ ಪ್ರಶ್ನೆಗಳನ್ನು ನಾವು ಅಗತ್ಯವಾಗಿ ಕೇಳಿಕೊಳ್ಳಬೇಕಿದೆ. ಯಾಕೆಂದರೆ ದಿನಬೆಳಗಾದರೆ ಜನರ ಮೆದುಳಿಗೆ ವೈಚಾರಿಕತೆಯ ಬದಲು ಮೌಢ್ಯ, ಕ್ರೌರ್ಯ, ಸೋಗಲಾಡಿತನದ ಕಸವನ್ನು ತುಂಬಿಸುತ್ತಿರುವುದು ಇದೇ ಮಾಧ್ಯಮಗಳು. ವಿಜ್ಞಾನದ ಸಾಧನಗಳಾಗಿಯೂ ಅವು ಮೌಢ್ಯ, ಹಿಂಸೆ ಮತ್ತು ಕಾಮವನ್ನು ಹಸಿಹಸಿಯಾದ ರೋಚಕ ಕಥನಗಳನ್ನಾಗಿಸಿ ಬೀದಿಯಲ್ಲಿ ಬಿಕರಿಗಿಟ್ಟಿವೆ. ಈ ಅರ್ಥದಲ್ಲಿ ಸಾಮಾಜಿಕ ಸ್ವಾಸ್ಥ್ಯದ ಕುರಿತು ಮಾತನಾಡುವ ನೈತಿಕತೆಯನ್ನು ಅವು ಎಂದೋ ಕಳೆದುಕೊಂಡಿವೆ. ತಾವು ತಂದು ತುಂಬುತ್ತಿರುವ ಕಸ ಹಾಗೂ ಕರ್ನಾಟಕದ ಸಾಂಸ್ಕೃತಿಕ ಬೇರುಗಳ ಪರಿಚಯವೆರಡನ್ನೂ ಮರೆತು ಅವು ಕರ್ನಾಟಕ ಕೆಟ್ಟೇ ಹೋಗಿದೆ ಎಂದು ಕೂಗುತ್ತಿವೆ. ಕರ್ನಾಟಕ ಕೆಟ್ಟಿದ್ದರೆ ಅದು ನಮ್ಮೆಲ್ಲರಿಂದ ಕೆಟ್ಟಿದೆ. ಅದನ್ನು ಸರಿಮಾಡುವ ಹೊಣೆ ಎಲ್ಲರ ಮೇಲೆಯೂ ಇದೆ. ಈ ಆತ್ಮಾವಲೋಕನ ಮಾಧ್ಯಮ ಮತ್ತು ಸಮೂಹಗಳೆರಡರಲ್ಲೂ ಉಂಟಾಗ ಬೇಕಾದುದು ನಾಡಿನ ನಾಳೆಗಾಗಿ ಅಗತ್ಯವಿದೆ.

ಇನ್ನು ರಾಜಕಾರಣದ ವಿಚಾರವನ್ನು ಗಮನಿಸುವುದಾದರೆ, ಅಧಿಕಾರದಲ್ಲಿ ಇಲ್ಲದಿರುವುದು ಆಪಾದನೆ ಮಾಡುವುದಕ್ಕೆ ರಹದಾರಿಯಾಗಬಾರದು. ಅಧಿಕಾರದಲ್ಲಿ ಇರುವವರು ಸಮರ್ಥಿಸಿಕೊಳ್ಳುವುದನ್ನಷ್ಟೇ ಮಾಡಬಾರದು. ಅರ್ಭಟಿಸುವುದಷ್ಟೇ ಸಾರ್ವಜನಿಕ ಕಾಳಜಿಯ ಸಂಕೇತವಲ್ಲ. ಅಧಿಕಾರದಲ್ಲಿ ಇರುವಾಗ ಮತ್ತು ಅಧಿಕಾರದಿಂದ ಹೊರಗಿರುವಾಗ ಸಾರ್ವಜನಿಕವಾಗಿ ನಡೆದುಕೊಂಡ ತಮ್ಮದೇ ಮಾದರಿಗಳನ್ನು ತುಲನಾತ್ಮಕವಾಗಿ ವಿವರಿಸಿಕೊಳ್ಳುವ ನೈತಿಕತೆ ರಾಜಕಾರಣ ಮಾಡುವವರಿಗೆ ಇರಬೇಕು. ಹೀಗೆ ಕರ್ನಾಟಕ ಸಂಸ್ಕೃತಿಯ ಅರಿವು ಹಾಗೂ ನಮ್ಮದೇ ನಡವಳಿಕೆಗಳ ಕುರಿತಾದ ಆತ್ಮಾವಲೋಕನದೊಂದಿಗೆ ಮಾನುಷ ಬದುಕಿಗೆ ಆಘಾತಕಾರಿಯಾದುದರ ಕುರಿತ ಸಾತ್ವಿಕ ಆಕ್ರೋಶವೊಂದು ನಿಜಕ್ಕೂ ಸಾಧ್ಯವಾಗಬೇಕು. ಹಾಗಾಗಿದ್ದಲ್ಲಿ ಈ ಸಂಗತಿಗಳು ಸುದ್ದಿಯ ಸಂಭ್ರಮಕ್ಕಿಂತ ಬದ್ಧತೆಯ ಬದಲಾವಣೆಗೆ ಭೂಮಿಕೆಯಾಗುತ್ತಿದ್ದುವು.

**ಡಾ॥ ಜಯಪ್ರಕಾಶ್ ಶೆಟ್ಟಿ ಹೆಚ್.**
'ತೆನೆ', ಸರ್ವಪ್ರಕಾಶನಗರ, ಕುಂದಾಪುರ

## ಬೆಲೆ ಏರಿಕೆ

ಸರ್ಕಾರ ಬದಲಾದರೂ
ಬೆಲೆ ಏರಿಕೆಗೆ
ಬೀಳಲಿಲ್ಲ ತಡೆ.
ಇವರೂ ಅನುಸರಿಸುತ್ತಿದ್ದಾರೆ
ಹಿಂದಿನವರದ್ದೇ ನಡೆ.
ಆರ್ಥಿಕತೆ ಕುಸಿದು ಬೀಳುವ
ಭಯ ಎದುರಾದಾಗ
ಯಾರೂ ನೋಡಲಾರರು
ಜನಸಾಮಾನ್ಯರ ಕಡೆ.
ಚುನಾವಣೆಗೂ ಮುನ್ನ
ಹೇಳಿದ್ದೆಲ್ಲವೂ
ಇದೀಗ ಮಕಾಡೆ.

**ಡಾ॥ ಮುತ್ತುರಾಜು**
ಕುಮಾರಸ್ವಾಮಿ ಬಡಾವಣೆ ೨ನೇ ಹಂತ
ಬೆಂಗಳೂರು – ೫೬೦೦೭೮




ನಾನು ಓದಿದ ಪುಸ್ತಕ

ಕೃತಿಯ ಹೆಸರು
**'ಎಂದಿಗೂ ಸಲ್ಲುವ ಮಾರ್ಕ್ಸ್'**

ಲೇಖಕರು
**ಡಾ॥ ಜಿ. ರಾಮಕೃಷ್ಣ**

ಪ್ರಕಾಶಕರು
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
ಎಂಬೆಸಿ ಸೆಂಟರ್, ನಂ. ೧೧, ಕ್ರೆಸೆಂಟ್ ರಸ್ತೆ
ಬೆಂಗಳೂರು – ೫೬೦ ೦೦೧

ಪುಟಗಳು : ೧೩೬ ಬೆಲೆ : ರೂ. ೯೦/–

# ಎಂದಿಗೂ ಸಲ್ಲುವ ಮಾರ್ಕ್ಸ್

## ಮಾರ್ಕ್ಸ್‌ವಾದದ ಟೀಕಾಕಾರರಿಗೆ ಸಮಂಜಸ ಉತ್ತರ

**ಸೋ**ವಿಯತ್ ಯೂನಿಯನ್ ೧೯೯೧ರಲ್ಲಿ ಪತನಗೊಂಡಿತು. ಆಗ ಪ್ರಪಂಚದಾದ್ಯಂತ ಕಮ್ಯುನಿಸಂನ ಚರಮಗೀತೆಯನ್ನು ಅನೇಕ ಮಂದಿ ಹಾಡಿದರು! ಸಾಮ್ಯವಾದಕ್ಕೆ ಗೋರಿಯನ್ನು ಕಟ್ಟಲು ಹಲವರು ಮುಂದಾದರು! ಫ್ರಾನ್ಸಿಸ್ ಫುಕುಯಾಮ ಎಂಬ ಅಮೆರಿಕದ ರಾಜಕೀಯ ಅರ್ಥಶಾಸ್ತ್ರಜ್ಞ ೧೯೯೨ರಲ್ಲಿ 'ದಿ ಎಂಡ್ ಆಫ್ ಹಿಸ್ಟರಿ ಆ್ಯಂಡ್ ದಿ ಲಾಸ್ಟ್ ಮ್ಯಾನ್' ಎಂಬ ಪುಸ್ತಕವನ್ನು ಬರೆದ. ಅದರಲ್ಲಿ ಆತ ಮಾನವ ಇತಿಹಾಸದ ಮುನ್ನಡೆ ಎಂಬುದು ಸಿದ್ಧಾಂತಗಳ ನಡುವಿನ ಸಂಘರ್ಷ ಎಂಬ ಪ್ರತಿಪಾದನೆ ಕೊನೆಯುಸಿರೆಳೆಯುವ ಹಂತ ತಲುಪಿದೆ ಎಂದು ವಾದಿಸಿದ. ಶೀತಲ ಸಮರ (ಕೋಲ್ಡ್ ವಾರ್)ದ ಅಂತ್ಯ ಮತ್ತು ಬರ್ಲಿನ್ ಗೋಡೆಯ ಪತನದ ತರುವಾಯ ಕ್ರಮೇಣ ವಿಶ್ವದಲ್ಲಿ ಉದಾರವಾದಿ ಪ್ರಜಾಪ್ರಭುತ್ವ ವ್ಯವಸ್ಥೆ ನೆಲೆಗೊಳ್ಳುವುದೆಂದು ಸಾರಿದ. ಅಲ್ಲದೆ ಪ್ರಪಂಚದಾದ್ಯಂತ ರಾಜಕೀಯ ಮತ್ತು ಆರ್ಥಿಕ ಉದಾರವಾದ ಜಯಶಾಲಿಯಾಗುವುದೆಂದು ಭವಿಷ್ಯ ನುಡಿದ. ಅಂದರೆ, ಬಂಡವಾಳಶಾಹಿ v/s ಸಾಮ್ಯವಾದದಂತಹ ಸೈದ್ಧಾಂತಿಕ ಸಂಘರ್ಷಗಳು ಮುಗಿದ ಅಧ್ಯಾಯ ಎಂಬುದು ಆತನ ನಿಲುಮೆ ಯಾಗಿತ್ತು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಆತ ಸಾಮ್ಯ/ಮಾರ್ಕ್ಸ್‌ವಾದಕ್ಕೆ ಇತಿಶ್ರೀ ಹಾಡಿದ ಎಂದೇ ಅರ್ಥೈಸಬೇಕು. ಆದರೆ ಈ ಪುಸ್ತಕ ಪ್ರಕಟಗೊಂಡ ಎರಡು ದಶಕಗಳ ತರುವಾಯ ಸಾಮ್ಯವಾದದ ಸಿದ್ಧಾಂತ ಪ್ರಸ್ತುತತೆಯನ್ನು ಕಳೆದುಕೊಂಡಿಲ್ಲ ಎಂಬುದಕ್ಕೆ ಹಲವು ನಿದರ್ಶನ ಗಳನ್ನು ನೀಡಬಹುದು. ಲ್ಯಾಟಿನ್ ಅಮೆರಿಕದಲ್ಲಿ ಜರುಗಿರುವ ರಾಜಕೀಯ/ಸಾಮಾಜಿಕ/ಆರ್ಥಿಕ ಬದಲಾವಣೆಗಳು ಸಮಾಜವಾದದ ಮುನ್ನಡೆಗೆ ದಿಕ್ಸೂಚಿಯಾಗಿದೆ ಎಂದರೆ ತಪ್ಪಾಗುವುದಿಲ್ಲ.

ಕಾರ್ಲ್ ಮಾರ್ಕ್ಸ್ ಬದುಕಿದ್ದಾಗಲೇ ಕಮ್ಯುನಿಸಂನ ಅಂತ್ಯವನ್ನು ಅನೇಕರು ಸಾರಿದ್ದರು. ಆದರೆ ಈ ವಿಚಾರಧಾರೆಯನ್ನು ಅನೇಕ ವಿದ್ವಾಂಸರು/ ವಿಶೇಷಜ್ಞರು/ರಾಜಕೀಯ/ಆರ್ಥಿಕ ಮುತ್ಸದ್ದಿಗಳು ಎತ್ತಿಹಿಡಿದಿದ್ದಾರೆ. ಅಂತಹವರಲ್ಲಿ ಟೆರ್ರಿ ಈಗಲ್‌ಟನ್ ಒಬ್ಬ. ಐರ್ಲೆಂಡಿನ ಮೂಲದವನಾದ ಈತ ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳಲ್ಲಿ ಆಂಗ್ಲ ಸಾಹಿತ್ಯ, ಹಾಗೂ ಅದಕ್ಕೆ ಸಂಬಂಧಿಸಿದ ವಿಷಯಗಳ ಬಗೆಗೆ ಬೋಧನೆ ಮಾಡಿದ್ದಾನೆ. ಆತ ಮಾರ್ಕ್ಸ್‌ವಾದಿ ಸಿದ್ಧಾಂತದ ವಿಶ್ಲೇಷಕನಾಗಿರುವುದು ಅಲ್ಲದೆ ಒಬ್ಬ ಉತ್ತಮ ಸಂಘಟಕ ಹಾಗೂ ಹೋರಾಟಗಾರನೂ ಆಗಿದ್ದಾನೆ. ೨೦೧೧ರಲ್ಲಿ ಈತ ರಚಿಸಿದ ೨೫೮ ಪುಟಗಳ "ಮಾರ್ಕ್ಸ್ ಏಕೆ ಸರಿ?" ಎಂಬ (ಅಮೆರಿಕದ ಯೇಲ್ ವಿಶ್ವವಿದ್ಯಾನಿಲಯದ ಪ್ರಕಟಣೆ) ಕೃತಿ ಲೋಕಾರ್ಪಣೆ ಯಾಯಿತು. ಈ ಪುಸ್ತಕದ ಪ್ರೇರಣೆಯಿಂದ ಹನ್ನೆರಡು ಕಂತುಗಳಲ್ಲಿ 'ಹೊಸತು' ಮಾಸಪತ್ರಿಕೆಗೆ ನಮ್ಮ ನಾಡಿನ ಖ್ಯಾತ ಎಡಚಿಂತಕರು ಹಾಗೂ ಜನಪರ ವಿದ್ವಾಂಸರಾದ ಡಾ॥ ಜಿ. ರಾಮಕೃಷ್ಣ ಲೇಖನಗಳನ್ನು ಬರೆದರು. ಅದು ಈಗ 'ಎಂದಿಗೂ ಸಲ್ಲುವ ಮಾರ್ಕ್ಸ್' ಎಂದು ಪುಸ್ತಕ ರೂಪದಲ್ಲಿ ಲೋಕಾರ್ಪಣೆಗೊಂಡಿದೆ.

ಈ ಕೃತಿಯಲ್ಲಿ ಹನ್ನೆರಡು ಅಧ್ಯಾಯಗಳಿವೆ. ಮಾರ್ಕ್ಸ್ ಪ್ರತಿಪಾದಿಸಿದ ಸಾಮ್ಯವಾದದ ವರ್ಗಗಳ ಪರಿಕಲ್ಪನೆ, ಸಂಘರ್ಷ, ಭೌತವಾದ, ಆರ್ಥಿಕ ವಿಚಾರಧಾರೆಯ ಜೊತೆ ಮತಧರ್ಮ, ಅಧ್ಯಾತ್ಮ, ಹಿಂಸೆ, ಪ್ರಭುತ್ವ ಇತ್ಯಾದಿ ಹತ್ತು ಹಲವು ಗಂಭೀರ ಮತ್ತು ಸೂಕ್ಷ್ಮ ವಿಚಾರಗಳ ಬಗೆಗೆ ಆತನ ಸೈದ್ಧಾಂತಿಕ ಪ್ರತಿಪಾದನೆಗಳನ್ನು ವಿಶದವಾಗಿ ವಿವರಿಸಲಾಗಿದೆ.

"ಮಾರ್ಕ್ಸ್ ಹೇಳಿದ್ದು ಏಕೆ ಸರಿ?" ಎಂಬ

**ಮ. ಶ್ರೀ. ಮುರಳಿ ಕೃಷ್ಣ**

"ಮಾರ್ಕ್ಸ್‌ವಾದದಿಂದ ಸ್ವಾತಂತ್ರ್ಯದ ವಿಸ್ತರಣೆ" ಎಂಬ ಎರಡನೇ ಅಧ್ಯಾಯದಲ್ಲಿ ಸೋವಿಯತ್ ಯೂನಿಯನ್‌ನಲ್ಲಿ ಸಾಮಾನ್ಯ ಜನರಿಗೆ ದೊರೆಯುತ್ತಿದ್ದ ಸೌಲಭ್ಯಗಳು, ಆ ದೇಶ ಫ್ಯಾಸಿಸ್ಟ್ ಶಕ್ತಿಯನ್ನು ಹಿಮ್ಮೆಟ್ಟಿಸಿದ ಪರಿ, ವಸಾಹತು ಶಕ್ತಿಗಳಡಿ ನಲಗುತ್ತಿದ್ದ ದೇಶಗಳಿಗೆ ನೀಡಿದ ಒತ್ತಾಸೆ ಇತ್ಯಾದಿ ಸಂಗತಿಗಳ ವಿವರಗಳಿವೆ. ಈ ನಿಟ್ಟಿನಲ್ಲಿ ಒಂದು ಸ್ವವಿಮರ್ಶಾತ್ಮಕ ಟೀಕೆಯೂ ಉಲ್ಲೇಖಗೊಂಡಿದೆ. ಅದೇ ಸೋವಿಯತ್ ಯೂನಿಯನ್ ಮತ್ತು ಚೀನಾದಲ್ಲಿ ಕ್ರಮವಾಗಿ ಸ್ಟಾಲಿನ್ ಮತ್ತು ಮಾವೋರಿಂದ ಜರುಗಿದ ಸರ್ವಾಧಿಕಾರದ ಅಟ್ಟಹಾಸಗಳು. ಅವರಿಂದ ಸಮಾಜವಾದಕ್ಕೆ ಮಸಿ ಬಳಿಯುವಂತಹ ಕಾರ್ಯಗಳು ಜರುಗಿದವು ಎಂಬ ನೇರ, ದಿಟ್ಟ ಹೇಳಿಕೆಯೂ ಇದೆ. ಆದರೆ ಸೋವಿಯತ್ ಒಕ್ಕೂಟ ಜನ್ಮತಳೆದ ಸಂದರ್ಭದಲ್ಲಿ ಒಂದು ತೆರನಾದ ಸರ್ವಾಧಿಕಾರ ಅನಿವಾರ್ಯ ಎಂಬುವ ಮಟ್ಟಿಗೆ ಪರಿಸ್ಥಿತಿ ಇತ್ತು, ಆದಾಗ್ಯೂ ಅದು ಸ್ಟಾಲಿನ್ ಮಾದರಿಯ ಸರ್ವಾಧಿಕಾರ ಆಗಿರಬೇಕಿರಲಿಲ್ಲ ಎಂಬ ದೃಷ್ಟಿಕೋನವೂ ವ್ಯಕ್ತವಾಗಿದೆ. ಸಮಾಜವಾದಿ ವ್ಯವಸ್ಥೆಯಲ್ಲಿರಬೇಕಾದ ಮಾರುಕಟ್ಟೆ ರೂಪುರೇಷೆಗಳ ವಿವರಣೆ ಸಹ ಇಲ್ಲಿದೆ.

ಮೊದಲನೆಯ ಅಧ್ಯಾಯದಲ್ಲಿ ಬಂಡವಾಳಶಾಹಿಯ ಅಂತಿಮ ಎಲ್ಲೆಯನ್ನು ನಿರ್ಧರಿಸುವ ಅಂಶವೆಂದರೆ ಬಂಡವಾಳವೇ ಆಗಿದೆ. ಅದನ್ನು ಹೆಚ್ಚಿಸಿಕೊಳ್ಳುವ ಹುಮ್ಮಸ್ಸು ಎಷ್ಟೇ ಇದ್ದರೂ ಅದಕ್ಕೊಂದು ನಿರ್ಧಾರಕ ಎಲ್ಲೆ ಇದೆ. ಅದನ್ನು ಮೀರಿ ಹೋಗಲು ಅದಕ್ಕೆ ಸಾಧ್ಯವಿಲ್ಲ. ಇದರಲ್ಲೊಂದು ವ್ಯಂಗ್ಯವಿದೆ : ಇತಿಹಾಸದಲ್ಲಿ ಬಹಳ ಚಲನಶೀಲವಾದ ವ್ಯವಸ್ಥೆ ಅದೆಂಬ ಹೆಮ್ಮೆ ಒಂದು ಕಡೆ, ಆದರೆ ಸ್ಥಗಿತ ಮತ್ತು ಪುನರಾವರ್ತನೆಗೆ ಸಿಲುಕುವ ವ್ಯವಸ್ಥೆ ಎಂಬ ಕೊರತೆ ಇನ್ನೊಂದೆಡೆ. ಎಷ್ಟು ಕಾಲ ಕಳೆದರೂ ಬಂಡವಾಳಶಾಹಿಯು ಬಂಡವಾಳ ಶಾಹಿಯೇ; ಆದ್ದರಿಂದ ಮಾರ್ಕ್ಸ್‌ವಾದವು ಅದರ ಬಗ್ಗೆ ನೀಡುವ ವಿಮರ್ಶೆ ಎಲ್ಲ ಕಾಲಕ್ಕೂ ಅನ್ವಯ ವಾಗುವಂಥದೇ ಆಗಿರುತ್ತದೆ... ಎಂಬ ಮಾರ್ಕ್ಸ್‌ನ ಹೇಳಿಕೆಗೆ ಪೂರಕವಾದ ಮಾಹಿತಿಗಳಿವೆ. ಮಾರ್ಕ್ಸ್‌ವಾದ ಪ್ರಭಾವದ ಬೀಸಿನ ಪ್ರಸ್ತಾಪವೂ ಇದೆ. ೧೯೮೦ ದಶಕದ ತರುವಾಯ ಪ್ರಗತಿಪರದಲ್ಲಿ ತಲೆದೋರಿದ ಸಮತಾವಾದದ ಕುರಿತ ಹತಾಶೆಯ ವಿಮರ್ಶೆ ಸಹ ಇದೆ.




"ಮಾರ್ಕ್ಸ್‌ವಾದದಿಂದ ಸ್ವಾತಂತ್ರ್ಯದ ವಿಸ್ತರಣೆ" ಎಂಬ ಎರಡನೇ ಅಧ್ಯಾಯದಲ್ಲಿ ಸೋವಿಯತ್ ಯೂನಿಯನ್‌ನಲ್ಲಿ ಸಾಮಾನ್ಯ ಜನರಿಗೆ ದೊರೆಯುತ್ತಿದ್ದ ಸೌಲಭ್ಯಗಳು, ಆ ದೇಶ ಫ್ಯಾಸಿಸ್ಟ್ ಶಕ್ತಿಯನ್ನು ಹಿಮ್ಮೆಟ್ಟಿಸಿದ ಪರಿ, ವಸಾಹತು ಶಕ್ತಿಗಳಡಿ ನಲುಗುತ್ತಿದ್ದ ದೇಶಗಳಿಗೆ ನೀಡಿದ ಒತ್ತಾಸೆ ಇತ್ಯಾದಿ ಸಂಗತಿಗಳ ವಿವರಗಳಿವೆ. ಈ ನಿಟ್ಟಿನಲ್ಲಿ ಒಂದು ಸ್ವವಿಮರ್ಶಾತ್ಮಕ ಟೀಕೆಯೂ ಉಲ್ಲೇಖಗೊಂಡಿದೆ. ಅದೇ ಸೋವಿಯತ್ ಯೂನಿಯನ್ ಮತ್ತು ಚೀನಾದಲ್ಲಿ ಕ್ರಮವಾಗಿ ಸ್ಟಾಲಿನ್ ಮತ್ತು ಮಾವೋರಿಂದ ಜರುಗಿದ ಸರ್ವಾಧಿಕಾರದ ಅಟ್ಟಹಾಸಗಳು. ಅವರಿಂದ ಸಮಾಜವಾದಕ್ಕೆ ಮಸಿ ಬಳಿಯುವಂತಹ ಕಾರ್ಯಗಳು ಜರುಗಿದವು ಎಂಬ ನೇರ, ದಿಟ್ಟ ಹೇಳಿಕೆಯೂ ಇದೆ. ಆದರೆ ಸೋವಿಯತ್ ಒಕ್ಕೂಟ ಜನ್ಮತಳೆದ ಸಂದರ್ಭದಲ್ಲಿ ಒಂದು ತೆರನಾದ ಸರ್ವಾಧಿಕಾರ ಅನಿವಾರ್ಯ ಎಂಬುವ ಮಟ್ಟಿಗೆ ಪರಿಸ್ಥಿತಿ ಇತ್ತು, ಆದಾಗ್ಯೂ ಅದು ಸ್ಟಾಲಿನ್ ಮಾದರಿಯ ಸರ್ವಾಧಿಕಾರ ಆಗಿರಬೇಕಿರಲಿಲ್ಲ ಎಂಬ ದೃಷ್ಟಿಕೋನವೂ ವ್ಯಕ್ತವಾಗಿದೆ. ಸಮಾಜವಾದಿ ವ್ಯವಸ್ಥೆಯಲ್ಲಿರಬೇಕಾದ ಮಾರುಕಟ್ಟೆ ರೂಪುರೇಷೆಗಳ ವಿವರಣೆ ಸಹ ಇಲ್ಲಿದೆ. "ಆರ್ಥಿಕ ಯೋಜನೆ ಮತ್ತು ಮಾರುಕಟ್ಟೆ ಒಟ್ಟಾಗಿ ಹೆಜ್ಜೆ ಹಾಕುವುದು ಸಮಾಜವಾದಿ ವ್ಯವಸ್ಥೆಯ ನಿರ್ಮಿತಿಗೆ ಅಗತ್ಯವೆಂಬ ಇಂಗಿತವನ್ನು ಮಾರ್ಕ್ಸ್‌ವಾದವು ಹೊಂದಿದೆ. ಮಾರುಕಟ್ಟೆ ಸಮಾಜವಾದದಡಿಯಲ್ಲಿ ಉತ್ಪಾದನಾ ಸಾಧನಗಳ ರೂಪದ ಖಾಸಗಿ ಆಸ್ತಿಗೆ ಸ್ಥಾನವಿಲ್ಲ... ಅಂತೆಯೇ ಸಾಮಾಜಿಕ ವರ್ಗಗಳಿಗೆ ಮತ್ತು ಶೋಷಣೆಗೆ ಅಲ್ಲಿ ಅವಕಾಶವಿಲ್ಲ. ಉತ್ಪಾದಕರ ಕೈಯಲ್ಲಿ ಆರ್ಥಿಕ ಶಕ್ತಿ ಉಳಿದಿರುತ್ತದೆ, ಒಬ್ಬ ಖಾಸಗಿ ಬಂಡವಳಿಗನಲ್ಲಿ ಅದು ಕೇಂದ್ರೀಕೃತವಾಗಿರುವುದಿಲ್ಲ" (ಪುಟ ೨೫) ಎಂಬ ಅಭಿಪ್ರಾಯವನ್ನು ಮಂಡಿಸಲಾಗಿದೆ. ಈ ಸಂದರ್ಭದಲ್ಲಿ ನಮ್ಮಲ್ಲಿ ಬೇರೂರುತ್ತಿರುವ ಕ್ರೋನಿ ಬಂಡವಾಳಶಾಹಿ ವ್ಯವಸ್ಥೆ ಅಧಿಕ ಸಂಖ್ಯೆಯ ಮಂದಿಗೆ ಎಂತಹ ಅಸಹನೀಯ ಸ್ಥಿತಿಯನ್ನು ನಿರ್ಮಿಸುತ್ತಿದೆ ಎಂಬ ವಿಷಯವನ್ನು ಗಮನದಲ್ಲಿರಿಸಿಕೊಳ್ಳಬೇಕು. ಒಂದು ನೈಜ ಸಮಾಜವಾದಿ ವ್ಯವಸ್ಥೆಯಲ್ಲಿರಬೇಕಾದ ಮುಖ್ಯ ಲಕ್ಷಣಗಳ ಬಗೆಗಿನ ವ್ಯಾಖ್ಯಾನವೂ ಇಲ್ಲಿದೆ.

"ಮಾರ್ಕ್ಸ್ ಸಮರ್ಥ ಇತಿಹಾಸಜ್ಞನೆ ? ಎಂಬ ಮೂರನೇ ಅಧ್ಯಾಯದಲ್ಲಿ ಮಾರ್ಕ್ಸ್‌ನ ಎರಡು ಪ್ರಮುಖ ಧೋರಣೆಗಳಾದ – ೧) ಸಮಾಜ ಜೀವನದಲ್ಲಿ ಆರ್ಥಿಕತೆಯ ಪ್ರಧಾನ ಪಾತ್ರ ಮತ್ತು ೨) ಇತಿಹಾಸದಲ್ಲಿ ಉತ್ಪಾದನಾ ವಿಧಾನಗಳು ಕ್ರಮವಾಗಿ ಒಂದಾದ ಮೇಲೆ ಒಂದರಂತೆ ಬಂದಿರುವುದರ ಬಗೆಗೆ ಬೆಳಕನ್ನು ಚೆಲ್ಲಲಾಗಿದೆ. ವರ್ಗ ಹೋರಾಟವು ಮಾನವ ಇತಿಹಾಸದ ಚಾಲಕ ಶಕ್ತಿ ಹಾಗೂ ಅವನ ಅಭಿವೃದ್ಧಿಗೆ ಅದರದೇ ಮೂಲಭೂತ ಕುಮ್ಮಕ್ಕು (ಪುಟ ೨೮) ಎಂಬ ಮಾರ್ಕ್ಸ್‌ನ ನಿಲುವು ಆತನ ಇತಿಹಾಸದ ಪ್ರಜ್ಞೆಯ ಮುಖ್ಯ ಅಂಶವೆಂದು ಈಗಲ್‌ಟನ್‌ನ ಅಭಿಮತ. ಕಮ್ಯುನಿಸ್ಟ್ ಘೋಷಣಾ ಪತ್ರದಲ್ಲಿರುವ "ಈವರೆಗಿನ ಎಲ್ಲ ಸಮಾಜಗಳ ಇತಿಹಾಸವೂ ವರ್ಗ ಹೋರಾಟಗಳ ಇತಿಹಾಸವೇ ಆಗಿದೆ" ಎಂಬ ಮಾರ್ಕ್ಸ್‌ನ ಉಕ್ತಿಯನ್ನು ಹೇಗೆ ಅರ್ಥಮಾಡಿಕೊಳ್ಳ ಬೇಕೆಂದು ತಮ್ಮದೇ ಆದ ಮೊನಚಾದ ಧಾಟಿಯಲ್ಲಿ ಅನುವಾದಕರಾದ ಡಾ॥ ಜಿ. ರಾಮಕೃಷ್ಣ ಓದುಗರ ಮುಂದಿಟ್ಟಿದ್ದಾರೆ. ವರ್ಗಗಳು, ವರ್ಗಹೋರಾಟ, ಉತ್ಪಾದಕ ಶಕ್ತಿಗಳು ಮತ್ತು ಉತ್ಪಾದನಾ ಸಂಬಂಧಗಳ ಸಂಘರ್ಷಗಳ ಬಗೆಗಿನ ಕೆಲವು ಗಹನ ವಿಚಾರಗಳನ್ನು ಇಲ್ಲಿ ಚರ್ಚಿಸಲಾಗಿದೆ. ಪುಟ ೪೧ರಲ್ಲಿರುವ "ಬಂಡವಾಳಶಾಹಿಯಡಿ" "ತನಗೆ, ತನಗೆ ಮಾತ್ರ" ಎಂಬ ಮೌಲ್ಯ ಅಸತ್ಯವೆನಿಸುವಷ್ಟಿದೆ. ಮಾನವ ಸಮಾಜವನ್ನು ಅಂತಹ ಮೌಲ್ಯಕ್ಕೆ ಕಟ್ಟುಬಿದ್ದಿರದಂತೆ ಮಾಡುವುದೇ ವರ್ಗ ಹೋರಾಟ. ಆರ್ಥಿಕ– ಸಾಮಾಜಿಕ ನಿರ್ಬಂಧಗಳಿಂದ ಮಾನವನನ್ನು ಮುಕ್ತವಾಗಿಸಿ ತನ್ನ ಅಮೋಘ ಕ್ರಿಯಾಶಕ್ತಿಯನ್ನು ಸಂಪೂರ್ಣವಾಗಿ ಅಭಿವ್ಯಕ್ತಗೊಳಿಸಲು ಬೇಕಾದ ವ್ಯವಸ್ಥೆಯನ್ನು ಅಣಿಗೊಳಿಸುವುದು ವರ್ಗ ಹೋರಾಟದ ಗುರಿ, ಅದರ ಜವಾಬ್ದಾರಿ ಹೊತ್ತಿರುವುದು ದುಡಿಯುವ ವರ್ಗ. ಇದು ಮಾರ್ಕ್ಸ್ ಕಮ್ಯುನಿಸಂ ಕುರಿತು ಇರಿಸಿಕೊಂಡ ಪರಿಪ್ರೇಕ್ಷ್ಯ. ಅದೇ ಇಂದಿಗೂ ದುಡಿಯುವ ವರ್ಗದ ಧ್ಯೇಯ ಮತ್ತು ಧೋರಣೆ. ಪ್ರಜಾಪ್ರಭುತ್ವವಾದಿ ಕ್ರಮ ಮತ್ತು ಸಂಘಟಿತ ಹೋರಾಟ ಅದರ ಹಾದಿ. ಮಾರ್ಕ್ಸ್ ಹೇಳಿದ್ದರಲ್ಲಿ ತಪ್ಪೇನಿದೆ ?" ಎಂಬ ಒಕ್ಕಣೆ ಈ ಅಧ್ಯಾಯದ ಕಾರಣವನ್ನು ಸಮರ್ಥವಾಗಿ ಬಿಂಬಿಸುತ್ತದೆ.

"ಮಾರ್ಕ್ಸ್ ಕನಸಿನಲೋಕದ ವಿಹಾರಿಯೇ ?" ಎಂಬ ನಾಲ್ಕನೇ ಅಧ್ಯಾಯದಲ್ಲಿ ಮಾರ್ಕ್ಸ್ ಕಲ್ಪನಾಲೋಕದ ನಿವಾಸಿಯಾಗಿರಲಿಲ್ಲ ಎಂಬುದಕ್ಕೆ ಆತನ ಕೃತಿಗಳಾದ 'ದಿ ಜರ್ಮನ್ ಐಡಿಯಾಲಜಿ', 'ಫ್ರಾನ್ಸಿನಲ್ಲಿ ಅಂತರ್ಯುದ್ಧ'ದಿಂದ ಕೆಲವು ಉದ್ಧರಣ ಗಳನ್ನು ನೀಡಲಾಗಿದೆ. ಇಂದಿನ ಸಮಾಜದ ಗರ್ಭದಿಂದಲೇ ನೂತನ ಸಮಾಜವು ನಿರ್ಮಾಣಗೊಳ್ಳಬೇಕು ಎಂಬ ಪ್ರತಿಪಾದನೆಯೂ ಇಲ್ಲಿದೆ. ಇದಕ್ಕೆ ಪೂರಕವಾದ ಕೆಲವು ಸಂಗತಿಗಳ ಚರ್ಚೆಯೂ ಇದೆ. ಅಲ್ಲದೆ ಮಾನವ ಸ್ವಭಾವದ ಆಧಾರದ ಮೇಲೆ ಮಾರ್ಕ್ಸ್ ಮುಂದಿಟ್ಟ ದಾರ್ಶನಿಕ ಮಾನವಶಾಸ್ತ್ರದ ಪ್ರಸ್ತಾಪವೂ ಇದೆ.

ಐದನೇ ಅಧ್ಯಾಯದಲ್ಲಿ ಸಾಮ್ಯವಾದವೆಂದರೆ ಸಾಮಾಜಿಕ ಜೀವನವನ್ನು ವ್ಯಕ್ತಿಯೊಬ್ಬನ ಮತ್ತು ಇತರರ ಆಶಯಗಳ ಪೂರೈಕೆಗೆ ಸಂಘಟನೆ ಮಾಡುವುದಕ್ಕೆ ಪ್ರಾಶಸ್ತ್ಯ ನೀಡುತ್ತದೆ ಎಂಬ ಅಂಶದ ಬಗೆಗೆ ಕ್ಷಕಿರಣವನ್ನು ಬೀರಲಾಗಿದೆ. ಕಮ್ಯುನಿಸ್ಟ್ ಪ್ರಣಾಳಿಕೆಯಲ್ಲಿ ಹೇಳಿರುವ "ಪ್ರತಿಯೊಬ್ಬರ ಸ್ವತಂತ್ರ ಏಳಿಗೆಯು ಎಲ್ಲರ ಸ್ವತಂತ್ರ ಏಳಿಗೆಗೆ ಒಂದು ಷರತ್ತು" ಎಂಬುದಕ್ಕೆ ಒತ್ತನ್ನು ನೀಡಿ, ಇದಕ್ಕೆ ಸಂಬಂಧಿಸಿದ ಕೆಲವು ಯೋಚನಾರ್ಹ ಹಾಗೂ ಗಮನಾರ್ಹ ಉದಾಹರಣೆಗಳನ್ನು ಕೊಡಲಾಗಿದೆ.

ಆರನೇ ಅಧ್ಯಾಯದಲ್ಲಿ ಸಮಾನತೆ ಮತ್ತು ದುಡಿಮೆಯ ವಿಶಾಲ ಅರ್ಥ ವ್ಯಾಪ್ತಿ, ಇತಿಹಾಸದ ಏಕೈಕ ನಿರ್ಧಾರಕ ಅಂಶವೆಂದರೆ ಆರ್ಥಿಕ ಶಕ್ತಿಗಳು ಮಾತ್ರವೇ ಎಂಬ ನಿಲುವು ಮಾರ್ಕ್ಸ್‌ನದ್ದಾಗಿರಲಿಲ್ಲ ಎಂಬ ವಾಸ್ತವಾಂಶ, ವರ್ಗಸಮಾಜದಲ್ಲಿ ಯಾವುದೇ ಕಾಲದ ಸಂಸ್ಕೃತಿ, ಕಾನೂನುಕಟ್ಟಳೆ ಮತ್ತು ರಾಜಕೀಯವು ಆ ಕಾಲದ ಪ್ರಭಾವಿ ಸಾಮಾಜಿಕ ವರ್ಗದ ಹಿತಾಸಕ್ತಿಗಳೊಡನೆ ಬೆಸೆದುಕೊಂಡಿರುತ್ತದೆ ಎಂಬ ಮಾರ್ಕ್ಸ್‌ನ ಅತ್ಯಂತ ವಿಚಾರಪ್ರಚೋದಕ, ಖಡಾಖಂಡಿತ ಅಭಿಪ್ರಾಯ, 'ಉತ್ಪಾದನೆ' ಎಂಬುದು ಸ್ವಯಂ ಸಂತೃಪ್ತಿಯ ನೂರಾರು ಕ್ರಿಯೆಗಳಷ್ಟು ವ್ಯಾಪಕವಾದ್ದು ಎಂಬ ಮಾರ್ಕ್ಸ್‌ನ ಗಮನಾರ್ಹ ವ್ಯಾಖ್ಯಾನ ಇತ್ಯಾದಿಗಳ ಪ್ರಸ್ತಾಪಗಳಿವೆ.

ಏಳನೇ ಅಧ್ಯಾಯದಲ್ಲಿ ಭೌತವಾದಕ್ಕೆ ಮಾರ್ಕ್ಸ್ ನೀಡಿದ ಅಭೂತಪೂರ್ವ, ದಿಶಾಸೂಚಕ ಕೊಡುಗೆಗಳು, ಭೌತವಾದ, ಮತಧರ್ಮ ಮತ್ತು ಅಧ್ಯಾತ್ಮಕ್ಕೆ ಸಂಬಂಧಿಸಿದಂತೆ ಫ್ಲಾಯರ್‌ಬಾಕ್, ಎತ್ಯೆನ್ ಬಲಿಬಾರ್, ಲಾಕ್, ಹ್ಯೂಮ್, ಫ್ರಾಯ್ಡ್, ಗಾರ್ಡನ್ ಚೈಲ್ಡ್, ಲುಡ್ವಿಗ್ ವಿಡ್‌ಗೆನ್‌ಸ್ಟೇನ್ ಇತ್ಯಾದಿ ದಿಗ್ಗಜರ ಹೇಳಿಕೆಗಳನ್ನು ಗಮನಿಸುತ್ತ ಈ ವಿಷಯಗಳ ಬಗೆಗೆ ಮಾರ್ಕ್ಸ್‌ನ ಚಿಂತನಾಲಹರಿಯನ್ನು ವಿಶ್ಲೇಷಣಾ ಒರೆಗಲ್ಲಿಗೆ ಹಚ್ಚಲಾಗಿದೆ.

"ಮಾರ್ಕ್ಸ್‌ನ ಸಾಮಾಜಿಕ ಕಾಣ್ಕೆಯಲ್ಲಿ ಅಡಿಪಾಯವೆಂದರೆ ಉತ್ಪಾದನಾ ಸಾಧನಗಳು ಮತ್ತು ಸಂಬಂಧಗಳು; ಮೇಲ್ಮೈ ಎಂದರೆ ಪ್ರಭುತ್ವ, ಕಾನೂನು, ಮತಧರ್ಮ, ರಾಜಕೀಯ, ಸಂಸ್ಕೃತಿ ಮುಂತಾದುವು. ಮೇಲ್ಮೈನ ಕಾರ್ಯವು ಅಡಿಪಾಯವನ್ನು ಬೆಂಬಲಿಸುವುದು, ಗಟ್ಟಿಗೊಳಿಸುವುದು ಆಗಿದೆ. ಅಡಿಪಾಯವೆಂದರೆ ಪ್ರಸ್ತುತ ಆಯಾ ಸಂದರ್ಭಗಳಲ್ಲಿ ಅಸ್ತಿತ್ವದಲ್ಲಿರುವ ವರ್ಗ ವ್ಯವಸ್ಥೆ ಮೇಲ್ಮೈನ ಅಂಗಗಳಾದ ಮತಧರ್ಮ, ಸಂಸ್ಕೃತಿ ಇತ್ಯಾದಿಗಳು. ಆಯಾ ವ್ಯವಸ್ಥೆಯನ್ನು ಸಮರ್ಥಿಸಲು ಅಗತ್ಯವಾದ ಭಾವನೆಗಳನ್ನು ಉತ್ಪಾದಿಸುತ್ತವೆ ಅದನ್ನು "ಸಿದ್ಧಾಂತ" (ಐಡಿಯಾಲಜಿ) ಎನ್ನುತ್ತೇವೆ..." ಎಂಬಿತ್ಯಾದಿ ವಿಷಯಗಳ ಅನಾವರಣವನ್ನು 'ಅಡಿಪಾಯ ಮತ್ತು ಮೇಲ್ಮೈ ಸಂಬಂಧಗಳು' ಎಂಬ ಎಂಟನೇ ಅಧ್ಯಾಯದಲ್ಲಿ ವಿಶದವಾಗಿ ಮಾಡಲಾಗಿದೆ.

ದುಡಿಯುವ ವರ್ಗದ ನಾನಾ ಆಯಾಮಗಳು, ಬಂಡವಾಳಶಾಹಿ ದುಡಿಯುವ ವರ್ಗವನ್ನು ಗ್ರಹಿಸುವ ಪರಿ, ದುಡಿಮೆಗಾರರು ಎಂದರೆ ಯಾರು ? ಎಂಬ ವ್ಯಾಖ್ಯಾನ ಇತ್ಯಾದಿ ವಿಚಾರಗಳಿಗೆ ಒಂಬತ್ತನೇ ಅಧ್ಯಾಯ ಭೂತಕನ್ನಡಿಯ ಸ್ಪಂದನವನ್ನು ನೀಡುತ್ತದೆ.

ಮಾರ್ಕ್ಸ್‌ವಾದಿಗಳು ಒಂದು ನೂತನ ಸಮಸಮಾಜವನ್ನು ನಿರ್ಮಿಸುವ ನಿಟ್ಟಿನಲ್ಲಿ ಜರುಗಬೇಕಾದ ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಗಳು ಶಸ್ತ್ರಾಸ್ತ್ರ ಹೋರಾಟಗಳಿಂದ ಮಾತ್ರ ಸಾಧ್ಯ ಎಂಬ ನಿಲುವನ್ನು ಹೊಂದಿರುವವರು ಎಂಬುದು ಹಲವರ ಗ್ರಹಿಕೆ. ಕ್ರಾಂತಿಯ ಬಗೆಗೆ ಕೂಡ ಇದೇ ಗ್ರಹಿಕೆಯಿದೆ. ಆದರೆ ಇತಿಹಾಸದ ಪುಟಗಳನ್ನು ತಿರುಗಿಸಿದರೇ, ಸಾಮಾಜಿಕ ಪಲ್ಲಟಗಳು/ ಸುಧಾರಣೆಗಳು/ ಕ್ರಾಂತಿಗಳು ಶಾಂತಿಯುತವಾಗಿ ಜರುಗಿವೆ; ಹಿಂಸೆಯಿಂದಲೂ ಕೂಡಿರುವುದನ್ನು ಕಾಣಬಹುದು. ಬುಡಕಟ್ಟುಗಳು ಧ್ವಂಸವಾಗಿ ಪ್ರಭುತ್ವಗಳು ಜನ್ಮತಳೆದ ಬುದ್ಧಪೂರ್ವ ಯುಗವಾಗಲಿ, ಬುದ್ಧನ ನಂತರದ ಸಾಮ್ರಾಟ್ ಅಶೋಕನ ಕಾಲವಾಗಲಿ, ಗುಪ್ತರ 'ಸುವರ್ಣ ಯುಗ'ವಾಗಲಿ, ಬಸವಣ್ಣನ ಕಲ್ಯಾಣ ಕ್ರಾಂತಿಯಾಗಲಿ, ದಕ್ಷಿಣ ಅಮೆರಿಕಾದಲ್ಲಿ ಸ್ಪೇನ್ ಹುಟ್ಟುಹಾಕಿದ ದೊಂಬಿ, ರೋಮನ್ ಕ್ಯಾಥಲಿಕ್ ಚರ್ಚ್ ಯುರೋಪಿನಲ್ಲಿ ತಂದ ಬದಲಾವಣೆಗಳು ಮುಂತಾದುವು ಶಾಂತಿಯಿಂದ ಕೂಡಿರಲಿಲ್ಲ. ಆದರೆ ೧೯೧೬ರ ಐರ್ಲೆಂಡಿನಲ್ಲಿ ಈಸ್ಟರ್ ದಂಗೆ ನಡೆದಾಗ ಸತ್ತವರು ಕಡಿಮೆ ಸಂಖ್ಯೆಯ ಮಂದಿ. ಇದು ಆ ದೇಶಕ್ಕೆ ಭಾಗಶಃ ಸ್ವಾತಂತ್ರ್ಯ ತಂದುಕೊಟ್ಟಿತು. ಹಾಗೆಯೇ ೧೯೧೭ ರಷ್ಯಾದ ಕ್ರಾಂತಿಯಲ್ಲಿ ಮಡಿದ ಜನರ ಸಂಖ್ಯೆಯೂ ಕಡಿಮೆಯಾಗಿತ್ತು... ಇತ್ಯಾದಿ ನಿದರ್ಶನಗಳನ್ನು ವಿವೇಚನೆಯಿಂದ ಹತ್ತನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಸಂಸತ್ ಪದ್ಧತಿಯ ಮೂಲಕ ಗುಣಾತ್ಮಕ ಹಾಗೂ ಇತ್ಯಾತ್ಮಕ ಬದಲಾವಣೆಗಳನ್ನು ಸಮಾಜವಾದಿಗಳು ಅಮೆರಿಕ, ಇಂಗ್ಲೆಂಡ್, ಹಾಲೆಂಡ್ ಮುಂತಾದ ದೇಶಗಳಲ್ಲಿ ತರಲು ಸಾಧ್ಯವೆಂಬುದು ಮಾರ್ಕ್ಸ್‌ನ ಅಭಿಮತವಾಗಿತ್ತು ಎಂಬ ಅಂಶದ ಮೇಲೂ ಇಲ್ಲಿ ಬೆಳಕನ್ನು ಚೆಲ್ಲಲಾಗಿದೆ. ಪಲ್ಲಟಗಳ ಹಿಂದಿನ ಹಿಂಸೆಯ ಕಾರಣಗಳು, ಅದರ ವಿವಿಧ ಆಯಾಮಗಳ ಅವಲೋಕನ ಇತ್ಯಾದಿಗಳ ವ್ಯಾಖ್ಯಾನ ಅನೇಕ ಒಳನೋಟಗಳನ್ನು ನೀಡುತ್ತದೆ.

**ಹೊಲದೆಡೆಗೆ...**

ಚಳಿ ಚಳಿ ಎನ್ನುತ ಇಳೆಗಿಳಿಯದೆನೀ<br>
ಕುಳಿತೇ ಎಂದರೆ ಬೆಳೆ ಬರದು ॥<br>
ಮಳೆ ಬರುತಿಹ ಈ ಸಮಯದಿ ಅಡಿಯಿಡು<br>
ಹೊಲದೆಡೆ ನಡೆಯುವೆ ಎನ್ನುತಲೀ ॥

**ಕೀರಿಕ್ಕಾಡು ವನಮಾಲ ಕೇಶವ ಭಟ್ಟ**<br>
ಅಂಚೆ : ಪಂಜಿಕಲ್ಲು<br>
ಕಾಸರಗೋಡು – ೬೭೧ ೫೪೩

ಹನ್ನೊಂದನೇ ಅಧ್ಯಾಯದಲ್ಲಿ ಪ್ರಭುತ್ವಗಳ ಸ್ವರೂಪ, ಪಾತ್ರ ಮತ್ತು ಅವುಗಳ ಬಗೆಗೆ ಮಾರ್ಕ್ಸ್‌ನ ದೃಷ್ಟಿಕೋನ ಓದುಗರಿಗೆ ಚಿಂತನಾ ಸಾಮಗ್ರಿಗಳನ್ನು ಒದಗಿಸುತ್ತವೆ.

'ಮಾರ್ಕ್ಸ್‌ವಾದದ ಸಂವಾದಿ ಚಳುವಳಿಗಳು' ಎಂಬ ಕೊನೆಯ ಅಧ್ಯಾಯದಲ್ಲಿ ಸ್ತ್ರೀವಾದಿ ಚರ್ಚೆಗಳು, ಮಹಿಳಾ ಚಳುವಳಿಗಳು ವಸಾಹತೋತ್ತರ ಚಿಂತನೆಗಳು, ಆಧುನಿಕೋತ್ತರರ ವಾದಗಳು, ಮಾನವ ಮತ್ತು ಪ್ರಕೃತಿಯ ನಡುವೆ ಇರಬೇಕಾದ ಸಂಬಂಧದ ಬಗೆಗೆ ಮಾರ್ಕ್ಸ್‌ಗಿದ್ದ ನಿಲುವು, ಬಂಡವಾಳಶಾಹಿ ಮತ್ತು ಸಮಾಜವಾದಿ ವ್ಯವಸ್ಥೆ ನಿಸರ್ಗವನ್ನು ಕಾಣುವ/ನಡೆಸಿಕೊಳ್ಳುವ ಬಗೆ ಇತ್ಯಾದಿಗಳ ವಿವೇಚನಾಪೂರ್ಣ ಅಧ್ಯಯನ ಇದೆ.

ಈ ಕೃತಿ ಮಾರ್ಕ್ಸ್‌ವಾದದ ಕಟು, ಅಂಧ ಮತ್ತು ಮೇಲ್ಪದರದ ಟೀಕಾಕಾರರಿಗೆ ಸಮರ್ಥ ಉತ್ತರವನ್ನು ನೀಡುತ್ತದೆ. ಈ ಕೃತಿಯನ್ನು ಕನ್ನಡಿಗರಿಗೆ ನೀಡಿರುವ ಡಾ॥ ಜಿ. ರಾಮಕೃಷ್ಣ ಅಭಿನಂದನಾರ್ಹರು. ಗತಕಾಲದ ಮತ್ತು ಸಮಕಾಲೀನ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ತತ್ವಶಾಸ್ತ್ರೀಯ ಘಟನೆಗಳು / ಉಲ್ಲೇಖಗಳು / ನಿದರ್ಶನಗಳ ಮೂಲಕ ಡಾ॥ ಜಿ. ಆರ್. ಮನಸ್ಸಿಗೆ ನಾಟುವಂತೆ, ಚುರುಕು ಮುಟ್ಟಿಸುವಂತೆ, ಅರ್ಥಸಂಪದ್ಭರಿತವಾದ ವಿಚಾರಗಳನ್ನು ಕಟ್ಟಿಕೊಟ್ಟಿದ್ದಾರೆ. ಎಡಸಿದ್ಧಾಂತದ ಪ್ರತಿಪಾದಕರಿಗೆ, ಕಾರ್ಯಕರ್ತರಿಗೆ, ಹೋರಾಟಗಾರರಿಗೆ ಈ ಕೃತಿ ಪ್ರಖರ ದೀವಿಗೆಯಾಗಿದೆ. ಕನ್ನಡ ಸಾರಸ್ವತಲೋಕದ ವೈಚಾರಿಕ ಕ್ಷೇತ್ರಕ್ಕೆ ಈ ಕೃತಿ ಉತ್ತಮ ಸೇರ್ಪಡೆ. ಕೃತಿ ರಚನೆ ಮಾಡಿರುವ ಡಾ॥ ಜಿ. ರಾಮಕೃಷ್ಣ ಮತ್ತು ಪ್ರಕಟ ಮಾಡಿರುವ ನವಕರ್ನಾಟಕ ಪ್ರಕಾಶನದವರಿಗೆ ಹಾರ್ದಿಕ ಅಭಿನಂದನೆಗಳು.

**ಮ. ಶ್ರೀ. ಮುರಳಿ ಕೃಷ್ಣ**<br>
ನಂ. ೩೮, ೩ನೇ ಕ್ರಾಸ್, ರಾಜ್ ಗಾರ್ಡನಿಯ ಲೇಔಟ್<br>
ತುರಹಳ್ಳಿ ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೬೧




ಖ್ಯಾತ ನ್ಯಾಯವಾದಿ ಹಾಗೂ ಲೇಖಕ ಶ್ರೀ ಎಸ್. ಆರ್. ಗೌತಮ್ ಅವರ ಮೂರು ಸಂಪುಟಗಳ 'ಲಾ ಇನ್ ಎವರಿಡೇ ಲೈಫ್' ಆಂಗ್ಲ ಕೃತಿಯ ಮರುಮುದ್ರಣದ ಬಿಡುಗಡೆ ಸಮಾರಂಭ ಬೆಂಗಳೂರು ವಕೀಲರ ಸಾಹಿತ್ಯ ಕೂಟದ ಆಶ್ರಯದಲ್ಲಿ ವಕೀಲರ ಭವನದಲ್ಲಿ ಇತ್ತೀಚೆಗೆ ನಡೆಯಿತು.

ಸಮಾರಂಭದಲ್ಲಿ ಭಾಗವಹಿಸಿದವರು ಎಡದಿಂದ ಬಲಕ್ಕೆ : ಎಸ್. ಆರ್. ಗೌತಮ್(ಲೇಖಕರು), ಜಸ್ಟೀಸ್ ಎ. ಜೆ. ಸದಾಶಿವ (ನಿವೃತ್ತ ನ್ಯಾಯಾಧೀಶರು, ಕರ್ನಾಟಕ ಉಚ್ಚ ನ್ಯಾಯಾಲಯ), ರವಿವರ್ಮ ಕುಮಾರ್ (ಎಡ್ವೊಕೇಟ್ ಜನರಲ್, ಕರ್ನಾಟಕ ಸರ್ಕಾರ), ಸಿ. ಪ್ರಕಾಶ್ (ಅಧ್ಯಕ್ಷರು, ಬೆಂಗಳೂರು ವಕೀಲರ ಸಾಹಿತ್ಯ ಕೂಟ)



# ಲಯ ಕಲಾಮನೆಯ ರೇಖಾ ಶಂಕರ



ಕಲೆ-ಸಾಹಿತ್ಯ-ಸಂಸ್ಕೃತಿಯಲ್ಲಿ ತನ್ನದೇ ಆದ ವೈಶಿಷ್ಟ್ಯತೆ ಪಡೆದುಕೊಂಡ, ಗದಗ ಜಿಲ್ಲೆಯ 'ಲಯಕಲಾಮನೆ, ರಾಜ್ಯ, ಅಂತರ್ ರಾಜ್ಯಗಳಲ್ಲೂ ಖ್ಯಾತಿ ಪಡೆಯಲು ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾದ ಬಹುಮುಖ ಪ್ರತಿಭೆಯ ಸರಳ ಜೀವಿ ಶಂಕರಗೌಡ ಪಾಟೀಲರ ಪರಿಶ್ರಮ ಮುಖ್ಯ ಕಾರಣ.

ಕಳೆದ 2 ದಶಕಗಳಿಂದಲೂ ಅದೇ ಹಳೆಯ ಸೈಕಲ್‌ನೊಂದಿಗೆ ಏಕಾಂಗಿಯಾಗಿ ಕುಂಚ ಹಿಡಿದು ಸಮೂಹ ಚಿತ್ರಕಲಾ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನ ಏರ್ಪಡಿಸಿ ನಾಡಿನ ಹಿರಿಕಿರಿಯ ಕಲಾವಿದರಿಗೆ ವೇದಿಕೆ ಕಲ್ಪಿಸಿಕೊಡುವ ಮೂಲಕ ಹೊಸತನಕ್ಕೆ ತುಡಿಯುವ ಕಲಾವಿದ ಶಂಕರಗೌಡ ಪಾಟೀಲ.





ಕಲೆಯನ್ನು ಆಲಯವಾಗಿಸಿ ''ಲಯ ಕಲಾಮನೆ'' ಸ್ಥಾಪಿಸಿ, ಚಿತ್ರಕಲೆ, ರಂಗಭೂಮಿ, ಸಂಗೀತ, ಸಾಹಿತ್ಯ ಕ್ಷೇತ್ರದಲ್ಲಿ ಅಳಿಲು ಸೇವೆ ಸಲ್ಲಿಸಬೇಕೆಂಬ ತುಡಿತದೊಂದಿಗೆ ಕಳೆದ 21 ವರ್ಷಗಳ ಪರ್ಯಂತ ಸೈಕಲಿನ ಪೆಡಲ್ ತುಳಿಯುತ್ತಲೇ ಇದ್ದಾರೆ. ನಾಡಿನ ತುಂಬಾ ಯಾವುದೇ ಸಾಹಿತ್ಯ, ಸಾಂಸ್ಕೃತಿಕ ಕಾರ್ಯಕ್ರಮಗಳಿದ್ದರೆ ಹೆಸರಾಂತ ಕಲಾವಿದರ ಕಲಾಕೃತಿಗಳೊಂದಿಗೆ ಹಗಲಿರುಳೆನ್ನದೆ ಪ್ರದರ್ಶನ ನೀಡಿ ತಮ್ಮ ಅನುಪಮ ಕಲಾ ಸೇವೆ ಸಲ್ಲಿಸುತ್ತಿದ್ದಾರೆ.





ಹಂಪಿ, ಆನೆಗುಂದಿ, ಪಟ್ಟದಕಲ್ ಉತ್ಸವ, ಮೈಸೂರು ದಸರಾದಲ್ಲಿ ಪ್ರದರ್ಶನ ನೀಡಿದ ಶ್ರೇಯಸ್ಸು ಪಾಟೀಲರದ್ದು. ಕಲಾವಿದ ಪಾಟೀಲರು ರಚಿಸಿದ ಕಲಾಕೃತಿಗಳು ದಾವಣಗೇರಿ, ಧಾರವಾಡ, ಕೊಪ್ಪಳ, ಮಂಗಳೂರು, ಬೆಳಗಾವಿ, ದೆಹಲಿಗಳಲ್ಲಿವೆ. ಇಟಲಿ, ಜರ್ಮನಿ, ಅಮೇರಿಕಾ ಮುಂತಾದ ವಿದೇಶಗಳಲ್ಲಿ ಸಂಗ್ರಹಗೊಂಡಿವೆ. ಆಕಾಶವಾಣಿ ಹೊಸಪೇಟೆ, ಬೆಂಗಳೂರು ದೂರದರ್ಶನ ಕೇಂದ್ರ, ಚಂದನ ವಾಹಿನಿಯ ಬೆಳಗು ಕಾರ್ಯಕ್ರಮಗಳು ಕಲಾವಿದರ ಕುರಿತು ಚೆಂದಾಗಿ ಬಿತ್ತರಿಸಿವೆ.

*– ಎ. ಎಸ್. ಮಕಾನದಾರ, ಬೆಟಗೇರಿ, ಗದಗ-582 202*







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

